# ಮುನ್ನುಡಿ

---

ವಿಜಯನಗರ ಚಕ್ರಾಧಿಪತ್ಯದ ಸಂಬಂಧವಾಗಿ ನಾನು ಬರೆದಿರುವ ಗ್ರಂಥಗಳಲ್ಲಿ ಈ ಅಸ್ತಮಾನ ಎಂಬುದು ಐದನೆಯ ಗ್ರಂಥ ಗ್ರಂಥಕರ್ತರುಗಳು ಗ್ರಂಥರಚನೆ ಮಾಡುವಾಗ ಅವರ ದೃಷ್ಟಿಯಂತೆ ಅವರವರು ಒಂದೊಂದು ಮಾರ್ಗವನ್ನು ಹಿಡಿಯುತ್ತಾರೆ ಹಾಗೆ ನಾನು ಹಿಡಿದಿರುವ ಮಾರ್ಗದಲ್ಲಿ ಮೊದಲನೆಯದು ವಿಜಯನಗರ ಚಕ್ರಾಧಿಪತ್ಯವೆಂದರೆ ಧರ್ಮ ಚಕ್ರಾಧಿಪತ್ಯ. ಮತ್ತೊಂದು ಮುಖ್ಯ ಅಂಶವೆಂದರೆ ಹಿಂದೂಗಳ ಮಹೋನ್ನತಸ್ಥಿತಿ ಇವೆರಡು ದೃಷ್ಟಿಗಳನ್ನು ಇಟ್ಟುಕೊಂಡೇ ನಾನು ಈ ಗ್ರಂಥಮಾಲೆಯನ್ನು ರಚಿಸಿದ್ದೇನೆ. ನನ್ನ ದೃಷ್ಟಿಯಲ್ಲಿ ರಾಜರು ಅಷ್ಟು ಮುಖ್ಯವಲ್ಲ ಆದರೆ ರಾಜರ ಗುಣಾವಗುಣಗಳಿಂದ ರಾಜ್ಯದ ಪ್ರಕಾಶ ಮತ್ತು ಕತ್ತಲುಗಳು ಆಗಾಗ ಸಂಭವಿಸುತ್ತವೆ. ಅದು ಅನಿವಾರ್ಯ ಆದರೆ ಮುಖ್ಯ ಸೂತ್ರದಲ್ಲಿ ಮಾತ್ರ ವಿಶೇಷ ತಾರತಮ್ಯಗಳಿಲ್ಲವೆಂದೇ ನನ್ನ ಭಾವನೆ.

ಮಹಾತ್ಮಾ ಗಾಂಧಿಯವರು ಒಮ್ಮೆ ನನ್ನೊಡನೆ ಸಂಭಾಷಣೆ ಮಾಡುವಾಗ ಹೇಳಿದ್ದರು—"ಸ್ಥಾಪಕನ ತಪಸ್ಸು ಎಷ್ಟು ದಿನ ಉಳಿದಿರುತ್ತದೆಯೋ ಅಷ್ಟು ದಿನ ಸಂಸ್ಥೆಗಳು ಪ್ರಕಾಶಮಾನವಾಗಿರುತ್ತವೆ. ಧ್ಯೇಯವು ಮುಂದುವರಿದು ಹೋಗುತ್ತದೆ" ಎಂದು ಗಾಂಧಿಯವರ ತತ್ವನಿರೂಪಣವು ಸತ್ಯವೆಂದು ನಾನು ನಂಬಿದ್ದೇನೆ ಆದೇ ಸತ್ಯದೃಷ್ಟಿಯಿಂದ ಈ ವಿಜಯನಗರ ಸಾಮ್ರಾಜ್ಯವನ್ನು ಅಳೆದು ನೋಡಿದ್ದೇನೆ. ಮಹಾಮುನಿ ವಿದ್ಯಾರಣ್ಯರವರು ತಮ್ಮ ತಪಸ್ಸನ್ನು ಧಾರೆಯೆರೆದು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಆರು ಶತಮಾನಗಳಿಂದ ಹಿಂದುಗಳು ನಂಬಿರುವ ದೃಢವಾದ ನಂಬಿಕೆಯಿದು.

ಚರಿತ್ರಕಾರರು ತಮ್ಮ ತಮ್ಮ ಬುದ್ಧಿ ಮತ್ತು ಕಲ್ಪನೆಗಳಿಗನುಸಾರವಾಗಿ ಅತ್ತಿತ್ತ ಹೋಗಬಹುದು ತಪೋ ಮಹಿಮೆಗೆ ಅಷ್ಟು ಬೆಲೆ ಕೊಡದೇ ಇರಬಹುದು. ನಾನು ಮಾತ್ರ ಆ ತಪೋ ಮಹಿಮೆಗೆ ಸಂಪೂರ್ಣ ಬೆಲೆ

ಕೊಡುತ್ತೇವೆ. ಚರಿತ್ರಕಾರರಿಗೆ ನಮ್ಮ ಗ್ರಂಥವು ಒಪ್ಪಿಗೆಯಾಗದಿದ್ದರೆ ಅವರು ಬಿಟ್ಟುಬಿಡಬಹುದು ಅವರಿಗಾಗಿ ಅವರನ್ನು ತೃಪ್ತಿಪಡಿಸುವುದಕ್ಕಾಗಿ ನಾವು ಗ್ರಂಥ ಬರೆಯುತ್ತಿಲ್ಲ. ಆದರೆ ಚರಿತ್ರೆಯ ವಿದ್ವಾಂಸರಿಗೆ ನಮ್ಮ ಗ್ರಂಥವು ಅವರ ಶಾಸ್ತ್ರಕ್ಕೆ ಸರಿಹೊಂದುವುದಿಲ್ಲ—ಎಂದು ಹೇಳುವ ಅಧಿಕಾರವಿದೆ. ಅಲ್ಲಿ ನಾವು " ಯೂಯಂಯೂಯಂ ವಯಂವಯಂ " ಎಂದು ಹೇಳುತ್ತೇವೆ.

ಹಿಂದಿನ ಗ್ರಂಥಗಳಲ್ಲಿ ವಿಜಯನಗರದ ಸಿಂಹಾಸನನನ್ನು ಏರಿದ ಅರಸುಗಳು ಧರ್ಮಾತ್ಮರಾದವರೂ ಉಂಟು, ಧರ್ಮಭ್ರಷ್ಟರೂ ಉಂಟು ಅವರವರ ಕರ್ಮಗಳಿಗೆ ಅನುಸಾರವಾಗಿ ಕೀರ್ತಿ ಅಪಕೀರ್ತಿಗಳು ಅವರವರ ಬೆನ್ನಿಗೆ ಹತ್ತಿಕೊಂಡೇ ಬಂದಿದೆ. ಅದನ್ನು ನಮ್ಮ ಕಾದಂಬರಿಗಳು ಚಿತ್ರಿಸಿವೆ ಆದರೆ ಧರ್ಮಸಾಮ್ರಾಜ್ಯಕ್ಕೆ ಲೋಪಬರಲಿಲ್ಲ. ಸಾಮ್ರಾಜ್ಯಕ್ಕೆ ಕೊರತೆಯುಂಟಾಗಲೂ ಇಲ್ಲ ಸಾಮ್ರಾಜ್ಯವೈಭವ—ಧರ್ಮಗ್ಲಾನಿ ಇವೆರಡು ಗ್ರಂಥಗಳಲ್ಲಿ ಆ ಏರಿಳಿತಗಳನ್ನೂ ತಾರತಮ್ಯಗಳನ್ನೂ ಸ್ಪಷ್ಟವಾಗಿ ಕಾಣಬಹುದು

ಅಭ್ಯುದಯ ಎಂಬ ಕಾದಂಬರಿಯು ಕೃಷ್ಣದೇವರಾಯನ ಚರಿತ್ರೆಗೆ ಸಂಬಂಧಿಸಿದುದು. ಲೋಕವ್ಯವಹಾರ ದೃಷ್ಟಿಯಿಂದ ನೋಡಿದರೆ ಕೃಷ್ಣದೇವರಾಯನಂತಹ ಮಹಾಪ್ರಭುವು ಬೇರೊಬ್ಬನಿಲ್ಲ ಅವನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಸಂಪೂರ್ಣವಾಗಿದ್ದಿತು. ನಿಷ್ಕಂಟಕವಾಗಿದ್ದಿತು. ವಿಜಯನಗರಕ್ಕೇ ವಿರೋಧಿಗಳೆಂದುಕೊಳ್ಳುತ್ತಿದ್ದ ಮುಸಲ್ಮಾನರಾಗಲೀ ಅಥವಾ ಇತರ ಹಿಂದೂ ರಾಜರಾಗಲೀ ಪೂರ್ಣವಾಗಿ ಸೋತುಹೋಗಿ ಅಣಗಿ ಹೋಗಿದ್ದರು. ಗೋವಾದಲ್ಲಿ ರಾಜ್ಯಸ್ಥಾಪನೆ ಮಾಡಲು ಅತ್ಯಂತ ಸಾಹಸಪಟ್ಟ ಪೋರ್ಚುಗೀಸರೂ ಸಹ ಶರಣಾಗತರಾಗಿ ಹೋಗಿದ್ದರು ಆದರೆ ಪೋರ್ಚುಗೀಸರೂ ಇತರ ವಿದೇಶೀಯರೂ ಮುಸಲ್ಮಾನರೂ ಕೃಷ್ಣದೇವರಾಯನಲ್ಲಿ ಸ್ನೇಹ ಸೌಜನ್ಯಗಳಿಂದ ನಡೆದುಕೊಳ್ಳುತ್ತಿದ್ದರು. ಖಿಲವಾಗಿ ಹೋಗಿದ್ದ ಬಹುಮನಿ ಮೂಲಸಿಂಹಾಸನವನ್ನು ಕೃಷ್ಣದೇವರಾಯನು ಪುನರುಜ್ಜೀವನ ಗೊಳಿಸಿ ಯವನಸಿಂಹಾಸನ ಪ್ರತಿಷ್ಠಾಪನಾಚಾರ್ಯನೆಂಬ ಬಿರುದು ಪಡೆದಿದ್ದರು.

ಆದರೆ ಅವನ ಕಾಲದಲ್ಲಿಯೇ ಅವನು ತನ್ನ ಕೀರ್ತಿವೈಭವಗಳ ಅಸ್ತಮಾನವನ್ನು ಕಾಣಬೇಕಾಯಿತು ಅದಕ್ಕಾಗಿಯೇ ಈ ಕಾದಂಬರಿಗೆ ಅಸ್ತಮಾನವೆಂಬ ಹೆಸರು ಕೊಟ್ಟಿದ್ದೇನೆ.

ಕೃಷ್ಣದೇವರಾಯನು ತನ್ನ ಅತಿ ಬಾಲ್ಯವಯಸ್ಸಿನ ಮಗನಿಗೆ ಪಟ್ಟಕಟ್ಟಿ ತನ್ನ ಕುಲಕ್ಕೆ ಸಿಂಹಾಸನವನ್ನು ಭದ್ರಗೊಳಿಸಿಕೊಳ್ಳಬೇಕೆಂಬ ಸ್ವಾರ್ಥಕ್ಕೆ ಮನಗೊಟ್ಟಿದ್ದೂ, ತನ್ನ ಬಲಭುಜದಂತ ಅನೇಕ ಯುದ್ಧಗಳಲ್ಲಿ ಹೋರಾಡಿ ಸ್ವಾಮಿಭಕ್ತಿಯಿಂದ ನಡೆಯುತ್ತಿದ್ದ ಮಂತ್ರಿಯ ಕಣ್ಣು ಕೀಳಿಸಿದ್ದೂ ಈ ದೋಷಗಳಿಂದಲೇ ಅವನ ಅಸ್ತಮಾನವು ಪ್ರಾಪ್ತವಾಯಿತು. ಅದೇ ಕತೆ ಈ ಕಾದಂಬರಿಯಲ್ಲಿ ವರ್ಣಿತವಾಗಿದೆ ಅವನ ವಂಶದ ಕತೆಯೇ ಇಲ್ಲಿಗೆ ಮುಗಿದು ಹೋಗುತ್ತದ

ಮುಂದೆ ಇನ್ನು ಒಂದೇ ಒಂದು ದೊಡ್ಡ ಪ್ರಕರಣವಿದೆ. ಅದು ಅಳಿಯ ರಾಮರಾಯನ ರಾಜ್ಯಭಾರ. ಅತ್ಯಂತ ವೈಭವದಿಂದಲೂ ಶೌರ್ಯ ಪರಾಕ್ರಮಗಳಿಂದಲೂ ವಿರಾಜಮಾನವಾಗಿದ್ದ ವಿಜಯನಗರ ಸಂಸ್ಥಾನವು ತಾಳಿಕೋಟೆಯ ಯುದ್ಧದಿಂದ ಪರಿಸಮಾಪ್ತಿ ಹೊಂದುತ್ತದೆ.

ಈ ನನ್ನ ಐದು ಗ್ರಂಥಗಳನ್ನು ವಿಶ್ವಾಸದಿಂದ ಪ್ರಕಟಿಸಿದ ಮೈಸೂರಿನ ಸುಪ್ರಸಿದ್ಧ ಪ್ರಕಾಶಕರಾದ ಪ್ರಸಾದ್ ಪಬ್ಲಿಕೇಷನ್ಸ್‌ನ ಮಾಲೀಕರಿಗೆ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳು ಸಲ್ಲುತ್ತವೆ ನನ್ನ ಎಲ್ಲ ಕಾದಂಬರಿಗಳಿಗೂ ಆದರದಿಂದ ಪ್ರೋತ್ಸಾಹ ನೀಡುತ್ತಿರುವ ವಾಚಕರು ಈ ಗ್ರಂಥಕ್ಕೂ ವಿಶೇಷ ಪ್ರೋತ್ಸಾಹ ನೀಡುವರೆಂಬ ಪೂರ್ಣ ಭರವಸೆಯೂ ನನಗಿದೆ.

ಶಂಕರಪುರ,

18—2—1959

ಎಂ ಸೀತಾರಾಮಶಾಸ್ತ್ರಿ



ವಿಜಯನಗರದ ಸಾರ್ವಭೌಮನಾದ ಕೃಷ್ಣದೇವರಾಯನು ಹೊಸ
ನಗರಿಯೊಂದನ್ನು ನಿರ್ಮಾಣಮಾಡಿಸಿದ್ದನು. ಆ ನಗರದ ಹೆಸರು ನಾಗಲಾ
ಪುರಿ. ಅದು ಕೃಷ್ಣದೇವನ ಮಾತೆಯ ಹೆಸರಿನಲ್ಲಿ ನಿರ್ಮಿತವಾದ ನಗರಿ.
ಸಮೀಪದಲ್ಲಿಯೇ ಒಂದು ದೊಡ್ಡ ಕಾಲುವೆಯನ್ನು ನಿರ್ಮಾಣಮಾಡಿಸಿದ್ದನು.
ಇದೆಲ್ಲವೂ ಪೋರ್ಚುಗೀಸ್ ನಿಪುಣರ ನಿರ್ಮಾಣಕೌಶಲದ ಪ್ರತೀಕಗಳಾ
ಗಿದ್ದವು. ನಾಗಲಾಪುರದಲ್ಲಿಯೂ ಗುಡಿಗೋಪುರಗಳು ಸುವರ್ಣ ಶಿಖರ
ಗಳಿಂದಲೂ ಪತಾಕೆಗಳಿಂದಲೂ ಪರಿಶೋಭಿತವಾಗಿದ್ದವು. ಸಾರ್ವಭೌಮನ
ಪರಮಾಪ್ತವರ್ಗಕ್ಕೆ ಸೇರಿದ ಮಂತ್ರಿಗಳೂ, ಸೇನಾಧಿಪತಿಗಳೂ, ಶ್ರೀಮಂತರು
ಗಳೂ ಈ ಹೊಸ ರಾಜಧಾನಿಯಲ್ಲಿ ನೆಲಸುತ್ತಿದ್ದರು. ವ್ಯಾಪಾರಸಾಪಾರಗಳು
ನಾಗಲಾಪುರದಲ್ಲಿಯೇ ವಿಶೇಷವಾಗಿ ಬೆಳೆದಿದ್ದವು ವ್ಯಾಪಾರಕ್ಷೇತ್ರದಲ್ಲಿ
ರಾಜರ ಪ್ರೋತ್ಸಾಹದಿಂದ ಪೋರ್ಚುಗೀಸರ ಪ್ರಾಬಲ್ಯವು ವಿಶೇಷವಾಗಿದ್ದಿತು.
ಹಾಗೆಯೇ ಪೋರ್ಚುಗೀಸರ ಸ್ನೇಹದಿಂದ ಕೃಷ್ಣದೇವರಾಯನಿಗೆ ಉತ್ತಮೋ
ತ್ತಮವಾದ ಅಶ್ವಗಳು ಯುದ್ಧಸಾಮಗ್ರಿಗಳು ವಿಶೇಷವಾಗಿ ಬಂದು ಸೇರು
ತ್ತಿದ್ದವು. ದಖ್ಖನ್ನಿನಲ್ಲಿ ಕೃಷ್ಣದೇವರಾಯನ ಕಡೆಗೆ ಕಣ್ಣೆತ್ತಿನೋಡುವ
ಸಾಹಸವು ಬಹಮನಿ ಸುಲ್ತಾನರುಗಳಿಗಾಗಲೀ ಮತ್ತಾವ ರಾಜರಿಗಾಗಲೀ
ಇರಲಿಲ್ಲ. ರಾಯಚೂರಿನ ಯುದ್ಧದಲ್ಲಿ ಸೋತು ಬಿಜಾಪುರದ ಸುಲ್ತಾನ್
ಇಸ್ಮಾಯಿಲ್‌ಷಹನು ತನ್ನ ರಾಜಧಾನಿಗೆ ಹಿಂತಿರುಗಿದ್ದನು. ಹಾವು ಬುಟ್ಟಿ
ಯಲ್ಲಿಟ್ಟರೂ ಬುಸುಗುಟ್ಟದಿರದು ಎಂಬ ನಾಣ್ಣುಡಿಯಂತೆ ಇಸ್ಮಾಯಿಲ್
ಷಹನು ಕೃಷ್ಣದೇವರಾಯನನ್ನು ಹೇಗಾದರೂ ಅಣಗಿಸಿಡಬೇಕು. ಇಲ್ಲವೇ

ಸಮಭಾವದಿಂದಲಾದರೂ ವರ್ತಿಸುವಂತೆ ಮಾಡಬೇಕು' ಎಂದು ಹೊಂಚು ಹಾಕುತ್ತಿದ್ದನು. ಗೋಲ್ಕಂಡ ಅಹಮದ್‌ನಗರಗಳ ಸುಲ್ತಾನನಿಗಿಂತ ಬಿಜಾಪುರದ ಇಸ್ಮಾಯಿಲ್‌ಷಹನು ಅತ್ಯಂತ ಶೂರನೆಂದೂ ಸಾಮರ್ಥ್ಯಶಾಲಿಯೆಂದೂ ಹೆಸರು ಗಳಿಸಿದ್ದನು ಕೃಷ್ಣದೇವರಾಯನೊಡನೆ ಯುದ್ಧದಲ್ಲಿ ಪ್ರತ್ಯಕ್ಷ ಪರಾಜಯವನ್ನು ಹೊಂದಿದುದರಿಂದ ಇಸ್ಮಾಯಿಲ್‌ಖಾನನಿಗೆ ಬಹಳ ಅಪಮಾನವಾಗಿತ್ತು. ಅವನು ಖತಿಗೊಂಡು ಮತ್ತೆ ಮತ್ತೆ ಯುದ್ಧಪ್ರಯತ್ನಗಳನ್ನು ನಡೆಸುತ್ತಲೇ ಇದ್ದನು.

ಆ ಸಮಯದಲ್ಲಿ ಇಸ್ಮಾಯಿಲ್‌ಷಹನು ತನ್ನ ದರಬಾರಿನಿಂದ ಕೃಷ್ಣದೇವರಾಯನಲ್ಲಿಗೆ ರಾಯಭಾರಿಯನ್ನು ಕಳುಹಿಸಿಕೊಟ್ಟನು ಆ ರಾಯಭಾರಿಯು ವಿಜಯನಗರಕ್ಕೆ ಬಂದು ಸಾರ್ವಭೌಮನ ಸಂದರ್ಶನವನ್ನು ಕೋರಿ ಹೇಳಿ ಕಳಿಸಿದನು.

ನಾಗಲಾಪುರದಲ್ಲಿಯೇ ವಸತಿಮಾಡಿದ್ದ ಕೃಷ್ಣದೇವರಾಯನು ಒಂದು ತಿಂಗಳವರೆಗೆ ಉಪೇಕ್ಷೆಯಿಂದ ಸುಮ್ಮನಿದ್ದನು. ರಾಯಭಾರಿಯು ಪ್ರಾರ್ಥನೆಗಳ ಮೇಲೆ ಪ್ರಾರ್ಥನೆಗಳನ್ನೂ ಕಳಿಸುತ್ತಾ ತವಕಪಡುತ್ತಿದ್ದನು. ಕೃಷ್ಣದೇವರಾಯನು ಆ ರಾಯಭಾರಿಗೆ ದರ್ಶನವನ್ನು ಕೊಡಲು ಕೊನೆಯಲ್ಲಿ ಸಮ್ಮತಿ ಇತ್ತನು.

ವಿಜಯನಗರದ ಅರಸನು ಅತ್ಯಂತ ವೈಭವದಿಂದ ದರಬಾರಿನಲ್ಲಿ ಸಿಂಹಾಸನದ ಮೇಲೆ ಮಂಡಿಸಿದ್ದನು. ಮಂತ್ರಿಗಳು, ಸೇನಾಧಿಪತಿಗಳು, ಸಾಮಂತರು, ಶ್ರೀಮಂತರು ಎಲ್ಲರೂ ಸಭೆಯಲ್ಲಿ ಅನರ್ಘ ವಸ್ತ್ರಾಭರಣಗಳನ್ನು ಧರಿಸಿಕೊಂಡು ತಮ್ಮ ತಮ್ಮ ಸ್ಥಾನಗಳಲ್ಲಿ ಅಧ್ಯಕ್ಷತೆಯಿಂದ ಕುಳಿತಿದ್ದರು. ವಂದಿಮಾಗಧರು ಬಿರುದುಗಳನ್ನು ಹೊಗಳುತ್ತಾ ಪರಾಕು ಹೇಳುತ್ತಿದ್ದರು. ಸಭಾಮಧ್ಯದಲ್ಲಿ ರಾಜನರ್ತಕಿಯರ ನರ್ತನವಾಗುತ್ತಿದ್ದಿತು. ಸಭಾಮಂಟಪದ ಮಹಾದ್ವಾರದಲ್ಲಿ ವಾದ್ಯಘೋಷಗಳು ಮೊಳಿಯುತ್ತಿದ್ದವು. ದರಬಾರಿನ ಮುಂಭಾಗದ ಅಂಗಳದಲ್ಲಿ ಅಲಂಕೃತವಾದ ನೂರಾರು ಆನೆಗಳು, ಕುದುರೆಗಳು ದಿರಸುಗಳಿಂದ ಅಲಂಕೃತರಾದ ಆಯುಧಪಾಣಿಗಳಾದ ಪಟುಭಟರುಗಳು

ಸಾಲುಸಾಲಾಗಿ ನಿಂತಿದ್ದರು. ಹೊರಗಿನ ಮಹಾದ್ವಾರದಿಂದ ಸಭಾಭವನದ ವರೆಗೆ ವಿಶಾಲವಾದ ನಡುಮುಡಿಯು ಹಾಸಲ್ಪಟ್ಟಿದ್ದಿತು. ಬಿಜಾಪುರದ ರಾಯಭಾರಿಯು ಸಂಪ್ರದಾಯದಂತೆ ರಾಜಯೋಗ್ಯವಾದ ಖಿಲ್ಲತ್ತುಗಳನ್ನು ತೆಗೆಸಿಕೊಂಡು ಬಂದು ಸಿಂಹಾಸನದ ಎದುರಿಗಿರುವ ಪೀಠದ ಮೇಲೆ ಖಿಲ್ಲತ್ತುಗಳನ್ನು ಒಪ್ಪಿಸಿ ಮುಂಜರೆಮಾಡಿ ನಿಂತುಕೊಂಡನು. ಅಧಿಕಾರಿಗಳು ಆ ರಾಯ ಭಾರಿಯನ್ನು ಕೈಹಿಡಿದು ದರಬಾರಿನಲ್ಲಿ ರಾಯಭಾರಿಗಳನ್ನು ಕೂಡ್ರಿಸುವ ಆಸನದ ಮೇಲೆ ಕುಳ್ಳಿರಿಸಿದರು

ಅಂದಿನ ದರಬಾರಿನ ಕಾರ್ಯಕಲಾಪಗಳೆಲ್ಲವೂ ಪೂರೈಸಿದನಂತರ ಸುಲ್ತಾನನ ರಾಯಭಾರಿಯನ್ನು ಸಮ್ಮುಖಕ್ಕೆ ಕರೆತರುವಂತೆ ಕೃಷ್ಣದೇವ ರಾಯನು ಕಣ್ಣುಸನ್ನೆ ಮಾಡಿದನು.

ಬಿಜಾಪುರದ ರಾಯಭಾರಿಯು ಸಮ್ಮುಖಕ್ಕೆ ಬಂದುನಿಂತು ವಿಜಯ ನಗರದ ಮಹಾರಾಜರವರೇ! ಬಿಜಾಪುರದ ಸುಲ್ತಾನರಾದ ಇಸ್ಮಾಯಿಲ್ ಷಹರವರು ತಮ್ಮಲ್ಲಿಗೆ ಸ್ನೇಹದ ರಾಯಭಾರವನ್ನು ನನ್ನ ಮೂಲಕ ಕಳಿಸಿ ಕೊಟ್ಟಿದ್ದಾರೆ. ಅಪ್ಪಣೆಯಾದರೆ ವಿವರಗಳನ್ನು ಅರಿಕೆಮಾಡುತ್ತೇನೆ ಎಂದು ಸಲಾಂ ಮಾಡಿದನು.

ಕೃಷ್ಣದೇವನು ಒಂದು ಬಾರಿ ಗಂಭೀರದೃಷ್ಟಿಯಿಂದ ಸುತ್ತಲೂ ನೋಡಿ 'ಓಹೋ! ಬಿಜಾಪುರದ ಸುಲ್ತಾನರು ಮೈತ್ರಿಯ ರಾಯಭಾರವನ್ನು ಕಳುಹಿ ಸಿರು[illegible] ನಮಗೆ ಸಂತೋಷಕರವಾಗಿದೆ. ವಿವರಗಳನ್ನು ಹೇಳಬಹುದು' ಎಂದ[illegible] ನುಜ್ಞೆಯಿತ್ತನು.

[illegible]ಜಾಧಿರಾಜ ಮಹಾರಾಜರವರೇ! ಷಹಾನ್‌ಷಹಾ ಬಿಜಾಪುರದ ಸುಲ್ತಾನ್ ಇಸ್ಮಾಯಿಲ್‌ಷಹರವರ ಸೌಜನ್ಯಸಂದೇಶವು ಈ ರೀತಿಯಾಗಿದೆ ಪರಾಂಬರಿಸಬೇಕು :—

"ಬಿಜಾಪುರದ ಸುಲ್ತಾನರಾದ ನಾವು ವಿಜಯನಗರದ ಅರಸರೂ ಬಹುಕಾಲದಿಂದ ಸ್ನೇಹವನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುತ್ತೇವೆ.

ಯಾವ ವೈಷಮ್ಯಗಳೂ ಘರ್ಷಣೆಗಳೂ ಇರಲಿಲ್ಲ. ವಿಜಯನಗರದ ಪ್ರಭು ಗಳಾದ ತಾವು ಹಠಾತ್ತನೆ ನಮ್ಮ ಗಡಿಯನ್ನು ಅತಿಕ್ರಮಿಸಿ ಬಂದು ನಮ್ಮ ರಾಜ್ಯದ ಹಲವು ಭಾಗಗಳನ್ನೂ ಕೋಟೆಗಳನ್ನೂ ಆಕ್ರಮಿಸಿಕೊಂಡಿರುತ್ತೀರಿ. ನಮ್ಮ ರಾಜ್ಯದ ಮತ್ತು ರಾಜಭಂಡಾರದ ಸಂಪತ್ತನ್ನು ಸೂರೆಮಾಡಿರುತ್ತೀರಿ. ವಿಜಯನಗರದವರು ಸೌಜನ್ಯದಿಂದ ನಮ್ಮ ನಾಡನ್ನೂ ನಮ್ಮ ಕೋಟೆಗಳನ್ನೂ ನಮಗೆ ಬಿಟ್ಟುಕೊಡಬೇಕು. ನಮ್ಮಿಂದ ತೆಗೆದುಕೊಂಡುಹೋಗಿರುವ ಸಂಪತ್ತನ್ನೆಲ್ಲಾ ಹಿಂದಕ್ಕೆ ಒಪ್ಪಿಸಬೇಕು. ಯುದ್ಧದ ನಷ್ಟವನ್ನೂ ಯುದ್ಧ ಸಾಮಗ್ರಿಗಳನ್ನೂ ನಮಗೆ ಕೊಡಿಸಬೇಕು. ನಿಮ್ಮ ವಶದಲ್ಲಿ ಯುದ್ಧದ ಖೈದಿಗಳಾಗಿರುವ ನಮ್ಮ ಸೇನಾಧಿಪತಿಗಳನ್ನೂ ಮರ್ಯಾದೆಯಿಂದ ಹಿಂದಕ್ಕೆ ಕಳಿಸಿಕೊಡಬೇಕು. ಹೀಗೆ ಮಾಡಿದರೆ ಉಭಯರಾಜ್ಯಗಳ ಕ್ಷೇಮಕ್ಕೂ ಒಳ್ಳೆಯದಾಗುತ್ತದೆ. ಮುಂದೆಯೂ ವಿಜಯನಗರದ ಅರಸರೂ ಸುಲ್ತಾನರೂ ಸ್ನೇಹಸೌಹಾರ್ದಗಳನ್ನು ಬೆಳೆಸಿಕೊಂಡು ಬರಬಹುದು." ನಮ್ಮ ಸುಲ್ತಾನರು ಹೀಗೆ ಸಂದೇಶವನ್ನು ಕಳಿಸಿಕೊಟ್ಟಿದ್ದಾರೆ ಎಂದು ಹೇಳಿ ಉತ್ತರಕ್ಕಾಗಿ ಕೃಷ್ಣದೇವರಾಯನ ಮುಖವನ್ನೇ ನಿರೀಕ್ಷಿಸುತ್ತ ನಿಂತುಕೊಂಡನು.

ಕೃಷ್ಣದೇವರಾಯನು ರಾಯಭಾರಿಗಳೇ ನಿಮ್ಮ ಸುಲ್ತಾನರ ಕಾರ್ಯ ಭಾರವನ್ನು ಚೆನ್ನಾಗಿ ನೆರವೇರಿಸಿದ್ದೀರಿ ನಾವು ಸಂತೋಷದಿಂದ ಇದಕ್ಕೆ ಉತ್ತರ ಕೊಡಲು ಸಿದ್ಧರಾಗಿದ್ದೇವೆ ನಿಮ್ಮ ಸುಲ್ತಾನರ ಕೋರಿಕೆಗಳನ್ನೆಲ್ಲಾ ನಾವು ಈಡೇರಿಸಿ ಕೊಡಬಲ್ಲೆವು ಯುದ್ಧದಲ್ಲಿ ಗೆದ್ದಿರುವ ರಾಜ್ಯಗಳನ್ನು ಹಿಂದಕ್ಕೆ ಕೊಡುವುದು ನಮ್ಮ ವಶವಾಗಿರುವ ಸಂಪತ್ತನ್ನು ಸುಲ್ತಾನರಿಗೆ ದಾನಮಾಡುವುದು ರಣಕ್ಷೇತ್ರದಲ್ಲಿ ಬಂದಿಗಳಾಗಿ ಸಿಕ್ಕಿರುವ ಸೇನಾಧಿಪತಿ ಗಳನ್ನು ಬಿಟ್ಟುಕೊಡುವುದು ನಿಮ್ಮ ಸುಲ್ತಾನನು ಯುದ್ಧದಲ್ಲಿ ಸೋತು ಹೋಗಿ ಇದನ್ನೆಲ್ಲಾ ಹೇಳುತ್ತಿರುವುದು ವಿಚಿತ್ರವಾಗಿದೆ. ಈ ನಡವಳಿಕೆಯು ಬಹಮನಿ ಸುಲ್ತಾನರುಗಳಿಗೆ ಸ್ವಭಾವಸಿದ್ಧವಾಗಿಯೇ ಇದೆ. ನಿಮ್ಮ ಸುಲ್ತಾನರ ಮೇಲೆ ದರ್ಬಾರಿಗೆ ಬಂದು ಅವರ ತಲೆಯನ್ನು ನಮ್ಮ ಪಾದಗಳ ಮೇಲಿಟ್ಟು, ನಮ್ಮ ಪಾದಪೀಠವನ್ನು ಚುಂಬಿಸಿ ಪ್ರಾರ್ಥನೆ ಮಾಡಿದರೆ ಅವರ

ಈ ಎಲ್ಲ ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತೇವೆಂದು ತಿಳಿಸಿರಿ ಎಂದು ಹೇಳಿದನು.

ರಾಯಭಾರಿಯು ಅವಮಾನಿತನಾಗಿ ತಲೆತಗ್ಗಿಸಿಕೊಂಡು ದರಬಾರಿನಿಂದ ಹೊರಟು ಹೋದನು.

ರಾಯಭಾರಿಗೆ ಈ ಅವಮಾನಕರವಾದ ಉತ್ತರವನ್ನು ತನ್ನ ಪ್ರಭುವಿನ ಮುಂದೆ ತೆಗೆದುಕೊಂಡು ಹೋಗಿ ಹೇಳಲು ಧೈರ್ಯವಾಗಲಿಲ್ಲ ಅವನು ವಿಜಯನಗರದಲ್ಲಿಯೇ ನಿಂತುಬಿಟ್ಟನು.

ಬಿಜಾಪುರದಿಂದ ಮೇಲೆ ಮೇಲೆ ದೂತರು ಬಂದು ರಾಯಭಾರಿಯನ್ನು ಹಿಂತಿರುಗಿ ಬರಬೇಕೆಂದು ಒತ್ತಾಯಪಡಿಸುತ್ತಿದ್ದರು ಗೂಢಚಾರರ ಮೂಲಕ ಸುಲ್ತಾನನಿಗೆ ಕೃಷ್ಣದೇವರಾಯನ ದರಬಾರಿನಲ್ಲಿ ನಡೆದ ವಿದ್ಯಮಾನಗಳೆಲ್ಲವೂ ಸಿತಾಸಿತವಾಗಿ ತಿಳಿದಿದ್ದವು ರಾಯಭಾರಿಯು ಬಿಜಾಪುರಕ್ಕೆ ಹಿಂತಿರುಗಿ ಬಂದು ಸುಲ್ತಾನರ ಭೇಟಿಮಾಡಿ "ಜಹಾಪನಾ! ಆ ವಿಜಯನಗರದ ಅರಸನ ಸಮ್ಮುಖಕ್ಕೆ ನಾನು ಹೋದುದೇ ತಪ್ಪು. ಮಹಾರಾಜರಿಗಿರ ಬೇಕಾದ ಗಾಂಭೀರ್ಯವೇ ಆ ಕೃಷ್ಣದೇವರಾಯನಿಗಿಲ್ಲ ಆ ಅರಸನು ನನಗೆ ತಿಂಗಳ ಕಾಲದವಾದರೂ ಸಂದರ್ಶನವೀಯದೇ ಇದ್ದಾಗಲೇ ಸಂದೇಹವು ಮುಟ್ಟಿತು. ತಮ್ಮ ಅಪ್ಪಣೆಯಾದ ಕಾರ್ಯವನ್ನು ನಿರ್ವಹಣಮಾಡದೇ ಬಂದರೆ ಖಾವಂದಿರ ಆಗ್ರಹಕ್ಕೆ ಪಾತ್ರನಾಗುತ್ತೇನೆಂದು ಅತಿ ಪ್ರಯತ್ನಮಾಡಿ ಆ ರಾಜನ ಸಂದರ್ಶನವನ್ನು ಸಂಪಾದನೆ ಮಾಡಿದೆ. ಎಲ್ಲವೂ ನಿಷ್ಫಲ ವಾಯಿತು. ಅಪಮಾನವಾಯಿತು ಪ್ರಬಲವಾದ ಸೈನ್ಯವನ್ನು ತೆಗೆದುಕೊಂಡು ಹೋಗಿ ಯುದ್ಧಮಾಡಿ ಆ ರಾಜನನ್ನು ನಮ್ಮ ಬಂದೀಖಾನೆಯಲ್ಲಿ ಕಟ್ಟಿ ಹಾಕಿಸಿ ಬುದ್ಧಿ ಕಲಿಸಬೇಕು ಆಗ ಅವನ ಮಾತಿಗೆ ತಕ್ಕ ಉತ್ತರವನ್ನು ಕೊಡಬಹುದು ಎಂದು ಹೇಳಿದನು. ದೈನ್ಯದಿಂದ ಸುಲ್ತಾನನ ಕ್ಷಮಾಪಣೆ ಬೇಡಿದನು.

ಸುಲ್ತಾನನು ಈ ರಾಯಭಾರವು ವ್ಯರ್ಥವಾದುದರಿಂದ ಖಿನ್ನನಾಗಲಿಲ್ಲ. ಪ್ರಬಲಸೈನ್ಯವನ್ನು ಕಟ್ಟಿರುವ ಕೃಷ್ಣದೇವರಾಯನು ತನ್ನ ಸಂಧಾನಕ್ಕೆ ಏಕೆ

ಒಪ್ಪಿಕೊಳ್ಳುತ್ತಾನೆ. ಇದರಿಂದ ಅವನಿಗೇನು ಲಾಭವಿದೆ. ಕೃಷ್ಣದೇವರಾಯನೊಡನೆ ಹೇಗಾದರೂ ಯುದ್ಧ ಮಾಡಲೇಬೇಕು ಎಂದು ನಿರ್ಧಾರಮಾಡಿಕೊಂಡನು. ಇಸ್ಮಾಯಿಲ್‌ಷಹನು ತನ್ನ ತಾಯಿಯೊಡನೆ ಆಲೋಚನೆ ಮಾಡಿದನು. ಸುಲ್ತಾನನ ತಾಯಿ ಬೇಗಂಸಾಹೇಬಳು ಈಗ ತಾನೇ ನಮಗೂ ಕೃಷ್ಣದೇವನಿಗೂ ಯುದ್ಧವಾಗಿದೆ. ಪುನಃ ಯುದ್ಧವಾದರೂ ಅಷ್ಟೆ. ಅವನೂ ಪ್ರಬಲವಾದ ಸೈನ್ಯವನ್ನು ಕಟ್ಟಿದ್ದಾನೆ. ಅವನನ್ನು ಜಯಿಸಬೇಕಾದರೆ ಇರುವುದು ಎರಡೇ ಮಾರ್ಗಗಳು. ಬಹಮನಿ ಸುಲ್ತಾನರುಗಳೆಲ್ಲರನ್ನೂ ಒಟ್ಟುಗೂಡಿಸಿ ಕೃಷ್ಣದೇವನ ಮೇಲೆ ಯುದ್ಧಕ್ಕೆ ನಿಲ್ಲಬೇಕು. ಆಗ ಎಷ್ಟೋ ಮಂದಿ ಹಿಂದೂರಾಜರೂ ಪಾಳೆಯಗಾರರೂ ನಮ್ಮ ಕಡೆ ಸೇರುತ್ತಾರೆ. ನೀನು ಮಹಾಪರಾಕ್ರಮಿಯೆಂಬುದು ದಖ್ಖನ್ನಿನಲ್ಲೆಲ್ಲಾ ಪ್ರಸಿದ್ಧವಾಗಿದೆ. ಕೃಷ್ಣದೇವನನ್ನು ಅಣಗಿಸುವುದಕ್ಕೆ ಇದೊಂದೇ ರಾಜಮಾರ್ಗ. ಮತ್ತೊಂದು ಮಾರ್ಗವೆಂದರೆ ಮೋಸದಿಂದ ಕೃಷ್ಣದೇವನನ್ನು ಕೊಲ್ಲಿಸಿಬಿಡುವುದು.

ಇಸ್ಮಾಯಿಲ್‌ಷಹನು ಕೋಪದಿಂದ "ತಾಯೀ ಈ ದಖ್ಖನ್ನಿನಲ್ಲಿ ಎಂದೆಂದಿಗೂ ಈ ಸುಲ್ತಾನರುಗಳೆಲ್ಲಾ ಒಗ್ಗಟ್ಟಾದುದೇ ಇಲ್ಲ. ಅವರವರ ದಾರಿ ಅವರವರಿಗೆ. ಒಬ್ಬರಿಗಿಂತ ಮತ್ತೊಬ್ಬರು ಬಲು ಹೆಚ್ಚೆಂದುಕೊಳ್ಳುತ್ತಾರೆ. ಒಂದೊಂದುಬಾರಿ ತಾವಾಗಿಯೇ ಈ ವಿಜಯನಗರದವರೊಂದಿಗೆ ಸ್ನೇಹ ಬೆಳೆಸಿಕೊಳ್ಳುತ್ತಾರೆ. ಇವರೆಲ್ಲರೂ ಒಂದಾಗುವರೆಂಬ ಆಶೆಯನ್ನು ಸ್ವಪ್ನದಲ್ಲಿಯೂ ಇಟ್ಟುಕೊಳ್ಳಬೇಡ ತಾಯಿ. ಈಚೆಗೆ ಅಹಮದ್‌ನಗರದ ಸುಲ್ತಾನನು ವಿಜಯನಗರದ ಕೃಷ್ಣದೇವರಾಯನೊಂದಿಗೆ ಯುದ್ಧದಲ್ಲಿ ಸೋತು ಸಂಧಿ ಮಾಡಿಕೊಂಡಿದ್ದಾನೆ. ಗೋಲ್ಕಂಡದ ಸುಲ್ತಾನನಂತೂ ಯಾವಾಗಲೂ ಯುದ್ಧಕ್ಕೆ ತಪ್ಪಿಸಿಕೊಳ್ಳುವ ಹೇಡಿ. ಮುಸಲ್ಮಾನನಾಗಿ ಹುಟ್ಟಿದ ಮಾತ್ರಕ್ಕೆ ಅವನು ಪೌರುಷವಂತನಾದನೆ ? ಅವರಲ್ಲೆಲ್ಲಾ ಎಳ್ಳಷ್ಟೂ ಸತ್ವವಿಲ್ಲ. ನಾನೊಬ್ಬನೆ ಈ ಕೃಷ್ಣದೇವರಾಯನನ್ನು ಮುರಿದುಹಾಕಬಲ್ಲೆ. ಈಚೆಗೆ ನಡೆದ ಯುದ್ಧದಲ್ಲಿ ವಿಜಯನಗರದವರಿಗೆ ಜಯವಾಯಿತೆಂಬುದು ನಿಜ. ಆದರೆ ಜಯಗಳಿಸಿದವರು ಯಾರು ? ಆ ಹಾಳು ಪೋರ್ಚುಗೀಸರು. ಅವರಿಲ್ಲ

ದಿದ್ದರೆ ಇನ್ನಾರು ತಿಂಗಳುಗಳಾದರೂ ರಾಯಚೂರು ಕೋಟೆಯು ವಿಜಯ ನಗರದವರ ವಶವಾಗುತ್ತಿತ್ತೆ? ಆ ಪೋರ್ಚುಗೀಸರನ್ನು ಬೇರೆ ಮಾಡಿಡಬೇಕು. ಅಥವಾ ಅವರಮೇಲೆ ಮತ್ತಾರಾದರೂ ಪ್ರಬಲರನ್ನು ಯುದ್ಧಕ್ಕೆ ಬಿಟ್ಟು ನಾವು ಕೃಷ್ಣದೇವನ ಮೇಲೆ ಯುದ್ಧಮಾಡಬೇಕು ಕೃಷ್ಣದೇವನನ್ನು ಯುದ್ಧ ದಲ್ಲಿ ಜಯಿಸಿದಲ್ಲದೇ ನಾನು ಇನ್ನುಮೇಲೆ ನನ್ನ ಸಿಂಹಾಸನವನ್ನು ಏರುವುದೇ ಇಲ್ಲವೆಂದು ಸಂಕಲ್ಪಮಾಡಿದ್ದೇನೆ ತಾಯಿ! ಈ ರಾಜ್ಯಭಾರವೆಲ್ಲವನ್ನು ನೀನು ನಡೆಸಬಲ್ಲೆ. ಇದನ್ನೆಲ್ಲಾ ನಿನಗೆ ಒಪ್ಪಿಸುತ್ತಿದ್ದೇನೆ. ನಾನು ಯುದ್ಧ ಸನ್ನಾಹಗಳಿಗೆ ಹೊರಡುತ್ತೇನೆ. ನಮ್ಮರಮನೆಯಲ್ಲಿರುವ ಪ್ರತಿಯೊಂದು ಚಿಕ್ಕ ಕಾಸನ್ನು ಈ ಯುದ್ಧಕ್ಕಾಗಿ ವಿನಿಯೋಗಿಸಿಬಿಡುತ್ತೇನೆ. ಈ ಇಸ್ಮಾಯಿಲ್‌ಷಹನು ಎಂಥಹವನೆಂಬುದನ್ನು ಈ ಇಡೀ ಹಿಂದೂಸ್ಥಾನದಲ್ಲಿ ಒಮ್ಮೆ ತೋರಿಸುತ್ತೇನೆ. ಇಲ್ಲದಿದ್ದರೆ ನಾನು ಬದುಕಿದ್ದು ಫಲವೇನು?" ಎಂದು ಹೇಳಿ ರಾಜ್ಯಭಾರವನ್ನೆಲ್ಲಾ ತಾಯಿಗೆ ಒಪ್ಪಿಸಿದನು.

ಇಸ್ಮಾಯಿಲ್‌ಷಹನು ಅಸದ್‌ಖಾನನೊಡನೆ ಸೇರಿಕೊಂಡು ಯುದ್ಧ ಪ್ರಯತ್ನಗಳಿಗೆ ತೊಡಗಿದನು.

ಅಸದ್‌ಖಾನನು ಇಸ್ಮಾಯಿಲ್‌ಷಹನೊಡನೆ ಬೇಗಂಸಾಹೇಬರು ಹೇಳಿದ ಉಪಾಯವು ಸರಿಯಾಗಿದೆಯೆಂದೂ ಗೋಲ್ಕಂಡ ಅಹಮದ್ ನಗರಗಳ ಸುಲ್ತಾನರುಗಳ ಸಹಾಯವನ್ನು ನೆಪಮಾತ್ರಕ್ಕಾದರೂ ಹೊಂದಿದರೆ ಯುದ್ಧದಲ್ಲಿ ಒಳ್ಳೆಯದಾಗುವುದೆಂದೂ ಆಲೋಚನೆ ಮಾಡಿ ಇಸ್ಮಾಯಿಲ್‌ಷಹನ ಅಪ್ಪಣೆ ಪಡೆದು ಗೋಲ್ಕಂಡಕ್ಕೆ ತಾನೇ ಹೊರಟನು.

ಗೋಲ್ಕಂಡದಲ್ಲಿ ಸುಲ್ತಾನನು ಅಸದ್‌ಖಾನನನ್ನೂ ಆದರದಿಂದ ಬರಮಾಡಿಕೊಂಡು ಅವನಿಗೆ ತನ್ನ ಅರಮನೆಯಲ್ಲಿ ರಾಜೋಪಚಾರಗಳನ್ನು ಮಾಡಿಸಿದನು. ಅಸದ್‌ಖಾನನು ಗೋಲ್ಕಂಡ ಸುಲ್ತಾನರ ಸಮಯವನ್ನು ಕಾದು ಮಾತುಕಥೆಗಳನ್ನಾಡಿ ಅವರ ಮನ ಒಲಿಸಿಕೊಂಡನು. ಗೋಲ್ಕಂಡದ ಸುಲ್ತಾನನು ಅಸದ್‌ಖಾನನೊಡನೆ ಮುಚ್ಚುಮರೆಯಿಲ್ಲದೇ ಹೇಳಿದನು—
"ಇಸ್ಮಾಯಿಲ್‌ಷಹನು ನಮ್ಮನ್ನು ತೃಣೀಕರಿಸಿ ನೋಡುತ್ತಾನೆ. ವಿಜಯ

ನಗರದವರು ಯಾವಾಗಲೂ ಬಿಜಾಪುರದ ಸುಲ್ತಾನನ ಮೇಲೆಯೇ ಕಣ್ಣಿಟ್ಟಿದ್ದಾರೆ. ಅವರವರಿಗೆ ನಿತ್ಯವೂ ಯುದ್ಧವು ತಪ್ಪಿದ್ದೇ ಅಲ್ಲ. ಇಸ್ಮಾಯಿಲ್ ಷಹನ ಮಿತಿಮೀರಿದ ಅಹಂಕಾರದಿಂದಲೇ ಅವನಿಗೆ ಈ ಅವಮಾನವು ಸಂಭವಿಸಿತು " ಎಂದು ಮಾತನ್ನೆತ್ತಿದನು.

ಅಸದ್ ಖಾನನು ಮಾನ್ಯ ಸುಲ್ತಾನರವರೇ ನೀವು ಹೇಳಿದ ಮಾತುಗಳು ಪ್ರತ್ಯಕ್ಷ ನಿದರ್ಶನಗಳಾಗಿಯೇ ಇವೆ ಆದರೆ ಬಹಮನಿ ರಾಜ್ಯಗಳೆಲ್ಲವೂ ಒಂದಾಗದೇ ಕೃಷ್ಣದೇವರಾಯನನ್ನು ಸೋಲಿಸುವುದು ಯಾರಿಂದಲೂ ಸಾಧ್ಯವಿಲ್ಲ ನೀವೆಲ್ಲರೂ ಒಂದಾಗಬೇಕು. ಬಿಜಾಪುರದ ಸರ್ವಸೈನ್ಯಾಧಿಕಾರವೂ ನನ್ನಲ್ಲಿದೆ. ನಮ್ಮ ಸುಲ್ತಾನರವರ ಮಾತೆಯುವರೂ ನೀವೆಲ್ಲರೂ ಸೇರಿ ವಿಜಯನಗರದ ಮೇಲೆ ಯುದ್ಧಮಾಡದಿದ್ದರೆ ನಮ್ಮ ಒಂದು ರಾಜ್ಯವೂ ಉಳಿಯುವುದಿಲ್ಲವೆಂದು ಹೇಳುತ್ತಾರ ನೀವೇ ಮುಂದೆ ನಿಂತು ಯುದ್ಧ ಮಾಡಿರಿ. ನಾವು ನಮ್ಮ ಸೈನ್ಯವನ್ನೆಲ್ಲಾ ತೆಗೆದುಕೊಂಡು ನಿಮ್ಮ ಸಹಾಯಕ್ಕೆ ಬರುತ್ತೇವೆ. ನಮ್ಮ ಅರಮನೆಯ ಭಂಡಾರದ ಹಣವನ್ನೆಲ್ಲಾ ನಿಮಗೊಪ್ಪಿಸುತ್ತೇವೆ ನಾನು ದೇವರ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಿಮ್ಮ ಆಜ್ಞೆಯಂತೆ ನಡೆಯಲು ಒಪ್ಪಿರುತ್ತೇವೆ.

ಸುಲ್ತಾನನು ಸೇನಾಧಿಪತಿಗಳೇ ! ನೀವು ಹೇಳುವುದು ನ್ಯಾಯಸಮ್ಮತವಾಗಿಲ್ಲ. ನಮಗೂ ವಿಜಯನಗರದವರಿಗೂ ಯುದ್ಧಕ್ಕೆ ಕಾರಣವಿಲ್ಲ. ನಿಮಗೆ ಪ್ರತ್ಯಕ್ಷ ಕಾರಣವಿದೆ ರಾಯಚೂರು ಮುದ್ಗಲ್ ಕೋಟೆಗಳು ಬಹುಕಾಲದಿಂದ ನಿಮ್ಮ ಅಧೀನದಲ್ಲಿತ್ತು. ರಾಯಚೂರು ಕೋಟೆಯನ್ನು ಕೃಷ್ಣದೇವನು ವಶಪಡಿಸಿಕೊಂಡಿದ್ದಾನೆ ನಿಮಗೂ ಅವರಿಗೂ ಬಲವಾದ ಯುದ್ಧವಾಗಿದೆ. ನಿಮಗೆ ಯುದ್ಧಕ್ಕೆ ಕಾರಣವುಂಟು ನೀವೇ ಮುಂದುವರೆಯಬೇಕು. ನಿಮ್ಮ ಸುಲ್ತಾನರು ನಮ್ಮೊಡನೆ ಸ್ನೇಹ ಸೌಜನ್ಯಗಳಿಂದಿದ್ದರೆ, ನಾವೂ ನಿಮಗೆ ಪ್ರತ್ಯಕ್ಷ ಸಹಾಯವನ್ನು ನೀಡುತ್ತೇವೆ ಎಂದು ಭರವಸೆಯಿತ್ತನು.

ಅಸದ್ ಖಾನನು, " ನಮ್ಮ ಸುಲ್ತಾನರು, ಯುದ್ಧಕ್ಕೆ ಸಿದ್ಧರಾಗಿ ಹೊರಟೇ ಇದ್ದಾರೆ. ನೀವು ಅದೇ ರಣಕ್ಷೇತ್ರದಲ್ಲಿ ಸೈನ್ಯವನ್ನು ತಂದು

ಯುದ್ಧಕ್ಕೆ ನಿಲ್ಲುವ ಅಗತ್ಯವಿಲ್ಲ. ಪೋರ್ಚುಗೀಸರು ಹೆಜ್ಜೆ ಹೆಜ್ಜೆಗೂ ನಮಗೆ ತೊಂದರೆಯನ್ನುಂಟುಮಾಡುತ್ತಿದ್ದಾರೆ. ನಿಜವಾಗಿಯೂ ವಿಜಯನಗರದವರಿಗಿಂತಲೂ ಪೋರ್ಚುಗೀಸರೇ ನಮಗೆ ಪ್ರಬಲರಾದ ಶತ್ರುಗಳಾಗಿದ್ದಾರೆ. ರಾಯಚೂರು ಕೋಟೆಯು ನಮ್ಮ ಕೈತಪ್ಪಿಹೋದುದು ಆ ಪೋರ್ಚುಗೀಸರ ಸಾಮರ್ಥ್ಯದಿಂದಲೇ. ಇತ್ತ ಪಶ್ಚಿಮತೀರದ ಕಡೆಗೆ ಯಾವುದಾದರೂ ಕಾರಣದಿಂದ ನೀವು ಪೋರ್ಚುಗೀಸರ ಮೇಲೆ ಯುದ್ಧವನ್ನು ಹೂಡಿದರೆ, ಅತ್ತ ನಾವು ವಿಜಯನಗರದವರನ್ನು ವಿಚಾರಿಸಿಕೊಳ್ಳುತ್ತೇವೆ. ಆದರಿಂದ ಈ ಯುದ್ಧಕ್ಕೆ ಬಹಳ ಸಹಾಯವಾದಂತಾಗುವುದು.

ಸುಲ್ತಾನನು ಪೋರ್ಚುಗೀಸರೊಡನೆ, ಪ್ರತ್ಯಕ್ಷ ಯುದ್ಧಮಾಡುವುದಕ್ಕೆ ನಮಗೆ ಕಾರಣವಿಲ್ಲ. ಅವರು ನಮ್ಮೊಡನೆ ಸಂಧಿಮಾಡಿಕೊಂಡಿದ್ದಾರೆ. ಆ ಸಂಧಿಯಪ್ರಕಾರ ತಪ್ಪದೇ ನಡೆದುಕೊಳ್ಳುತ್ತಿದ್ದಾರೆ. ಅದಕ್ಕೆ ನಾನೊಂದು ಉಪಾಯವನ್ನು ಹುಡುಕುತ್ತೇನೆ. ಪಶ್ಚಿಮತೀರದಲ್ಲಿ ಬಹುಕಾಲದಿಂದಲೂ ನೆಲಸಿ ವ್ಯಾಪಾರಸಂಚಾರಗಳನ್ನು ಮಾಡಿಕೊಂಡು ಇರುವ ಮೂರ್ ಜನರನ್ನು ಪೋರ್ಚುಗೀಸರು ಬಹಳ ಹಿಂಸೆಪಡಿಸುತ್ತಿದ್ದಾರೆ. ಅವರ ಕೋರಿಗಳು ಒಂದಾದರೂ ಇಲ್ಲದಂತೆ ಹಾಳುಮಾಡಿದ್ದಾರೆ. ಮೂರ್ ವರ್ತಕರು ವ್ಯಾಪಾರಕ್ಕೆ ಕೈಯಿಡದಂತೆ ಮಾಡಿಟ್ಟಿದ್ದಾರೆ. ಆ ಜನರು ಕೂಲಿನಾಲಿಗಳನ್ನು ಮಾಡಿಕೊಂಡು ಹೊಟ್ಟೆ ಹೊರೆಯಬೇಕು. ಇಲ್ಲವೇ ಆ ತೀರಪ್ರದೇಶಗಳನ್ನೇ ಬಿಟ್ಟುಹೋಗಬೇಕು. ಹೀಗಾಗಿದೆ, ಆ ಜನರಗತಿ ಇದಕ್ಕೆಲ್ಲಾ ಪೋರ್ಚುಗೀಸರೇ ಕಾರಣ. ಆ ಮೂರ್ ಜನರಿಗೂ ಪೋರ್ಚುಗೀಸರಿಗೂ ಜಗಳವನ್ನು ತಂದೊಡ್ಡುವಂತೆ ಮಾಡುತ್ತೇವೆ. ಮೂರ್ ಜನರು ಮಹಾ ಸಾಹಸಿಗಳು ಅವರು ಪೋರ್ಚುಗೀಸ್ ಕೋರಿಗಳನ್ನೂ ಕೂಡಾ ನಾಶಪಡಿಸುವಷ್ಟು ಸಮರ್ಥರು. ಹಡಗುಗಳ ಕಳ್ಳತನದಲ್ಲಿ ಮೂರ್ ಜನರು ಎತ್ತಿದಕೈ. ವ್ಯಾಪಾರಕ್ಕೆ ಪೆಟ್ಟುಕೊಟ್ಟರೆ, ಪೋರ್ಚುಗೀಸರು ಬಗ್ಗುತ್ತಾರೆ. ಆಗ ಅವರೇ ನಮ್ಮಲ್ಲಿಗೆ ಬರುತ್ತಾರೆ. ನಾವು ಇಂಥದೊಂದು ಪ್ರಬಲವಾದ ಆತಂಕವನ್ನು ಪೋರ್ಚುಗೀಸರ ಮೇಲೆ ತಂದೊಡ್ಡಬಲ್ಲೆವು."

ಅಸದ್ ಖಾನನು ನಿಮ್ಮ ಯೋಚನೆಯು ಬಹಳ ಸರಿಯಾಗಿದೆ. ಮೊದಲು ಪೋರ್ಚುಗೀಸರ ಮೇಲೆ ಮೂರ್ ಜನರು ಹಲ್ಲಾಮಾಡಿದ ಸಮಾಚಾರವು ತಿಳಿದಮೇಲೆಯೇ ನಾವು ವಿಜಯನಗರದ ಮೇಲೆ ನಮ್ಮ ಸೈನ್ಯಗಳನ್ನು ಹೊರಡಿಸುತ್ತೇವೆ. ನಿಮ್ಮ ಬೆಂಬಲದಿಂದಲೇ ಈ ಬಾರಿ ಬಿಜಾಪುರದ ಸುಲ್ತಾನರು ಯುದ್ಧಕ್ಕೆ ಹೊರಡುತ್ತಾರೆ.

ಗೋಲ್ಕಂಡದ ಸುಲ್ತಾನನು ಸಮಯ ಬಂದು ನೀವು ಅಪೇಕ್ಷಿಸಿದರೆ ನಮ್ಮ ಸೈನ್ಯವನ್ನು ಯುದ್ಧಕ್ಕೆ ಕಳಿಸುತ್ತೇವೆ. ಆದರೆ ಯುದ್ಧಕ್ಕೆ ಹೊರಡು ವಾಗಲೇ ಎರಡು ಸೈನ್ಯಗಳೂ ಒಟ್ಟಿಗೆ ಸೇರಿ ಹೊರಡಬಾರದು. ಏಕೆಂದರೆ ಪರಸ್ಪರ ನಮ್ಮ ಸೈನಿಕರಲ್ಲಿಯೇ ವೈಮನಸ್ಯವು ಬರುತ್ತದೆ. ಸೇನಾಪತಿಗಳಲ್ಲಿ ಮಾತ್ಸರ್ಯವು ಹುಟ್ಟುತ್ತದೆ. ನಮ್ಮನಮ್ಮಲ್ಲಿಯೇ ಭೇದವನ್ನು ಕಲ್ಪಿಸಲು ಶತ್ರುಗಳಿಗೆ ನಾವೇ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ ಎಂದು ಹೇಳಿದನು.

ಖಾನನು ಸುಲ್ತಾನನೊಡನೆ ಸ್ನೇಹಮಾಡಿಕೊಂಡು ಅವನ ಭರವಸೆ ಗಳನ್ನೆಲ್ಲಾ ತೆಗೆದುಕೊಂಡು ಬಿಜಾಪುರಕ್ಕೆ ಹಿಂತಿರುಗಿದನು.

ಗೋಲ್ಕಂಡದ ಸುಲ್ತಾನನು ವಿಶ್ವಾಸದಿಂದ ಕಳುಹಿಸಿಕೊಟ್ಟ ಖಿಲ್ಲತ್ತು ಗಳನ್ನೂ ರತ್ನಾಭರಣಗಳನ್ನೂ ಇಸ್ಮಾಯಿಲ್ ಷಹನ ಮಾತೆಯವರಿಗೂ ಇಸ್ಮಾಯಿಲ್ ಷಹನಿಗೂ ಒಪ್ಪಿಸಿದನು. ಅಲ್ಲಿ ನಡೆದ ಮಾತುಕಥೆಗಳನ್ನೆಲ್ಲಾ ವಿಸ್ತಾರವಾಗಿ ವಿವರಿಸಿದನು.

ಇಸ್ಮಾಯಿಲ್ ಷಹನು ಅಹಮುದ್ ನಗರಕ್ಕೇಕೆ ಹೋಗಲಿಲ್ಲ ಎಂದು ಪ್ರಶ್ನೆಮಾಡಿದನು.

ಅಸದ್ ಖಾನನು ಗೋಲ್ಕಂಡದ ಸುಲ್ತಾನರೇ ಅದನ್ನು ನಿರೋಧಿ ಸಿದರು. ಅಹಮುದ್ ನಗರದ ಸುಲ್ತಾನರು ಆ ಪ್ರಾಂತ್ಯದಲ್ಲಿರುವ ಹಿಂದೂ ರಾಜರೊಡನೆ ಹೋರಾಟಗಳನ್ನು ನಡೆಸುತ್ತಿದ್ದಾರೆ. ಅವರು ನಮ್ಮಕಡೆಗೆ ಬಂದರೂ ಲಾಭವೇನೂಇಲ್ಲ. ಆ ಹಿಂದೂ ರಾಜರೆಲ್ಲರೂ ಒಗ್ಗಟ್ಟಾಗಿ ವಿಜಯ ನಗರದವರಕಡೆಗೆ ಸೇರಿಕೊಳ್ಳುವ ಸಂಭವವೂ ಉಂಟು ಎಂದು ಸುಲ್ತಾನರೇ ಹೇಳಿದರು. ಅಹಮುದ್ ನಗರದ ಸುಲ್ತಾನರಿಗೆ ಒಂದು ಉಪಚಾರಪತ್ರ

ಬರೆದು ಅವರ ಸ್ನೇಹ ಸೌಹಾರ್ದಗಳನ್ನು ಕೋರಿ ರಾಯಭಾರಿಗಳನ್ನು ಕಳಿಸಿ ಕೊಡೋಣ ಅಷ್ಟೇ ಸಾಕು ಎಂದು ಸಲಹೆಕೊಟ್ಟನು. ಅಸದ್ ಖಾನನು ಹಗಲಿರುಳೂ ಶ್ರಮಪಟ್ಟು ಪ್ರಬಲವಾದ ಸೈನ್ಯವನ್ನು ಜೊತೆಗೊಳಿಸಿದನು. ಎಲ್ಲ ಕಡೆಗಳಿಂದಲೂ ಸಾಧ್ಯವಾದಷ್ಟು ಆಯುಧಗಳನ್ನೂ ಯುದ್ಧಸಾಮಗ್ರಿ ಗಳನ್ನೂ ಸಂಗ್ರಹಿಸಿದನು. ವಿಶೇಷ ಹಣಕೊಟ್ಟು ತಮ್ಮ ಕಡೆಯವರನ್ನು ಗೋಪ್ಯವಾಗಿ ಭಟ್ಕಲ್ ಗೋವಾ ಮುಂತಾದ ತೀರಪ್ರದೇಶಗಳಿಗೆ ಕಳುಹಿಸಿ ಕೊಟ್ಟು ಮೂರ್ ಜನರನ್ನು ಎತ್ತಿಕಟ್ಟಲು ಪ್ರಯತ್ನ ನಡೆಸಿದನು.

## ೨

ಬಿಜಾಪುರದ ಸುಲ್ತಾನ ಇಸ್ಮಾಯಿಲ್‌ಷಹನು ಪ್ರಚಂಡವಾದ ಸೈನ್ಯ ವನ್ನೂ ಕಟ್ಟಿಕೊಂಡು ವಿಜಯನಗರದ ಮೇಲೆ ಯುದ್ಧಕ್ಕೆ ಹೊರಟಿದ್ದಾನೆಂದು ಕೃಷ್ಣದೇವರಾಯನಿಗೆ ದೂತರು ಸಮಾಚಾರವನ್ನು ಮುಟ್ಟಿಸಿದರು ತಪ್ಕೊಡನೆ ಯುದ್ಧದಲ್ಲಿ ಸೋತು ಓಡಿಹೋಗಿರುವ ಇಸ್ಮಾಯಿಲ್‌ಷಹನು ಇಷ್ಟುಬೇಗ ವಿಜಯನಗರದ ಮೇಲೆ ಯುದ್ಧಕ್ಕೆ ಬರುತ್ತಿದ್ದಾನೆಂಬುದನ್ನು ಕೇಳಿ ಕೃಷ್ಣದೇವ ರಾಯನಿಗೆ ಆಶ್ಚರ್ಯವಾಯಿತು ಮಂತ್ರಿಗಳನ್ನೂ ಸೇನಾಧಿಪತಿಗಳನ್ನೂ ಕರೆಸಿ ಆಲೋಚನೆ ಮಾಡಿದನು. ಇಸ್ಮಾಯಿಲ್‌ಷಹನು ಯುದ್ಧಕ್ಕೆ ಬರುತ್ತಿರು ವುದು ಅವರಿಗೂ ವಿಚಿತ್ರವಾಗಿಯೇ ಕಂಡಿತು ಮಂತ್ರಿಗಳು ನೀವು ಬಿಜಾ ಪುರದ ರಾಯಭಾರಿಯೊಡನೆ, ಭರದರ್ಬಾರಿನಲ್ಲಿ ಹೇಳಿದ ಮಾತುಗಳು ಅವನನ್ನು ಕೆರಳಿಸಿವೆ. ಆ ಅವಮಾನದಿಂದ ಉದ್ವಿಗ್ನನಾಗಿ ಸುಲ್ತಾನನು ಯುದ್ಧಕ್ಕೆ ಬರುತ್ತಿದ್ದಾನೆ. ನಾವೇ ಹೋಗಿ ಅವನನ್ನು ಓಡಿಸಿ ಬರುತ್ತೇವೆ. ಅಪ್ಪಣೆ ಕೊಡೋಣವಾಗಲಿ ಎಂದು ಹೇಳಿದರು.

ಕೃಷ್ಣದೇವರಾಯನು ಇಲ್ಲ! ಹಾಗಾಗಕೂಡದು. ನಾನು ಆಗ ಅವನನ್ನು ಕೊನೆಮುಟ್ಟಿನದೇ ಬಂದುದೇ ತಪ್ಪಾಯಿತು. ಅವನಿಗೆಷ್ಟು ಸಾಮರ್ಥ್ಯ ವಿದೆಯೋ ನೋಡುತ್ತೇನೆ. ನಮ್ಮ ಸೈನ್ಯಗಳು ಬಿಜಾಪುರದ ಕಡೆಗೆ ಹೊರಡಲಿ. ನಾನೇ ಮುಂದಾಗಿ ಹೊರಡುತ್ತೇನೆ ಎಂದು ಶಪಥಪೂರ್ವಕವಾಗಿ ಹೇಳಿ ಹೊರಡಲು ಸಿದ್ಧನಾದನು.

ಸುಲ್ತಾನ್ ಇಸ್ಮಾಯಿಲ್‌ಷಹನಿಗೆ ವಿಜಯನಗರದ ದಂಡು ಹೊರಟೇ ಬಿಟ್ಟದೆಯೆಂಬ ಸುದ್ದಿ ತಿಳಿಯುತ್ತಲೇ ಅವನೂ ಸೈನ್ಯ ಸಮೇತನಾಗಿ

ಹೊರಟನು. ಅಸದ್‌ಖಾನನೇ ಸೇನಾಧಿಪತಿಯಾಗಿ ನೇಮಿಸಲ್ಪಟ್ಟನು. ಸುಲ್ತಾನನ ಮಾತೆಯು ಮಗನೊಂದಿಗೆ ರಣಕ್ಷೇತ್ರಕ್ಕೆ ಹೊರಟಳು. ಸುಲ್ತಾನನು ತನ್ನ ದಂಡನ್ನು ಬಿಜಾಪುರದ ರಾಜ್ಯದ ಎಲ್ಲೆಕಟ್ಟೆಗೆ ತೆಗೆದು ಕೊಂಡು ಬಂದು ಬೀಡುಬಿಟ್ಟನು.

ಕೃಷ್ಣದೇವರಾಯನ ಸೈನ್ಯಗಳು ಬಿಜಾಪುರದ ಸಮೀಪಕ್ಕೆ ಹೋಗಿ ಕೋಟೆಗೆ ಮುತ್ತಿಗೆ ಹಾಕಿದವು ಅಲ್ಲಿದ್ದ ರಕ್ಷಣಾಸೈನ್ಯಗಳಿಗೂ ಕೃಷ್ಣದೇವ ರಾಯನ ಸೈನ್ಯಕ್ಕೂ ಯುದ್ಧವಾಯಿತು. ಕೃಷ್ಣದೇವರಾಯನು ಬಿಜಾಪುರದ ಕೋಟೆಯನ್ನೆಲ್ಲಾ ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಂಡನು ಅಲ್ಲಿ ಸುಲ್ತಾನನು ಇರಲೂ ಇಲ್ಲ. ಯುದ್ಧಕ್ಕೆ ಬರಲೂ ಇಲ್ಲ ಸುಲ್ತಾನನ ಅರಮನೆಯನ್ನು ಕೃಷ್ಣದೇವರಾಯನು ಸ್ವಾಧೀನಪಡಿಸಿಕೊಂಡು ಅಲ್ಲಿಯೇ ತನ್ನ ವಾಸವನ್ನು ಏರ್ಪಡಿಸಿದನು. ವಿಜಯನಗರದ ಸೈನಿಕರು ಬಿಜಾಪುರದ ನಗರವನ್ನೆಲ್ಲಾ ಲೂಟಿಮಾಡಿ ಐಶ್ವರ್ಯವನ್ನು ತಂದು ಕೃಷ್ಣದೇವನಿಗೆ ಒಪ್ಪಿಸಿದರು.

ಇಸ್ಮಾಯಿಲ್‌ಷಹನು ಹಿಂದಕ್ಕೆ ಬರುವ ಧೈರ್ಯವಿಲ್ಲದೇ ಸೈನ್ಯಸಮೇತ ವಾಗಿ ಮುದ್ಗಲ್ ಕೋಟೆಯಲ್ಲಿ ಹೋಗಿನಿಂತನು. ವಾರಗಳು ಕಳೆದವು. ತಿಂಗಳುಗಳು ಕಳೆದವು. ಸುಲ್ತಾನ್ ಇಸ್ಮಾಯಿಲ್‌ಷಹನು ಬಿಜಾಪುರದ ಕಡೆಗೆ ಬರಲೇ ಇಲ್ಲ ಕೃಷ್ಣದೇವರಾಯನಿಗೆ ಸುಲ್ತಾನನು ಮುದ್ಗಲ್ ಕೋಟೆ ಯಲ್ಲಿದ್ದಾನೆಂದೂ ಅಲ್ಲಿಂದ ರಾಯಚೂರನ್ನು ವಶಪಡಿಸಿಕೊಂಡು ತನ್ನ ರಾಜಧಾನಿಗೆ ಬರುವ ಯೋಚನೆ ಮಾಡುತ್ತಿದ್ದಾನೆಂದೂ ಸಮಾಚಾರಗಳು ಬಂದವು. ಈ ಸುಲ್ತಾನನು ಎಂಥಾ ಹುಚ್ಚುಮನುಷ್ಯ ಅವನ ಮುಖ್ಯವಾದ ರಾಜಧಾನಿಯು ಕೈತಪ್ಪಿಹೋಗಿದ್ದರೂ ಯಾವುದೋ ಕೋಟೆಗಳನ್ನು ಹಿಡಿ ಯುವ ಹವ್ಯಾಸದಲ್ಲಿ ತೊಡಗಿದ್ದಾನೆ ಎಂದು ಆಶ್ಚರ್ಯಪಟ್ಟನು. ಮಂತ್ರಿಗಳು ಮತ್ತು ಸೇನಾಧಿಪತಿಗಳೊಡನೆ ಮುದ್ಗಲ್ಲಿಗೇ ಹೋಗಿ ಆ ಸುಲ್ತಾನನನ್ನು ಹಿಡಿಯಬೇಕು ಎಂದು ಕೃಷ್ಣದೇವರಾಯನು ಮಂತ್ರಾಲೋಚನೆ ನಡೆಸು ತ್ತಿದ್ದನು. ಆ ಮಂತ್ರಿಗಳಿಗೂ ಸುಲ್ತಾನನು ತನ್ನ ರಾಜಧಾನಿಯ ಯೋಚನೆ

ಯನ್ನೇ ಬಿಟ್ಟು ಯಾವುದೋ ಕೋಟೆಗಳನ್ನು ಹಿಡಿಯಲು ಸುಲ್ತಾನನು ಪ್ರಯತ್ನಮಾಡುತ್ತಿರುವುದು ಆಶ್ಚರ್ಯವಾಗಿ ಕಂಡಿತು. ಬಿಜಾಪುರವೇ ಕೈಬಿಟ್ಟು ಹೋದಮೇಲೆ ಸುಲ್ತಾನನ ಅಸ್ತಿತ್ವವು ಹೇಗೆ ಉಳಿಯಬೇಕು ? ಕೃಷ್ಣದೇವ ರಾಯನಿಗೂ ಅವನ ಮಂತ್ರಿಗಳಿಗೂ ಇದೊಂದು ಸಮಸ್ಯೆಯಾಗಿಯೇ ತೋರುತ್ತಿದ್ದಿತು.

ಬಿಜಾಪುರದ ಶ್ರೀಮಂತರು ಒಬ್ಬೊಬ್ಬರಾಗಿ ಬಂದು ಕೃಷ್ಣದೇವ ರಾಯನನ್ನು ಭೇಟಿಮಾಡಲಾರಂಭಿಸಿದರು. ಅವನ ಮಂತ್ರಿಗಳೊಡನೆ ಮಾತುಕಥೆಗಳನ್ನಾಡಿ ಸ್ನೇಹ ಬೆಳೆಸಿಕೊಂಡರು. ಇಸ್ಮಾಯಿಲ್‌ಷಹನು ರಾಜಧಾನಿಯಲ್ಲಿರುವ ಗಣ್ಯವ್ಯಕ್ತಿಗಳೊಡನೆಯೂ ರಾಜಬಂಧುಗಳೊಡನೆಯೂ ವಿರೋಧವನ್ನು ಕಟ್ಟಿಕೊಂಡಿದ್ದಾನೆ. ಇಲ್ಲಿ ಬೇಕಾದಷ್ಟು ಅರಮನೆಯ ಅಂತಃಕಲಹಗಳಿವೆ. ಸುಲ್ತಾನನ ರಾಣಿವಾಸದವರು ಕೂಡಾ ಅವನಲ್ಲಿ ವಿಮುಖರಾಗಿದ್ದಾರೆ. ಅವನ ತಾಯಿ ಇಷ್ಟಕ್ಕೆಲ್ಲಾ ಕಾರಣಭೂತಳು. ಅವನ ಮುಖ್ಯ ಸೇನಾಧಿಪತಿಯಾದ ಆಸದ್‌ಖಾನನೂ ಅಂತರಂಗದಲ್ಲಿ ಸುಲ್ತಾನನ ವಿರೋಧಿಯೇ ಆಗಿದ್ದಾನೆ. ಈ ರಾಜಧಾನಿಯಲ್ಲಿ ಸುಲ್ತಾನನಿಗೆ ಪ್ರಿಯ ರಾದವರು ಯಾರೂ ಇಲ್ಲ. ಅರಮನೆಯಲ್ಲಿ ಬಹುಕಾಲದಿಂದಲೂ ಶೇಖರಿತ ವಾಗಿದ್ದ ಅಪಾರ ಐಶ್ವರ್ಯವನ್ನೆಲ್ಲಾ ವೆಚ್ಚಮಾಡಿಬಿಟ್ಟಿದ್ದಾನೆ. ಇಲ್ಲೇ ಇದ್ದಿದ್ದರೆ ಸುಲ್ತಾನನ ಕಡೆಯವರೇ ಅವನನ್ನು ಕೊನೆಗಾಣಿಸಿಬಿಡುತ್ತಿದ್ದರು. ಯಾರೋ ಪಟ್ಟಕ್ಕೆ ಬರುತ್ತಿದ್ದರು ಎಂದು ಕೃಷ್ಣದೇವರಾಯನಿಗೆ ತಿಳಿಯಿತು. ಈ ಸಮಾಚಾರವನ್ನು ಹತ್ತಾರು ಕಡೆಗಳಲ್ಲಿ ಪರಿಶೋಧಿಸಿ ನೋಡಿದನು. ಎಲ್ಲರಿಂದಲೂ ಬೇರೆ ಬೇರೆ ವಿಧವಾಗಿ ಇದೇ ಸಮಾಚಾರವು ತಿಳಿಯ ಬಂದಿತು.

ಇಷ್ಟರಲ್ಲಿ ಇಸ್ಮಾಯಿಲ್‌ಷಹನ ಕಡೆಯ ರಾಯಭಾರಿಗಳು ಗುಟ್ಟಾಗಿ ಬಂದು ಕೃಷ್ಣದೇವನ ಭೇಟಿಮಾಡಿದರು. ಬಿಜಾಪುರವನ್ನು ಸುಲ್ತಾನನಿಗೆ ಬಿಟ್ಟುಕೊಡಬೇಕೆಂದೂ ಯುದ್ಧದ ಖರ್ಚುಗಳನ್ನೆಲ್ಲಾ ಸಾಮ್ರಾಟರಿಗೆ ಸುಲ್ತಾನನು ಒಪ್ಪಿಸುತ್ತಾನೆಂದೂ ತಿಳಿಯಪಡಿಸಿದರು.

ಕೃಷ್ಣದೇವರಾಯನು ನಾನು ಕೊಟ್ಟ ಭಾಷೆಗೆ ತಪ್ಪುವವನಲ್ಲ. ಆಡಿದ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುವವನಲ್ಲ. ಸುಲ್ತಾನನು ಇಲ್ಲಿಗೆ ಬಂದು ಪ್ರತ್ಯಕ್ಷವಾಗಿ ನಮಗೆ ಶರಣಾಗತನಾದರೆ ಒಂದು ಕಾಸನ್ನೂ ಪರಿಗ್ರಹಿಸದೇ ಈ ಬಿಜಾಪುರವನ್ನು ಬಿಟ್ಟುಕೊಡುತ್ತೇವೆ ಸುಲ್ತಾನನು ಮುದ್ಗಲ್ ಕೋಟೆಯನ್ನು ನಮಗೆ ಒಪ್ಪಿಸಿಬಿಡಬೇಕು. ಇನ್ನುಮೇಲೆ ಎಂದೆಂದಿಗೂ ಬಿಜಾಪುರದವರು ರಾಯಚೂರು ಮುದ್ಗಲ್‌ಗಳ ತಂಟೆಗೆ ಬರುವುದಿಲ್ಲವೆಂದು ಬರೆದು ಕೊಡಬೇಕು. ಮುಂದೆ ನಮ್ಮೆರಡು ರಾಜ್ಯಗಳೂ ಶಾಶ್ವತವಾದ ಸ್ನೇಹದಿಂದ ಬಾಳುವಂತಾಗುತ್ತದೆ ಎಂದು ಹೇಳಿಕಳಿಸಿದನು.

ಮುದ್ಗಲ್ ಕೋಟೆಯಲ್ಲಿದ್ದ ಸುಲ್ತಾನನಿಗೆ ರಾಯಭಾರಿಗಳು ಕೃಷ್ಣದೇವರಾಯನು ಹೇಳಿದ ಉತ್ತರವನ್ನು ತಂದು ಅರಿಕೆಮಾಡಿದರು. ಇಸ್ಮಾಯಿಲ್ ಷಹನಿಗೆ ಆ ಉತ್ತರವು ಬಹಳ ಅಪಮಾನಕಾರಕವಾಗಿ ಭಾಸವಾಯಿತು.

ಸುಲ್ತಾನನ ತಾಯಿಯೂ ಅಸದ್‌ಖಾನನೂ ಸದ್ಯಕ್ಕೆ ಹೀಗೆ ರಾಜಿಮಾಡಿಕೊಳ್ಳುವುದು ಒಳ್ಳೆಯದೆಂದು ಸಲಹೆಮಾಡಿದರು. ಸುಲ್ತಾನನು ಯಾವುದಕ್ಕೂ ಜಗ್ಗಲಿಲ್ಲ.

ಬಿಜಾಪುರದಲ್ಲಿ ಪ್ರಬಲವಾದ ನೀರಿನ ಕ್ಷಾಮವು ಆರಂಭವಾಯಿತು. ಕುದುರೆಗಳಿಗೂ ಸೈನಿಕರಿಗೂ ಕುಡಿಯುವುದಕ್ಕೆ ಕೂಡಾ ನೀರಿಲ್ಲದೇ ಹಾಹಾಕಾರವೆದ್ದಿತು. ಅಷ್ಟೊಂದು ಅಗಾಧವಾದ ಸೈನ್ಯವು ಬೆಂಗು ಬಳಲಲಾರಂಭಿಸಿತು. ಸೈನಿಕರು ನಾಲ್ಕಾರು ಮೈಲಿಗಳು ಹತ್ತು ಹನ್ನೆರಡು ಮೈಲಿಗಳು ನೀರಡಿಕೆಯನ್ನು ತಣಿಸಿಕೊಳ್ಳಲು ಅಲೆದಾಡಲಾರಂಭಿಸಿತು ಕೃಷ್ಣದೇವರಾಯನ ಪರಿವಾರದವರಿಗೆ ಕೂಡಾ ಕುಡಿಯುವುದಕ್ಕೆ ನೀರಿಲ್ಲದೇಹೋಯಿತು. ಕೃಷ್ಣದೇವರಾಯನು ಮಂತ್ರಿಗಳೊಡನೆ ಆಲೋಚನೆ ಮಾಡಿದನು. ದೇವರೇ ಇಸ್ಮಾಯಿಲ್‌ಷಹನಿಗೆ ಸಹಾಯಕ್ಕೆ ಬಂದಂತಾಗಿದೆ. ನಮ್ಮ ಸೈನ್ಯಗಳು ಇಲ್ಲಿದ್ದರೆ ನೀರಿಲ್ಲದೇ ಸಾಯಬೇಕಾಗುತ್ತದೆ. ಸೈನ್ಯದ ನೀತಿಯೂ ಭದ್ರತೆಯೂ ತಪ್ಪಿಹೋಗುತ್ತದೆ. ಇಲ್ಲಿಂದ ನಾವು ಬಿಟ್ಟುಹೋದರೆ ಸುಲ್ತಾನನು ಬಂದು ಆಕ್ರಮಿಸಿಕೊಳ್ಳುತ್ತಾನೆ ಎಂಬುದಾಗಿ ಕೃಷ್ಣದೇವರಾಯನು ಪರಿತಪಿಸ

ತೊಡಗಿದನು. ಹೀಗೆಯೇ ಇನ್ನು ಒಂದೆರಡು ದಿನಗಳು ಅತಿ ಕಷ್ಟದಿಂದ ಕಳೆದವು. ಬಿಜಾಪುರವನ್ನು ಬಿಟ್ಟು ಹೊರಡುವುದೇನೋ ನಿಷ್ಕರ್ಷೆಯಾಯಿತು. ಮಂತ್ರಿಗಳು ವಿಜಯನಗರಕ್ಕೆ ಹಿಂತಿರುಗಬೇಕೆಂದು ಸಲಹೆಮಾಡಿದರು.

ಕೃಷ್ಣದೇವರಾಯನು " ನಾವು ಬಂದ ವಿಜಯಯಾತ್ರೆಯು ವ್ಯರ್ಥವಾಗಿ ಹೋಗಕೂಡದು. ಈ ಸೈನ್ಯವನ್ನು ತೆಗೆದುಕೊಂಡು ಹೋಗಿ ಮುದ್ಗಲ್ ಕೋಟೆಗೇ ಮುತ್ತಿಗೆ ಹಾಕಿ ಆ ಸುಲ್ತಾನನನ್ನು ಸೆರೆ ಹಿಡಿಯಬೇಕು. ಅವನೆಲ್ಲಿಗೆ ತಪ್ಪಿಸಿಕೊಂಡು ಹೋಗುತ್ತಾನೆ " ಎಂದು ಹಠತೊಟ್ಟು ಸೈನ್ಯಗಳು ಮುದ್ಗಲ್ ಕೋಟೆಯ ಕಡೆಗೆ ಹೊರಡಬೇಕೆಂದು ಅಪ್ಪಣೆಮಾಡಿದನು.

ಕೃಷ್ಣದೇವರಾಯನ ಸೈನ್ಯಗಳು ಮುದ್ಗಲ್‌ಕೋಟೆಯನ್ನು ಮುತ್ತಿದವು. ಸುಲ್ತಾನನು ಅಷ್ಟರಲ್ಲಿ ಮುದ್ಗಲ್‌ಕೋಟೆಯಿಂದ ಸರಾರಿಯಾಗಿ ಹೋಗಿದ್ದನು. ಕೃಷ್ಣದೇವರಾಯನಿಗೆ ಶಿಕಾರಿಯು ಕೈತಪ್ಪಿಹೋದಂತಾಯಿತು ಆದರೂ ಹಿನ್ಮೆಟ್ಟದೇ ಮುದ್ಗಲ್‌ಕೋಟೆಯನ್ನು ವಶಪಡಿಸಿಕೊಳ್ಳಬೇಕೆಂದು ಸಂಕಲ್ಪ ಮಾಡಿದನು. ಆ ಕೋಟೆಯಲ್ಲಿದ್ದ ಬಿಜಾಪುರದ ಸೈನ್ಯಗಳು ಪರಾಕ್ರಮದಿಂದ ಯುದ್ಧಮಾಡಿದವು ಒಂದು ತಿಂಗಳಕಾಲ ಯುದ್ಧ ನಡೆಯಿತು ಮುದ್ಗಲ್ ಕೋಟೆಯು ಕೃಷ್ಣದೇವರಾಯನ ವಶವಾಯಿತು ಕೃಷ್ಣದೇವರಾಯನು ಕೋಟೆಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಯೇ ಬೀಡುಬಿಟ್ಟರು. ಸುಲ್ತಾನನ ಸಮಾಚಾರಗಳೇ ತಿಳಿಯದಂತಾದವು. ಆ ಸಮಯಕ್ಕೆ ಸರಿಯಾಗಿ ಅಸದ್‌ಖಾನನು ಮುದ್ಗಲ್ಲಿನ ಸಮೀಪದಲ್ಲಿಯೇ ತನ್ನ ಸೈನ್ಯದೊಡನೆ ಬಂದು ಬೀಡುಬಿಟ್ಟನು. ಅವನು ತನ್ನ ಕಡೆಯ ದೂತರನ್ನು ಕೃಷ್ಣದೇವರಾಯನ ಭೇಟಿಗಾಗಿ ಹೇಳಿಕಳಿಸಿದನು.

ಕೃಷ್ಣದೇವರಾಯನು ಆಶ್ಚರ್ಯಪಟ್ಟು ಈ ಸುಲ್ತಾನನು ಏನೋ ವಿಚಿತ್ರ ವ್ಯಾಪಾರವನ್ನು ಆಡುತ್ತಿದ್ದಾನೆ. ನಾವು ಒಂದು ಕಡೆ ಬಂದರೆ ಅವನೊಂದು ಕಡೆ ಓಡಿಹೋಗುತ್ತಾನೆ. ರಣರಂಗದಲ್ಲಿ ಯುದ್ಧಕ್ಕೆ ನಿಲ್ಲುವುದೇ ಇಲ್ಲ. ನಮ್ಮನ್ನು ಯಾವುದೋ ಮೋಸದಲ್ಲಿ ಸಿಕ್ಕಿಸಲು ಪ್ರಯತ್ನಪಡುತ್ತಿದ್ದಾನೆ. ಇರಲಿ ನೋಡೋಣ. ಅಸದ್‌ಖಾನನು ಬಂದು ಭೇಟಿಮಾಡಲಿ ಎಂದು

ಹೇಳಿಕಳಿಸಿದನು. ಅಸದ್ ಖಾನನು ಕೃಷ್ಣದೇವರಾಯನಲ್ಲಿಗೆ ಸ್ನೇಹದಿಂದ ಬಂದು ಭೇಟಿಮಾಡಿದನು. ಕೃಷ್ಣದೇವರಾಯನ ಆಜ್ಞೆಯಂತೆ ಸುಲ್ತಾನನೂ ಅವನ ಮಾತೆಯೂ ಬಂದು ಭೇಟಿಮಾಡುವರೆಂದು ಕೃಷ್ಣದೇವರಾಯನಿಗೆ ತಿಳಿಸಿದನು. ಅಸದ್ ಖಾನನು ಈ ಸಂಧಾನವನ್ನು ನಡೆಸುತ್ತಿರುವಾಗಲೇ ಇಸ್ಮಾಯಿಲ್ ಷಹನು ಬಿಜಾಪುರವನ್ನು ಸೇರಿಕೊಂಡು ತನ್ನ ರಾಜಧಾನಿಯನ್ನು ಪುನಃ ವಶಪಡಿಸಿಕೊಂಡನು

ಕೃಷ್ಣದೇವರಾಯನಿಗೆ ಸುಲ್ತಾನನು ಬಿಜಾಪುರಕ್ಕೆಹೋಗಿ ಸೇರಿಕೊಂಡನೆಂಬ ಸಮಾಚಾರ ತಿಳಿಯುತ್ತಲೇ ಅವನು ಅಸದ್ ಖಾನನನ್ನು ಕರೆಕಳಿಸಿದನು. ಅಸದ್ ಖಾನನು ತಲೆತಪ್ಪಿಸಿಕೊಂಡು ಮಾಯವಾಗಿಹೋಗಿದ್ದನು. ಕೃಷ್ಣದೇವರಾಯನು ಕೋಪದಿಂದ ಸುಲ್ತಾನನ ಕಡೆಯವರು ಯಾರುಯಾರು ಸೆರೆಸಿಕ್ಕಿದ್ದರೋ ಆ ಅಧಿಕಾರಿಗಳನ್ನೆಲ್ಲಾ ಮುದ್ಗಲ್ ಕೋಟೆಯಲ್ಲಿ ಗಲ್ಲಿಗೇರಿಸಿದನು.

ಕೃಷ್ಣದೇವರಾಯನು ಕೋಪದಿಂದ ಪರಿತಪಿಸತೊಡಗಿದನು. ಈ ಸುಲ್ತಾನನು ಒಂದು ಕಡೆ ಪರಾಕ್ರಮವನ್ನು ತೋರುತ್ತಾ ಮತ್ತೊಂದು ಕಡೆ ಸಂಧಿಯನ್ನು ಯಾಚನೆಮಾಡುತ್ತಾ ನಮ್ಮನ್ನು ಮೋಸಮಾಡಿದ್ದಾನೆ. ಅವನು ರಾಜಧಾನಿಗೆ ಪುನಃ ಹೋಗಿ ಸೇರಿಕೊಂಡಿದ್ದಾನೆ ತನ್ನ ಕೋಟೆಗೆ ಸುರಕ್ಷಿತವಾಗಿ ಸೇರಿಕೊಳ್ಳುವುದಕ್ಕಾಗಿ ಈ ಅಸದ್ ಖಾನನನ್ನು ಸಂಧಿಯ ನೆಪದಿಂದ ನಮ್ಮಲ್ಲಿಗೆ ಕಳಿಸಿದ್ದಾನೆ. ಇವರಿಬ್ಬರನ್ನು ಶಿಕ್ಷಿಸದೇ ಬಿಡಕೂಡದು ಎಂದು ನಿರ್ಧಾರಮಾಡಿಕೊಂಡು ಮುದ್ಗಲ್ ಕೋಟೆಗೆ ತಕ್ಕ ರಕ್ಷಣಾವ್ಯವಸ್ಥೆಯನ್ನು ಮಾಡಿ ಗುಲ್ಬರ್ಗದ ಕಡೆಯಿಂದ ಮತ್ತೆ ಸೈನ್ಯವನ್ನು ತೆಗೆದುಕೊಂಡು ಹೊರಟನು.

# ೩

ಗುಲ್ಬರ್ಗವು ಪ್ರಾಚೀನವಾದ ಬಹಮನಿ ಸುಲ್ತಾನರ ರಾಜಧಾನಿ. ಆ ರಾಜ್ಯವೆಲ್ಲವೂ ಒಡೆದುಹೋಗಿ ಬೇರೆ ಬೇರೆ ಸುಲ್ತಾನರುಗಳು ಬೇರೆ ಬೇರೆ ರಾಜ್ಯಗಳನ್ನು ಕಟ್ಟಿಕೊಂಡಿದ್ದರು. ಗುಲ್ಬರ್ಗವು ಮೂಲೆಗುಂಪಾಗಿ ಹೋಗಿದ್ದಿತು. ಅದರ ಪ್ರಾಚೀನ ವೈಭವಗಳೆಲ್ಲವೂ ಇತರ ಸುಲ್ತಾನರುಗಳಿಂದ ಅಪಹೃತವಾಗಿದ್ದವು ಅಥವಾ ನಾಶಪಡಿಸಲ್ಪಟ್ಟಿದ್ದವು. ಕೃಷ್ಣದೇವರಾಯನ ಕಾಲದಲ್ಲಿ ಅದು ಬಿಜಾಪುರದ ಸುಲ್ತಾನನ ಅಧೀನದಲ್ಲಿತ್ತು. ಅಲ್ಲಿ ಅದಿಲ್ ಖಾನನೆಂಬ ಫೌಜುದಾರನು ಗುಲ್ಬರ್ಗದ ಸಮಸ್ತ ಅಧಿಕಾರಗಳನ್ನು ನಡೆಸುತ್ತಿದ್ದನು. ಕೃಷ್ಣದೇವರಾಯನು ಮಾರ್ಗಮಧ್ಯದಲ್ಲಿ ಸಿಕ್ಕಿದ ಗುಲ್ಬರ್ಗದ ಸಮೀಪದಲ್ಲಿ ಬೀಡುಬಿಟ್ಟನು. ತನ್ನ ದೂತರನ್ನು ಫೌಜುದಾರನಲ್ಲಿಗೆ ಕಳಿಸಿ ಗುಲ್ಬರ್ಗವನ್ನು ತಮಗೆ ಒಪ್ಪಿಸಬೇಕೆಂದು ಹೇಳಿಕಳಿಸಿದನು. ಫೌಜುದಾರ್ ಅದಿಲ್‌ಖಾನನು ಯುದ್ಧಕ್ಕೆ ಸಿದ್ಧನಾಗಿ ಕೃಷ್ಣದೇವರಾಯನು ಸಾಮರ್ಥ್ಯವಿದ್ದರೆ ಯುದ್ಧಮಾಡಿ ಗೆದ್ದು ಗುಲ್ಬರ್ಗದ ಕೋಟೆಯನ್ನು ತೆಗೆದುಕೊಳ್ಳಬಹುದು. ಬಿಜಾಪುರದ ಸುಲ್ತಾನರಿಗೆ ಸೇರಿದ ಕೋಟೆಯನ್ನು ತಾನು ಒಪ್ಪಿಸುವುದಿಲ್ಲ ಎಂದು ಉತ್ತರ ಕಳಿಸಿದನು. ತನ್ನ ಅಧೀನದಲ್ಲಿದ್ದ ಸೈನ್ಯವನ್ನೆಲ್ಲಾ ಒಟ್ಟುಗೂಡಿಸಿ ಕೃಷ್ಣದೇವರಾಯನೊಂದಿಗೆ ಯುದ್ಧಕ್ಕೆ ನಿಂತನು.

ಕೃಷ್ಣದೇವರಾಯನ ಸೈನ್ಯಕ್ಕೆ ಈ ಫೌಜುದಾರ ಅದಿಲ್‌ಖಾನನ ಸೈನ್ಯವು ಸಾಟಿಯಾದೀತೆ? ಆದರೂ ಅದಿಲ್‌ಖಾನನು ಪರಾಕ್ರಮದಿಂದ ಯುದ್ಧಮಾಡಿ ರಣರಂಗದಲ್ಲಿ ಮಡಿದನು ಗುಲ್ಬರ್ಗ ಕೋಟೆಯು ಕೃಷ್ಣದೇವರಾಯನ ವಶವಾಯಿತು. ಕೋಟೆಯೊಳಗಿದ್ದ ಕಾರಾಗೃಹದಲ್ಲಿ ಗುಲ್ಬರ್ಗದ

ಪೂರ್ವ ಸುಲ್ತಾನನ ಮೂವರು ಮಕ್ಕಳು ಬಂಧನದಲ್ಲಿಡಲ್ಪಟ್ಟಿದ್ದಾರೆಂದು ಕೃಷ್ಣದೇವರಾಯನಿಗೆ ತಿಳಿಯಬಂದಿತು. ಅವರು ಮೂವರನ್ನು ಕಾರಾಗೃಹ ದಿಂದ ಬಿಡುಗಡೆ ಮಾಡಿಸಿ ತನ್ನ ಸಮ್ಮುಖಕ್ಕೆ ಕರೆತರಬೇಕೆಂದು ಸಾಮ್ರಾಟನು ತನ್ನ ಸೇನಾಧಿಪತಿಗಳಿಗೆ ಅಪ್ಪಣೆಯಿತ್ತನು.

ಗುಲ್ಬರ್ಗದ ಸುಲ್ತಾನರ ಮಕ್ಕಳಾದ ಅಹಮದ್‌ಷಾ, ಅಲ್ಲಾವುದೀನ್ ವಾಲೀವುಲ್ಲಾ ಈ ಮೂವರು ರಾಜಪುತ್ರರೂ ಬಿಡುಗಡೆಯನ್ನು ಹೊಂದಿ ಕೃಷ್ಣದೇವರಾಯನ ದರಬಾರಿಗೆ ಬಂದು ಅರಸನಿಗೆ ಶರಣಾಗತರಾಗಿ ಪ್ರಣಾಮ ಮಾಡಿ ನಿಂತುಕೊಂಡರು. ಕೃಷ್ಣದೇವರಾಯನು ಆಸನದಿಂದೆದ್ದು ಆ ಸುಲ್ತಾನರ ಕುಮಾರರುಗಳನ್ನು ಆಲಿಂಗಿಸಿ ಸಂತೈಸಿ ಉಚಿತಾಸನಗಳನ್ನು ಕೊಟ್ಟು ಕುಳ್ಳಿರಿ ಸಿದನು.

ಕೃಷ್ಣದೇವನು ಅವರ ಅರಮನೆಗಳನ್ನು ಅವರುಗಳಿಗೆ ಬಿಡಿಸಿಕೊಡು ವಂತೆ ಅಪ್ಪಣೆಮಾಡಿದನು ಸುಲ್ತಾನರ ಗೌರವಕ್ಕೆ ತಕ್ಕ ಸರಪರಾಜುಗಳ ನ್ನೆಲ್ಲಾ ಮಾಡಿಸಿಕೊಟ್ಟು ಆ ರಾಜಕುವರರುಗಳನ್ನು ಅವರವರ ಅರಮನೆ ಗಳಿಗೆ ಕಳುಹಿಸಿಕೊಟ್ಟನು.

ಈ ಸಮಯಕ್ಕೆ ಗುಲ್ಬರ್ಗ ರಾಜ್ಯವು ಬಲು ಸಣ್ಣದಾಗಿಹೋಗಿತ್ತು. ಆದರೂ ಆ ರಾಜ್ಯದಲ್ಲಿ ಪುರಾತನಕಾಲದಿಂದಲೂ ಬಂದಿದ್ದ ಬಹುಮಂದಿ ರಾಜಭಕ್ತರು ರಾಜಬಂಧುಗಳು ತಲೆಮರೆಸಿಕೊಂಡು ವಾಸಮಾಡುತ್ತಿದ್ದರು. ತಮ್ಮ ಸುಲ್ತಾನರ ಮಕ್ಕಳ ಬಿಡುಗಡೆಯಾದ ಸಮಾಚಾರವನ್ನು ಕೇಳುತ್ತಲೇ ಅವರೆಲ್ಲರೂ ಹರ್ಷಿತರಾಗಿ ಬಂದು ತಮ್ಮ ರಾಜಕುವರರುಗಳನ್ನು ಭೇಟಿ ಮಾಡಿದರು ವಿಜಯನಗರದ ಮಹಾಪ್ರಭು ಕೃಷ್ಣದೇವರಾಯನನ್ನು ದರ್ಶನ ಮಾಡಿ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಕೃಷ್ಣದೇವರಾಯನು ಅವರೆಲ್ಲರನ್ನೂ ಪ್ರೋತ್ಸಾಹಿಸಿ ಗುಲ್ಬರ್ಗದ ರಾಜಧಾನಿಯಲ್ಲಿ ಬಂದು ನಿರ್ಭಯ ವಾಗಿ ನೆಲಸುವಂತೆ ಅನುಜ್ಞೆಯಿತ್ತನು. ಪೂರ್ವದ ಮಂತ್ರಿಗಳನ್ನು ಕರೆಯಿಸಿ ಆ ರಾಜ್ಯದ ಅವನತಿಯು ಹೇಗಾಯಿತೆಂಬುದನ್ನು ಕೃಷ್ಣದೇವರಾಯನು ವಿಚಾರಿಸಿದನು.

ವೃದ್ಧಮಂತ್ರಿಯಾದ ಸದರುದ್ದೀನ್ ಖಾನರು “ ಗುಲ್ಬರ್ಗ ಸಿಂಹಾಸನವು ಪ್ರಾಚೀನವಾದುದೆಂದು ತಮಗೇ ತಿಳಿದೇಯಿದೆ. ಈ ಸಂಸ್ಥಾನದಲ್ಲಿ ಸ್ತ್ರೀಯರ ಪ್ರಾಬಲ್ಯದಿಂದ ಬಾಲಕರಾದ ಸುಲ್ತಾನರುಗಳು ಒಬ್ಬರಮೇಲೊಬ್ಬರು ಸಿಂಹಾಸನಕ್ಕೆ ಏರಿಸಲ್ಪಟ್ಟರು. ದೊಡ್ಡದೊಡ್ಡ ಸೇನಾಧಿಪತಿಗಳೆಲ್ಲರೂ ಬೇಸರಗೊಂಡು ರಾಜಧಾನಿಯನ್ನು ಬಿಟ್ಟುಹೋಗಿ ಬೇರೆ ಬೇರೆ ರಾಜ್ಯಗಳನ್ನು ಕಟ್ಟಿಕೊಂಡರು. ವಿಸ್ತಾರವಾಗಿದ್ದ ಬಹಮನಿ ರಾಜ್ಯವನ್ನು ಹಂಚಿಕೊಂಡರು. ಅವರು ಒಬ್ಬೊಬ್ಬರು ಒಂದೊಂದು ಕುಲದವರು. ಗುಲ್ಬರ್ಗದಲ್ಲಿದ್ದ ಐಶ್ವರ್ಯವನ್ನೆಲ್ಲಾ ದೋಚಿಕೊಂಡು ಹೋದರು. ಈ ಮೂವರು ಕುಮಾರರು ಸಿಂಹಾಸನಕ್ಕಾಗಿ ಹೋರಾಡತೊಡಗಿದರು. ಈ ಜಗಳವನ್ನು ಹಚ್ಚಿಟ್ಟವರು ಅರಮನೆಯ ಜನಾನಾದ ಬೇಗಂಸಾಹೇಬರುಗಳೇ. ಬಿಜಾಪುರದ ಸುಲ್ತಾನನಾದ ಇಸ್ಮಾಯಿಲ್‌ಷಹನು ಬಲು ದುಷ್ಟ. ಅವನು ಮೊದಲಿನಿಂದಲೂ ಈ ರಾಜ್ಯವನ್ನು ಬುಡಮಟ್ಟ ನಾಶಮಾಡಬೇಕೆಂದು ಸಂಕಲ್ಪಮಾಡಿದ್ದ. ಅರಮನೆಯ ಅಂತಃಕಲಹಗಳಿಂದ ಅವನ ಸಂಕಲ್ಪವು ಈಡೇರುವ ಸಂದರ್ಭ ಬಂದಿತು. ಈ ಗುಲ್ಬರ್ಗದಲ್ಲಿದ್ದ ರಾಜಭಕ್ತರುಗಳನ್ನೆಲ್ಲಾ ಹೊಡೆದೋಡಿಸಿ ಈ ನಗರವನ್ನೂ ಅರಮನೆಯನ್ನೂ ಸ್ವಾಧೀನಪಡಿಸಿಕೊಂಡ ಈ ಮೂವರನ್ನೂ ಸೆರೆಯಲ್ಲಿಟ್ಟ. ಸಮಯವರಿತು ಇವರನ್ನು ಕೊಲ್ಲಿಸಬೇಕೆಂದು ಹೊಂಚುಹಾಕುತ್ತಿದ್ದ ಆ ಸುಲ್ತಾನ್ ಇಸ್ಮಾಯಿಲ್‌ಷಹನ ತಾಯಿಯು ಗುಲ್ಬರ್ಗದ ರಾಜವಂಶಕ್ಕೆ ಸೇರಿದವಳು ಅವಳ ಮಮತೆಯಿಂದ ಈ ಸಿಂಹಾಸನದ ಅಂಕುರವು ಉಳಿದುಕೊಂಡಿದೆ. ಆ ಸುಲ್ತಾನನು ಸಮಸ್ತ ಐಶ್ವರ್ಯವನ್ನು ಕೊಳ್ಳೆಹೊಡೆದುಕೊಂಡು ಬಿಜಾಪುರಕ್ಕೆ ಸಾಗಿಸಿದ್ದಾನೆ. ಜನಾನಾ ಸ್ತ್ರೀಯರೆಲ್ಲರೂ ದಿಕ್ಕೆಟ್ಟುಹೋದರು ಸತ್ತವರು ಸತ್ತರು. ಅನೇಕರು ಪರಾಶ್ರಯದಿಂದ ಪಾರಾಗಿಹೋದರು ಈ ಗುಲ್ಬರ್ಗವು ನಿರ್ಮೂಲವಾಗಿ ನಾಶವಾಗಿಹೋಗಿದೆ ” ಎಂದು ಹಳೆಯ ವೃತ್ತಾಂತವನ್ನೆಲ್ಲಾ ತಿಳಿಸಿದರು.

ಕೃಷ್ಣದೇವರಾಯನು ಪ್ರಾಪ್ತವಯಸ್ಕರಾಗಿದ್ದ ಆ ಮೂವರು ರಾಜಕುಮಾರರನ್ನು ಸಮ್ಮುಖಕ್ಕೆ ಕರೆಸಿಕೊಂಡು ಅವರೊಡನೆ ಮಾತನಾಡಿದನು.

ಹಿತವಾದಗಳನ್ನು ಹೇಳಿದನು ಈ ಗುಲ್ಬರ್ಗದ ಸಿಂಹಾಸನವೇ ಬಹಮನಿ ಸುಲ್ತಾನರ ಮೂಲಸ್ಥಾನ. ದುರ್ದೈವವಶಾತ್ ನಿಮಗೆ ಇಂಥಾ ದುರವಸ್ಥೆಯು ಸಂಭವಿಸಿದೆ. ನಿಮ್ಮ ರಾಜ್ಯವು ಇಂದು ಸಣ್ಣದಾಗಿದ್ದರೂ ನಾಳೆ ಪೂರ್ವ ದಂತೆ ಬೆಳೆದು ಪ್ರಕಾಶಮಾನಕ್ಕೆ ಬರಬಹುದು. ನೀವು ಮೂವರು ಒಬ್ಬ ತಂದೆಯ ಮಕ್ಕಳು ನಿಮ್ಮಲ್ಲಿ ಒಗ್ಗಟ್ಟಿದ್ದರೆ, ಯಾರೂ ನಿಮ್ಮ ಕಡೆಗೆ ಕಣ್ಣೆತ್ತಿನೋಡುವ ಸಾಹಸವನ್ನು ಮಾಡಲಾರರು ವೀರರ ವಂಶದಲ್ಲಿ ಹುಟ್ಟಿದ ನೀವು ವೀರರಾಗಿಯೇ ಬದುಕಬೇಕು ನೀವು ಸೌಹಾರ್ದದಿಂದ ಬದುಕುವು ದಾದರೆ ನಾನು ಈ ರಾಜ್ಯವನ್ನು ಪುನರುದ್ಧಾರಗೊಳಿಸುತ್ತೇನೆ ಈ ರಾಜ್ಯಕ್ಕೆ ಬಲವಿಲ್ಲವೆಂದು ಅಂಜಬೇಡಿರಿ. ನಿಮ್ಮ ಮೂವರ ಒಗ್ಗಟ್ಟೇ ಈ ರಾಜ್ಯಕ್ಕೆ ಬಲ ಎಂದು ಉಪದೇಶಮಾಡಿದನು. ಆ ಮೂವರೂ ಅನ್ಯೋನ್ಯವಾಗಿ ಬದುಕುವುದಾಗಿಯೂ ರಾಜ್ಯವನ್ನು ಸಂರಕ್ಷಣೆ ಮಾಡುವುದಾಗಿಯೂ ವಾಗ್ದಾನ ಮಾಡಿದರು. ಕೃಷ್ಣದೇವರಾಯನು ಆ ರಾಜಕುಮಾರನಲ್ಲಿ ಹಿರಿಯನಾದ ಮಹಮುದ್‌ಷಹಸಿಗ ಗುಲ್ಬರ್ಗದ ಸಿಂಹಾಸನದ ಪಟ್ಟಕಟ್ಟಿಸುವುದಾಗಿ ದೇಶ ದಲ್ಲೆಲ್ಲಾ ಡಂಗೂರ ಹೊಡೆಸಿದನು. ಸುತ್ತಮುತ್ತಲಿದ್ದ ಪೂರ್ವಕಾಲದ ರಾಜಭಕ್ತರುಗಳನ್ನೆಲ್ಲಾ ಗುಲ್ಬರ್ಗಕ್ಕೆ ಕರೆಸಿಕೊಂಡನು. ಆ ಪ್ರಾಂತ್ಯ ದಲ್ಲಿದ್ದ ಹಿಂದೂ ಪಾಳೆಯಗಾರರನ್ನೂ ಚಿಕ್ಕ ಚಿಕ್ಕ ರಾಜರುಗಳನ್ನೂ ಗುಲ್ಬರ್ಗಕ್ಕೆ ಬರಬೇಕೆಂದು ರಾಯಸಗಳನ್ನು ಬರೆಯಿಸಿ ಕಳಿಸಿದನು.

ಗುಲ್ಬರ್ಗವು ಹೊಸ ಕಳೆಯಿಂದ ಮೆರೆಯಿತು. ಕೋಟೆಕೊತ್ತಲು ಗಳೆಲ್ಲಾ ಹೊಸದಾಗಿ ನಿರ್ಮಾಣವಾದವು ಅರಮನೆ ಕಛೇರಿ ಕೊತ್ವಾಲಿಗಳು ಎಲ್ಲವೂ ಪುನರ್‌ನಿರ್ಮಾಣವಾದವು. ಆ ಪ್ರಾಂತ್ಯದಲ್ಲಿದ್ದ ಮಹಮದೀಯ ರೆಲ್ಲರೂ ಆಶ್ಚರ್ಯಪಡತೊಡಗಿದರು. ವಿಜಯನಗರದ ಸಾರ್ವಭೌಮನು ಪುರಾತನಕಾಲದಿಂದಲೂ ತಮ್ಮ ಶತ್ರುಗಳಾಗಿ ಇದ್ದ ಗುಲ್ಬರ್ಗದ ಸುಲ್ತಾನೀ ರಾಜ್ಯವನ್ನು ತಾನೇ ಪುನರುದ್ಧಾರಗೊಳಿಸಲು ಆರಂಭಿಸಿದ್ದಾನೆ ಎಂದು ಮಾತನಾಡತೊಡಗಿದರು. ಬುದ್ಧಿವಂತರೂ ರಾಜಕಾರಣಿಗಳೂ ಕೃಷ್ಣದೇವ ರಾಯನು ಹುಚ್ಚಾಟವಾಡುತ್ತಿಲ್ಲ. ಅತ್ಯಂತ ಬುದ್ಧಿವಂತಿಕೆಯ ಹೊಸ

ಹೂಟೆಯನ್ನು ಹೂಡಿದ್ದಾನೆ. ನಿರ್ನಾಮವಾಗಿ ಹೋಗಿದ್ದ ಗುಲ್ಬರ್ಗದ ಪ್ರಾಚೀನ ಸಿಂಹಾಸನವನ್ನು ಪುನಃ ಪ್ರತಿಷ್ಠಾಪನೆ ಮಾಡಿ ಆ ವಂಶದ ಸಮರ್ಥರಾದ ರಾಜಕುಮಾರರಿಗೆ ಪಟ್ಟಕಟ್ಟಿಸುತ್ತಾನೆ ಬಹಮನಿ ರಾಜ್ಯ ಗಳೆಲ್ಲವೂ ಹೆದರಿ ಹಿಂಜರಿಯುವಂತಾಗುತ್ತದೆ. ಮುಖ್ಯವಾಗಿ ಕೃಷ್ಣದೇವ ರಾಯನೊಡನೆ ಯುದ್ಧದ ಮೇಲೆ ಯುದ್ಧಮಾಡಿ ಸೋತು ಸೊಪ್ಪಾಗಿರುವ ಬಿಜಾಪುರದ ಸುಲ್ತಾನ ಇಸ್ಮಾಯಿಲ್‌ಷಹನು ಇನ್ನುಮುಂದೆ ತಲೆಯೆತ್ತ ದಂತೆ ಆಗುತ್ತದೆ. ಇದೇ ಕೃಷ್ಣದೇವರಾಯನ ರಾಜನೀತಿ ಎಂದುಕೊಂಡರು.

ಬಿಜಾಪುರದ ಸುಲ್ತಾನನಾದ ಇಸ್ಮಾಯಿಲ್‌ಷಹನಿಗೂ ಈ ವರ್ತ ಮಾನಗಳು ವಿವರ ವಿವರವಾಗಿ ತಿಳಿಯಬಂದವು. ಅವನು ತನ್ನ ಸೇನಾಧಿ ಪತಿಯಾದ ಅಸದ್‌ಖಾನನೊಡನೆ ಆಲೋಚನೆ ಮಾಡಿದನು. ಹೇಗಾದರೂ ಕೃಷ್ಣದೇವರಾಯನ ಈ ಹೊಸ ಸಂಕಲ್ಪವನ್ನು ನಾಶಗೊಳಿಸಬೇಕೆಂದು ಹೇಳಿ ದನು. ಅಸದ್‌ಖಾನನು ಈಗ ಏನು ಮಾಡುವುದೂ ಉಚಿತವಲ್ಲ ನಮಗೆ ಯಾರ ಬೆಂಬಲವೂ ಸಿಗುವುದಿಲ್ಲ. ಗುಲ್ಬರ್ಗದ ಪ್ರಾಚೀನ ಸಿಂಹಾಸನದ ಮೇಲೆ ನೀವು ಸಂತತವಾದ ದ್ವೇಷಸಾಧನೆ ಮಾಡುವುದು ದಖ್ಖನ್ನಿನಲ್ಲಿರುವ ಇಡೀ ಮುಸಲ್ಮಾನ್ ಜನಾಂಗಕ್ಕೆ ಅಸಮಾಧಾನವನ್ನುಂಟುಮಾಡುತ್ತದೆ. ನಿಮ್ಮ ಮಾತೆಯವರು ಕೂಡಾ ಆ ಮನೆತನದ ಅಭಿಮಾನವನ್ನು ಪೂರ್ಣ ತೊರೆದಿದ್ದಾರೆಂದು ಭಾವಿಸಬೇಡಿರಿ. ನೋಡೋಣ. ಕಾಲಗತಿಯು ಹೇಗೆ ಹೊರಡುತ್ತದೋ ನಿರೀಕ್ಷಣೆ ಮಾಡುವುದು ಬುದ್ಧಿವಂತಿಕೆ. ಗುಲ್ಬರ್ಗದ ಸುಲ್ತಾನರುಗಳು ಪ್ರವೃದ್ಧಮಾನಕ್ಕೆ ಬಂದರೆ ದಖ್ಖನ್ನಿನ ಇತರ ಸುಲ್ತಾನ ರಂತೆ ಅವರೂ ಅಭಿವೃದ್ಧಿಹೊಂದುತ್ತಾರೆ. ಬುದ್ಧಿಹೀನರಾದರೆ ಶಕ್ತಿ ಹೀನರಾದರೆ ತಾವೇ ನಾಶವಾಗುತ್ತಾರೆ ಗುಲ್ಬರ್ಗವು ಬಲಿಷ್ಠರಾಜ್ಯವಾದರೆ ನಾವೂ ಅವರೂ ಸ್ನೇಹಿತರಾಗಿ ಬಾಳೋಣ ಎಂದು ಹೇಳಿದನು.

ಇಸ್ಮಾಯಿಲ್‌ಷಹನ ಮನಸ್ಸಿಗೆ ಈ ಸಮಾಧಾನ ವಚನಗಳೊಂದೂ ರುಚಿಸಲಿಲ್ಲ. ಮುಂದೇನು ಮಾಡಬೇಕೆಂದು ಅವನಿಗೆ ತೋರಲೂ ಇಲ್ಲ. ಕೃಷ್ಣದೇವರಾಯನು ತನ್ನನ್ನು ಮೂಲೆಗೊತ್ತಿ ಬಿಜಾಪುರವನ್ನು ನಾಶಪಡಿಸು

ವುದಕ್ಕಾಗಿಯೇ ಸೆರೆಯಲ್ಲಿದ್ದ ಈ ರಾಜಕುಮಾರರಿಗೆ ಪಟ್ಟಕಟ್ಟಿಸುತ್ತಿದಾನೆ. ತನ್ನನ್ನು ನಾಶಮಾಡುವುದಕ್ಕಾಗಿಯೇ ಕೃಷ್ಣದೇವನ ಈ ಪ್ರಯತ್ನ. ನಮ್ಮ ಕೈಯಿಂದಲೇ ನಮ್ಮ ಕಣ್ಣುಗಳನ್ನು ಕೀಳಿಸುವ ಉಪಾಯ ಮಾಡುತ್ತಿದ್ದಾನೆ ಎಂದು ಖಿನ್ನನಾದನು. ತನ್ನ ಮಾತೆಯೊಡನೆ ಈ ವಿಚಾರಗಳನ್ನೆಲ್ಲಾ ಉಸಿರಿಕೊಂಡನು. ಅಸದ್‌ಖಾನನ ಮೇಲೆ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದನು. ಈ ಅಸದ್‌ಖಾನನಿಂದಲೇ ತನಗೆ ಈ ದುರ್ಗತಿಯು ಪ್ರಾಪ್ತವಾಗಿದೆಯೆಂದು ಮುಂದೆ ಇನ್ನೂ ಅಪಮಾನಕರವಾದ ಸ್ಥಿತಿಯು ಬರುವಂತೆ ತನ್ನ ಕಣ್ಣಿಗೆ ಭವಿಷ್ಯವು ಗೋಚರವಾಗುತ್ತಿದೆಯೆಂದು ತಿಳಿಸಿದನು.

ಕೃಷ್ಣದೇವರಾಯನು ಸಂಭ್ರಮದಿಂದ ಗುಲ್ಬರ್ಗದ ಸುಲ್ತಾನೀರಾಜ್ಯ ಸ್ಥಾಪನೆಗೆ ಬೇಕಾದ ಏರ್ಪಾಡುಗಳನ್ನೆಲ್ಲಾ ಸಿದ್ಧಗೊಳಿಸಿದನು. ಮೌಲ್ವಿಗಳನ್ನೂ ಖಾಜಿಗಳನ್ನೂ ಕರೆಸಿ ಅವರ ಸಂಪ್ರದಾಯದಂತೆ ಪಟ್ಟಾಭಿಷೇಕಕ್ಕೆ ಸಿದ್ಧಗೊಳಿಸುವಂತೆ ಅಪ್ಪಣೆ ಮಾಡಿದನು. ಎಲ್ಲ ಸಿದ್ಧತೆಗಳೂ ಆದ ತರುವಾಯ ಅಹಮುದ್‌ಷಹನಿಗೆ ಸಕಲ ರಾಜಮರ್ಯಾದೆಗಳೊಂದಿಗೆ ಪಟ್ಟ ಕಟ್ಟಿಸಿದನು. ಮೊಟ್ಟಮೊದಲು ವಿಜಯನಗರದ ಮಂತ್ರಿಗಳು ಉಡುಗೊರೆಗಳನ್ನೊಪ್ಪಿಸಿದರು. ಆಮೇಲೆ ಸುತ್ತಮುತ್ತಲಿನ ಅನೇಕ ಪಾಳೆಯಗಾರರು ಚಿಕ್ಕ ಚಿಕ್ಕ ರಾಜರುಗಳು ಖಿಲ್ಲತ್ತುಗಳನ್ನೂ ಕಾಣಿಕೆಗಳನ್ನೂ ತಂದೊಪ್ಪಿಸಿದರು. ಈ ಮಧ್ಯದಲ್ಲಿ ಇಬ್ಬರು ರಾಯಭಾರಿಗಳು ಅಪೂರ್ವವಾದ ಅತ್ಯಂತ ಬೆಲೆ ಬಾಳುವ ಖಿಲ್ಲತ್ತುಗಳನ್ನು ಸುಲ್ತಾನರಿಗೆ ಒಪ್ಪಿಸಿ ಮಾಯವಾದರು. ಇದೆಲ್ಲ ಸಮಾರಂಭಗಳನ್ನು ಕೃಷ್ಣದೇವರಾಯನು ವೀಕ್ಷಿಸುತ್ತಾ ಆ ಸಭಾಮಂದಿರದಲ್ಲಿ ಆಸನದ ಮೇಲೆ ಕುಳಿತಿದ್ದನು. ಪಟ್ಟಾಭಿಷೇಕ ಮಹೋತ್ಸವವು ಪೂರೈಸುತ್ತಲೇ ಗುಲ್ಬರ್ಗದ ಸುಲ್ತಾನ್ ಅಹಮುದ್‌ಷಹನು ಎಲ್ಲ ಉಡುಗರೆಗಳನ್ನೂ ಖಿಲ್ಲತ್ತುಗಳನ್ನೂ ಕಪ್ಪಕಾಣಿಕೆಗಳನ್ನೂ ಕೃಷ್ಣದೇವರಾಯನ ಸಿಂಹಪೀಠದ ಮುಂದಿಡಿಸಿ ತನ್ನ ಇಬ್ಬರು ಸಹೋದರರೊಡನೆ ಕೃಷ್ಣದೇವರಾಯನಿಗೆ ಅಭಿವಾದನಮಾಡಿದನು. ವಂದಿಮಾಗಧರು "ರಾಜಾಧಿರಾಜ ರಾಜಪರಮೇಶ್ವರ ಯವನ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀ ಕೃಷ್ಣದೇವ

ರಾಜ ಪರಾಕ್ ” ಎಂದು ಹೊಗಳಿದರು. ಕೃಷ್ಣದೇವರಾಯನು ಆ ಮೂವರು ಸಹೋದರರನ್ನು ಆಶೀರ್ವದಿಸಿ ಹರಸಿದನು.

ಗುಲ್ಬರ್ಗದ ಸುಲ್ತಾನ ಅಹಮದ್‌ಷಹನ ಇಬ್ಬರು ಸಹೋದರರಿಗೂ ಐವತ್ತು ಸಾವಿರ ವರಹಗಳ ವರ್ಷಾಶನವನ್ನು ಸಲ್ಲಿಸಬೇಕೆಂದು ಸನ್ನದು ಗಳನ್ನು ಕೊಡಿಸಿದನು. ಖಿಲ್ಲತ್ತುಗಳನ್ನು ಕಾಣಿಕೆಗಳನ್ನು ಒಪ್ಪಿಸಿದ ರಾಜ ರಿಗೂ ಪಾಳೆಯಗಾರರಿಗೂ ಉಡುಗರೆಗಳನ್ನು ಕೊಡಿಸಿ ಔತಣಗಳನ್ನು ನೆರ ವೇರಿಸಿ ಮರ್ಯಾದೆಯಿಂದ ಕಳುಹಿಸಿಕೊಟ್ಟನು. ಆ ಸಮೂಹದಲ್ಲಿ ಭಾರೀ ಖಿಲ್ಲತ್ತೊಂದು ಉಳಿದಿದ್ದಿತು. ಅದನ್ನು ಯಾರೋ ಮಹಮದೀಯ ವರ್ತಕರು ತಂದೊಪ್ಪಿಸಿದರೆಂದು ಎಲ್ಲರೂ ಭಾವಿಸಿದ್ದರು. ಪ್ರತಿ ಉಡುಗರೆ ಗಳನ್ನು ಕೊಡಿಸಲು ಕೃಷ್ಣದೇವರಾಯನು ಅವರನ್ನು ಹುಡುಕಿಸಿದನು. ಅವರೆಲ್ಲಿಯೂ ಗೋಚರವಾಗಲಿಲ್ಲ ಕೃಷ್ಣದೇವರಾಯನು ಆ ಖಿಲ್ಲತ್ತು ಗಳನ್ನು ಹಾಗೆಯೇ ಇಡಿಸಿ ತನ್ನ ಬಿಡಾರಕ್ಕೆ ತೆರಳಿದನು.

ಸುಲ್ತಾನರ ಮಂತ್ರಿಯನ್ನು ಕರೆಕಳುಹಿಸಿ ಅವರ ಮೂಲಕ ಬಿಜಾ ಪುರದ ಇಸ್ಮಾಯಿಲ್‌ಷಹನಿಗೆ ಒಂದು ಪತ್ರವನ್ನು ಬರೆಯಿಸಿ ಉಡುಗರೆ ಗಳೊಂದಿಗೆ ದೂತರ ಮುಖಾಂತರ ಆ ಪತ್ರಿಕೆಯನ್ನು ಬಿಜಾಪುರಕ್ಕೆ ಕಳುಹಿಸಿಕೊಟ್ಟನು.

“ ಬಿಜಾಪುರದ ಸುಲ್ತಾನರಾದ ಇಸ್ಮಾಯಿಲ್‌ಷಹರವರಿಗೆ— ನೀವು ನಮ್ಮ ಸುಲ್ತಾನರವರ ಪಟ್ಟಾಭಿಷೇಕ ಮಹೋತ್ಸವದಲ್ಲಿ ಕಳಿಸಿಕೊಟ್ಟ ಖಿಲ್ಲತ್ತುಗಳನ್ನು ನಮ್ಮ ಸುಲ್ತಾನರವರು ಸಂತೋಷದಿಂದ ಸ್ವೀಕರಿಸಿರು ತ್ತಾರೆ. ಪೂರ್ವದ ಕಹಿನೆನಪುಗಳನ್ನೆಲ್ಲಾ ಮರೆತು ನೀವು ಸೌಜನ್ಯವನ್ನು ತೋರಿದ್ದಕ್ಕಾಗಿ ಸುಲ್ತಾನರವರು ಸಂತೋಷಪಡುತ್ತಾರೆ ಮತ್ತು ಪ್ರಾಚೀನ ರಾಜ್ಯವನ್ನು ಪುನಃ ಪ್ರತಿಷ್ಠಾಪನೆ ಮಾಡಿದ ವಿಜಯನಗರದ ಸಾಮ್ರಾಟ್ ಕೃಷ್ಣದೇವರಾಯರೂ ನಿಮ್ಮ ಈ ಸೌಹಾರ್ದಕ್ಕಾಗಿ ಸಂತೋಷವನ್ನು ಸೂಚಿಸುತ್ತಾರೆ. ಗುಲ್ಬರ್ಗವು ಬಹಮನಿ ಸುಲ್ತಾನರುಗಳ ಮೂಲಸ್ಥಾನ ವೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಹೀಗೆಯೇ ಸ್ನೇಹದಿಂದ ನಡೆದು

ಕೊಂಡು ಬರಬೇಕೆಂದು ನಮ್ಮ ಸುಲ್ತಾನರವರು ಕೋರುತ್ತಾರೆ. ನಮ್ಮ ಆಸ್ಥಾನದಿಂದ ಈ ಪತ್ರದೊಂದಿಗೆ ಕಳಿಸಿಕೊಟ್ಟಿರುವ ಉತ್ಸವದ ಉಡುಗರೆಗಳನ್ನು ನೀವು ಸ್ವೀಕರಿಸಬೇಕೆಂದು ಕೋರುತ್ತೇನೆ.

ಅಬ್ದುಲ್ ಕರೀಂಖಾನ್
ಗುಲ್ಬರ್ಗದ ಮಹಾಪ್ರಧಾನಿ

ಗುಲ್ಬರ್ಗದಿಂದ ದೂತರು ಈ ಪತ್ರವನ್ನೂ ಉಡುಗರೆಗಳನ್ನೂ ಬಿಜಾಪುರಕ್ಕೆ ತೆಗೆದುಕೊಂಡುಹೋಗಿ ಸುಲ್ತಾನರಿಗೆ ಒಪ್ಪಿಸಿದರು. ಸುಲ್ತಾನನು ಆಶ್ಚರ್ಯಚಕಿತನಾಗಿ ಆ ಪತ್ರವನ್ನು ಓದಿಕೊಂಡು ಕ್ರೋಧೋದ್ದೀಪಿತನಾದನು. ತಕ್ಷಣವೇ ಅಸದ್‌ಖಾನನನ್ನು ಕರೆಸಿ ದರಬಾರಿನಲ್ಲಿ ಆ ಪತ್ರವನ್ನು ಖಾನನ ಕಡೆಗೆ ಬಿಸಾಡಿ, ಓದಿನೋಡು ಅಸದ್‌ಖಾನ್! ಇಗೋ ಇಲ್ಲಿರುವ ಖಿಲ್ಲತ್ತುಗಳನ್ನು ಈ ದರಬಾರಿನಲ್ಲಿ ಪರಿಗ್ರಹಿಸು ನೀನು ನಮ್ಮಲ್ಲಿ ತೋರಿಸಿರುವ ಸ್ವಾಮಿಭಕ್ತಿಗೆ ಇದು ನಿದರ್ಶನವಾಗಿದೆ ಎಂದು ಹೇಳಿದನು.

ಅಸದ್‌ಖಾನನು ಆ ಪತ್ರವನ್ನು ಓದಿಕೊಂಡು ಮೌನದಿಂದ ತಲೆಬಾಗಿ ನಿಂತುಕೊಂಡನು. ಇಸ್ಮಾಯಿಲ್‌ಷಹನು, "ಅಸದ್‌ಖಾನ್ ನಿನ್ನ ಮೋಸ ಕೃತ್ಯಗಳೆಲ್ಲವೂ ಬಯಲಿಗೆ ಬಂದಿವೆ. ಗುಲ್ಬರ್ಗದ ಪಟ್ಟಾಭಿಷೇಕಕ್ಕೆ ಉಡುಗರೆಗಳನ್ನು ಕಳಿಸಿದವನು ನೀನು ಆದರಿಂದ ನಮ್ಮ ಶಿರಸನ್ನೇ ನೀನು ಕತ್ತರಿಸಿ ಕಳಿಸಿದಷ್ಟು ನಮಗೆ ಅಪಮಾನವಾದಂತಾಗಿದೆ. ನೀನು ಮೊದಲಿನಿಂದಲೂ ನಮ್ಮಲ್ಲಿ ಭಿನ್ನತಂತ್ರವನ್ನೇ ನಡೆಸುತ್ತ ಬಂದಿದ್ದಿ. ಕೃಷ್ಣದೇವರಾಯನೊಡನೆ ಮೊದಲು ಯುದ್ಧವನ್ನು ತಂದೊಡ್ಡಿದವನು ನೀನು. ಯುದ್ಧದಲ್ಲಿ ನಮ್ಮನ್ನು ಹಿಮ್ಮೆಟ್ಟುವಂತೆ ಮಾಡಿದವನು ನೀನು. ನಮ್ಮ ಪ್ರಸಿದ್ಧ ಸೇನಾಧಿಪತಿಗಳ ಮೇಲಿನ ಮತ್ಸರದಿಂದ ಉದ್ರೇಕಿಸಿ ಅವರನ್ನು ಮುಂದೆ ನುಗ್ಗಿಸಿ ಸೆರೆಸಿಕ್ಕುವಂತೆ ಮಾಡಿದವನು ನೀನು. ಕೃಷ್ಣದೇವರಾಯನಲ್ಲಿಗೆ ಹೋಗಿ ಅವರನ್ನು ತಂತ್ರದಿಂದ ಕೊಲ್ಲಿಸಿದವನು ನೀನು. ನನ್ನನ್ನೂ ನಮ್ಮ ಮಾತೆಯನ್ನೂ ನೀನು ಕೃಷ್ಣದೇವರಾಯನಿಗೆ ಹಿಡಿದು

ಕೊಡುತ್ತಿದ್ದೆ. ನಮ್ಮ ಜಾಗರೂಕತೆಯಿಂದ ನಾವು ಉಳಿದುಕೊಂಡೆವು. ನಿನ್ನಮೇಲಿನ ಆರೋಪಗಳಿಗೆ ಪ್ರತ್ಯಕ್ಷ ನಿದರ್ಶನವು ದೊರೆಯಲೆಂದು ಕಾಯುತ್ತಿದ್ದೆ. ಈಗ ಸಿಕ್ಕಿದೆ. ನಿನ್ನನ್ನು ತಲೆ ಕಡಿಸಿಹಾಕಿಸುತ್ತಿದ್ದೆ. ನನ್ನ ತಾಯಿಯು ಕೈಹಿಡಿದು ನನ್ನನ್ನು ತಡೆದು ನಿನ್ನನ್ನು ಬದುಕಿಸಿದಳು. ನೀನು ಒಂದು ಕ್ಷಣವೂ ನಮ್ಮ ರಾಜಧಾನಿಯಲ್ಲಿ ಇರಕೂಡದು. ನೀನು ಗುಲ್ಬರ್ಗದ ಹೊಸ ಸುಲ್ತಾನರುಗಳ ಆಶ್ರಯದಲ್ಲಿ ಹೋಗಿ ಸೇರಿಕೋ. ನಿನಗೆ ಅದು ತಕ್ಕ ಸ್ಥಳ ಈ ಖಿಲ್ಲತ್ತುಗಳನ್ನೆಲ್ಲಾ ನೀನೇ ತೆಗೆದುಕೊಂಡು ಹೋಗು" ಎಂದು ಅಪ್ಪಣೆ ಮಾಡಿದನು.

ಅಸದ್‌ಖಾನನು ಮರುಮಾತನಾಡದೇ ದರಬಾರಿನಿಂದ ಹೊರಟು ಹೋದನು.

ಅವನು ತನ್ನ ಸೈನ್ಯಸಮೇತವಾಗಿ ಬೆಳಗಾವಿಗೆ ಹೋಗಿ ಸೇರಿಕೊಂಡನು.

೪

ಕೃಷ್ಣದೇವರಾಯನು ಮಂತ್ರಿ ಸೇನಾಧಿಪತಿಗಳೊಡನೆ, ತನ್ನ ಸೈನ್ಯಗಳನ್ನೆಲ್ಲಾ ವಿಜಯನಗರಕ್ಕೆ ಕಳುಹಿಸಿಕೊಟ್ಟನು. ತಾನು ತನ್ನ ಮೂವರು ಪತ್ನಿಯರೊಡನೆಯೇ ಮಿತಪರಿವಾರದೊಂದಿಗೆ ತಿರುಪತಿ ಕ್ಷೇತ್ರಕ್ಕೆ ಬಿಜಯ ಮಾಡಿದನು. ಆ ಕ್ಷೇತ್ರದಲ್ಲಿ ವೆಂಕಟೇಶ್ವರನ ನಿತ್ಯಸೇವೆಗಳನ್ನು ನೆರವೇರಿಸುತ್ತಾ ಕಾಲಕಳೆಯುತ್ತಿದ್ದನು. ವೆಂಕಟನಾಥನಿಗೆ ಅನೇಕ ಆಭರಣಗಳನ್ನು ಮಾಡಿಸಿ ಸಮರ್ಪಿಸಿದನು. ಚಿನ್ನದ ಗೋಪುರವನ್ನು ನಿರ್ಮಾಣ ಮಾಡಿಸಿದನು ಆ ದೇವರ ಹೆಸರಿನಲ್ಲಿ ಅನೇಕ ಗ್ರಾಮಭೂಮಿಗಳನ್ನೂ ಧನಕನಕಗಳನ್ನೂ ಅರ್ಪಿಸಿದನು. ದೇಶವಿದೇಶಗಳಿಂದ ಬಹುಮಂದಿ ವಿದ್ವಾಂಸರುಗಳು ಆ ಕ್ಷೇತ್ರಕ್ಕೆ ಬಂದು ಸಾರ್ವಭೌಮನ ಸಂದರ್ಶನಮಾಡಿ ಅನೇಕ ಉಡುಗರೆಗಳನ್ನೂ ದಾನದಕ್ಷಿಣೆಗಳನ್ನೂ ಪಡೆದು ಪೂರ್ಣ ಮನೋರಥರಾಗಿ ಹಿಂತಿರುಗುತ್ತಿದ್ದರು. ಹೀಗೆ ಮಾಸಗಳು ಕಳೆಯುತ್ತಿದ್ದವು. ಕೃಷ್ಣದೇವರಾಯನ ಸಹೋದರನಾದ ಅಚ್ಯುತರಾಯನು ತಿರುಪತಿಗೆ ಬಂದು ಸಾರ್ವಭೌಮನ ಸಂದರ್ಶನಮಾಡಿ ರಾಜಧಾನಿಗೆ ಹಿಂತಿರುಗಬೇಕೆಂದು ಸೂಚಿಸಿದನು. ಕೃಷ್ಣದೇವರಾಯನು, "ನನ್ನಮೇಲೆ ವೆಂಕಟೇಶ್ವರನ ಅನುಗ್ರಹವಾಗಿದೆ. ಈ ಕ್ಷೇತ್ರವನ್ನು ಬಿಟ್ಟುಬರಲು ನನಗೆ ಮನಸ್ಸಿಲ್ಲ. ವಿಜಯುಗರದ ಸಾಮ್ರಾಜ್ಯವು ಹರಿಹರ ಬುಕ್ಕರಾಯರ ಕಾಲಕ್ಕಿಂತಲೂ ಅತಿಶಯವಾಗಿ ಬೆಳೆದು ಸಮೃದ್ಧವಾಗಿದೆ. ನಮ್ಮ ಚಕ್ರಾಧಿಪತ್ಯದ ಆಜನ್ಮ ಶತ್ರುಗಳಾದ ಸುಲ್ತಾನರುಗಳು ಅಡಗಿಹೋಗಿದ್ದಾರೆ ಪೋರ್ಚುಗೀಸರು ನಮ್ಮ ಮಿತ್ರರಾಗಿದ್ದಾರೆ. ನಾನು ಆ ಸಿಂಹಾಸನಕ್ಕೆ ಸಲ್ಲಿಸಬೇಕಾದ ಸೇವೆ

ಮತ್ತೇನೂ ಉಳಿದಿಲ್ಲ. ನೀನು ವಿಜಯನಗರಕ್ಕೆ ಹೋಗು ರಾಜಪ್ರತಿನಿಧಿ ಯಾಗಿ ಅಲ್ಲಿಯೇ ಇರು. ಮಂತ್ರಿ ಸಾಳ್ವತಿಮ್ಮರಸನು ನಿನಗೆ ಸಹಾಯಕ ನಾಗಿರುತ್ತಾನೆ. ನೀವಿಬ್ಬರೂ ಅನ್ಯೋನ್ಯವಾಗಿ ಸಾಂಮ್ರಾಜ್ಯದ ಕಾರ್ಯಭಾರ ಗಳನ್ನು ಧರ್ಮದಿಂದ ನಿರ್ವಹಿಸಿರಿ ಎಂದು ಹೇಳಿಕಳಿಸಿದನು ಆದರೆ ಕೃಷ್ಣದೇವರಾಯನು ಬಹಳ ದಿನಗಳು ಅಲ್ಲಿ ದೇವತಾರಾಧನೆ ಮಾಡಿಕೊಂಡು ಸುಖವಾಗಿರಲು ಅವಕಾಶವಾಗಲಿಲ್ಲ. ದೇವರು ಎಂತಹ ಭಕ್ತರನ್ನಾದರೂ ಪರೀಕ್ಷಿಸದೇ ಬಿಡನು. ತಮ್ಮ ರಾಜ್ಯದಲ್ಲಿ ಮುಸಲ್ಮಾನರು ದಂಗೆ ಎದ್ದಿದ್ದಾ ರೆಂದು ಯಾವ ಅಧಿಕಾರಿಗಳಿಂದಲೂ ಅವರನ್ನು ದಮನಗೊಳಿಸಲು ಆಗಲಿಲ್ಲ ವೆಂದೂ ದೂತರು ಬಂದು ಕೃಷ್ಣದೇವರಾಯನಿಗೆ ಅರಿಕೆಮಾಡಿದರು.

ಕೃಷ್ಣದೇವನು ತನ್ನ ಮಡದಿಯರನ್ನು ತಿರುಪತಿಯ ಕ್ಷೇತ್ರದಲ್ಲಿಯೇ ಬಿಟ್ಟು ರಾಜಧಾನಿಯ ಕಡೆಗೆ ಹಿಂತಿರುಗಿದನು ಮಧ್ಯಮಾರ್ಗದಲ್ಲಿಯೇ ವಿಜಯನಗರದ ಸೈನ್ಯವು ಬಂದು ಕೃಷ್ಣದೇವರಾಯನನ್ನು ಸೇರಿಕೊಂಡಿತು. ತುರುಷ್ಕರು ದೊಂಬಿ ಎದ್ದಿದ್ದ ಪ್ರದೇಶಕ್ಕೆ ಕೃಷ್ಣದೇವರಾಯನು ಸೈನ್ಯ ಸಮೇತನಾಗಿ ಹೋದನು. ಕೆಂಭಾವಿ ಎಂಬ ಸ್ಥಳದಲ್ಲಿ ಆ ತುರುಷ್ಕ ವಿದ್ರೋಹಿಗಳಿಗೂ ಕೃಷ್ಣದೇವರಾಯನಿಗೂ ಘೋರ ಯುದ್ಧವಾಯಿತು ಆ ಯುದ್ಧದಲ್ಲಿ ಆರು ಸಾವಿರ ಮಂದಿ ಮುಸಲ್ಮಾನರು ಮಡಿದುಬಿದ್ದರು ಆ ಪ್ರದೇಶವೆಲ್ಲವೂ ನಿರ್ವಿರೋಧವಾಗಿಹೋಯಿತು ಕೃಷ್ಣದೇವರಾಯನು ಅಲ್ಲಿ ವಿಜಯಸ್ತಂಭವನ್ನು ನೆಡೆಸಿ ವಿಜಯನಗರದ ಸೇನಾಧಿಪತಿಯೊಬ್ಬನನ್ನು ಅಲ್ಲಿ ನೆಲೆಗೊಳಿಸಿ ವಿಜಯನಗರಕ್ಕೆ ಹಿಂತಿರುಗಿದನು.

ತಿರುಪತಿ ಕ್ಷೇತ್ರದಿಂದ ಕೃಷ್ಣದೇವರಾಯನ ಮೂವರು ರಾಣಿಯರೂ ರಾಜಧಾನಿಗೆ ಬಂದು ಸೇರಿದರು.

ರಾಜಕಾರ್ಯಗಳಲ್ಲಿ ಕೃಷ್ಣದೇವರಾಯನು ವಿಶೇಷ ವಿಮುಖ ನಾಗಿದ್ದುದು ಎಲ್ಲರಿಗೂ ಕಾಣಬರುತ್ತಿದ್ದಿತು. ಅವನ ಸೋದರ ಅಚ್ಯುತ ರಾಯನ ಪ್ರಾಬಲ್ಯವು ಅತಿಶಯವಾಗುತ್ತಾ ಬಂದಿತು. ಮಂತ್ರಿ ಸಾಳ್ವ ತಿಮ್ಮರಸನು ದಿನದಿನಕ್ಕೆ ಅಸಂತುಷ್ಟನಾಗುತ್ತ ಬಂದನು. ಸಾಳ್ವ

ತಿಮ್ಮರಸನು ಕೃಷ್ಣದೇವರಾಯನ ಸಂದರ್ಶನಮಾಡಿ ಹೇಳಿದನು—"ಮಹಾ ರಾಜರೇ! ರಾಜನೀತಿಯನ್ನು ನೀವು ಅರಿಯದವರಲ್ಲ. ತಮ್ಮಂಥಾ ಪ್ರಭು ಗಳು ರಾಜಕಾರ್ಯಗಳಲ್ಲಿ ವಿಮುಖರಾಗಿರುವುದು ರಾಜ್ಯಕ್ಕೆ ಕ್ಷೇಮಕರವಲ್ಲ. ಈ ವಿಜಯನಗರವು ನಿಮ್ಮ ಪ್ರಭುತ್ವದಲ್ಲಿ ಅಭ್ಯುದಯದ ಶಿಖರವನ್ನೇರಿತು. ಶತ್ರುಗಳು ಅಣಗಿಹೋದರು. ಸಮುದ್ರಾಂತದವರೆಗೆ ನಿಮ್ಮ ಪ್ರಭುತ್ವವು ನಿರರ್ಗಳವಾಗಿ ನಡೆಯುತ್ತಿತ್ತು. ನಿಮ್ಮ ಅನುಗ್ರಹದಿಂದ ನಾನು ಈ ಮಂತ್ರಿಪದವಿಯನ್ನು ಸ್ವೀಕರಿಸಿ ಸೇವೆ ಮಾಡಿದ್ದೇನೆ ನಿಮ್ಮೊಡನೆ ಅನೇಕ ಯುದ್ಧಗಳಲ್ಲಿ ಸೇರಿ ಯಶಸ್ಸನ್ನು ಪಡೆದಿದ್ದೇನೆ ಪ್ರಭುಗಳು ರಾಜಕಾರ್ಯ ಗಳಲ್ಲಿ ವಿಮುಖರಾಗಿರುವುದಕ್ಕೆ ಕಾರಣವೇನೆಂಬುದು ಎಷ್ಟು ಯೋಚಿಸಿದರೂ ಹೊಳೆಯದೇ ಇದೆ ನನಗೆ ಭಯವಾಗುತ್ತದೆ ತಾವು ಅಪ್ಪಣೆ ಕೊಟ್ಟರೆ ನಾನು ಈ ಅಧಿಕಾರವನ್ನು ಪರಿತ್ಯಜಿಸಿ ಯಾವುದಾದರೂ ದೂರದಲ್ಲಿರುವ ಕ್ಷೇತ್ರಕ್ಕೆ ಹೋಗಿ ವಾಸಮಾಡಿ ಕಾಲ ಕಳೆಯಬೇಕೆಂದಿದ್ದೇನೆ."

ಕೃಷ್ಣದೇವರಾಯನು "ತಿಮ್ಮರಸನೇ! ನೀನು ಹೇಳುವುದೆಲ್ಲಾ ಸರಿ ಯಾಗಿದೆ. ನನಗೆ ರಾಜಕಾರ್ಯಗಳಲ್ಲಿ ಅಭಿರುಚಿ ಇಲ್ಲವೆಂಬುದೇನೋ ನಿಜ. ಅದರ ಕಾರಣವನ್ನು ನಾನೇ ಹುಡುಕಿನೋಡಿದ್ದೇನೆ ಏನೂ ಗೋಚರ ವಾಗುತ್ತಿಲ್ಲ ಮಂತ್ರಿಗಳಾಗಲೀ ಸಾಮಂತರಾಗಲೀ ಸೇನಾಧಿಪತಿಗಳಾಗಲೀ ಯಾರು ನನ್ನಲ್ಲಿ ಭಕ್ತಿಯನ್ನು ತೊರೆದು ವರ್ತಿಸುತ್ತಿಲ್ಲ. ಈ ವಿಜಯನಗರ ದಲ್ಲಿ ದುರ್ದೈವವಶಾತ್ ರಾಜಸೋದರರೂ ಸಮೀಪಬಂಧುಗಳೂ ವಿರೋಧಿ ಗಳಾಗುವುದುಂಟು ನನಗೆ ಆ ಕೊರತೆಯೂ ಇಲ್ಲ. ನನ್ನ ಸೋದರರು ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಾರೆ ರಾಣಿಯರು ಪರಸ್ಪರ ಸ್ನೇಹದಿಂದ ನನ್ನಲ್ಲಿ ಅನುರಕ್ತರಾಗಿದ್ದಾರೆ ಪ್ರಜೆಗಳು ಅಪಾರ ಭಕ್ತಿಯನ್ನು ತೋರಿಸು ತ್ತಾರೆ ರಾಜರಿಗಿರಬೇಕಾದ ಎಲ್ಲ ಸುಖಗಳೂ ಹೀಗೆ ಪರಿಪೂರ್ಣವಾಗಿರು ವುದೇ ನನ್ನ ಸ್ತಂಭೀಭಾವಕ್ಕೆ ಕಾರಣವೆಂದು ಭಾವಿಸುತ್ತೇನೆ. ಇದನ್ನು ಯೋಚಿಸಿಯೇ ನಾನು ದೇವತಾ ಸಾನ್ನಿಧ್ಯದಲ್ಲಿ ನನ್ನ ಜನ್ಮವನ್ನು ಪೂರೈಸ ಬೇಕೆಂದು ಸಂಕಲ್ಪಿಸಿದ್ದೆ. ಅದು ದೈವಚಿತ್ತಕ್ಕೆ ಬಾರದಾಗಿದೆ. ಇಂಥಾ

ಪ್ರಸಂಗಗಳು ಬಂದಾಗ ಪೂರ್ವದ ರಾಜರುಗಳು ವನವಾಸಕ್ಕೆ ತೆರಳುತ್ತಿದ್ದರು. ಈ ಕಾಲದಲ್ಲಿ ಹಾಗೆ ಮಾಡಲಾಗುವುದಿಲ್ಲ. ನನಗೆ ವಯಸ್ಸಾಗದಿದ್ದರೂ ನನ್ನ ಪ್ರಭುತ್ವದ ಅಸ್ತಮಾನ ಸಮಯವು ಸಮೀಪಿಸುತ್ತಿದೆಯೆಂದು ಭಾಸ ವಾಗುತ್ತದೆ. ಇನ್ನುಮುಂದೆ ಪೂರ್ಣ ರಾಜ್ಯಭಾರದ ಹೊರೆಯು ನಿಮ್ಮಗಳ ಮೇಲೆಯೇ ಬಿದ್ದಿದೆ. ಇದು ಆತ್ಮಸಾಕ್ಷಿಯಾದ ಮಾತು" ಎಂದು ಹೇಳಿದನು.

ತಿಮ್ಮರಸನ ಕಣ್ಣುಗಳಲ್ಲಿ ನೀರು ಸುರಿಯಲಾರಂಭಿಸಿತು. ಅವನು ಗದ್ಗದಿತ ಕಂಠನಾಗಿ "ಪ್ರಭುವೇ! ನಿಮ್ಮ ಬಾಯಿಂದ ಈ ಮಾತುಗಳನ್ನು ಕೇಳಲು ನನ್ನಿಂದ ಸಾಧ್ಯವಿಲ್ಲ ನೀವೇ ಇದಕ್ಕೆ ಏನಾದರೊಂದು ಮಾರ್ಗ ವನ್ನು ಹುಡುಕಬೇಕು" ಎಂದು ಕೈಮುಗಿದು ಹೇಳಿದನು.

ಕೃಷ್ಣದೇವನು "ತಿಮ್ಮರಸನೇ! ಅದನ್ನು ಯೋಚಿಸಿದ್ದೇನೆ. ದೈವ ಕೃಪೆಯಿಂದ ಆ ಸೂಚನೆಯೂ ಬಂದಿರುತ್ತದೆ. ನನ್ನ ಪಟ್ಟದ ರಾಣಿ ತಿರುಮಲಾಂಬೆಯ ಉದರದಲ್ಲಿ ದೇವರು ಒಂದು ಅಂಕುರವನ್ನು ಕರುಣಿ ಸಿದ್ದಾನೆ. ಆ ಬಾಲಕ ತಿರುಮಲರಾಯನಿಗೆ ಪಟ್ಟಕಟ್ಟಬಹುದು. ನೀವೆಲ್ಲರೂ ಸಮ್ಮತಿಯಿತ್ತರೆ, ಆ ಕಾರ್ಯವನ್ನು ನೆರವೇರಿಸುತ್ತೇನೆ" ಎಂದನು.

ತಿಮ್ಮರಸನು "ಆರು ವರ್ಷಗಳ ಬಾಲಕನಾದ ತಿರುಮಲರಾಯನಿಗೆ ಪಟ್ಟಕಟ್ಟುವುದನ್ನು ಪ್ರಜೆಗಳು ಸಂಪೂರ್ಣವಾಗಿ ಸಮ್ಮತಿಸುವುದು ಕಷ್ಟ. ಸಾಮಂತರೂ ಒಪ್ಪಲಾರರು. ಮಹಾಪ್ರಭುಗಳು ಈ ವಿಚಾರಗಳನ್ನು ಚೆನ್ನಾಗಿ ಪುನರ್ವಿಮರ್ಶೆಮಾಡಿಕೊಳ್ಳಬೇಕು. ದುಡುಕಿ ಯಾವ ಕಾರ್ಯವನ್ನು ಮಾಡುವುದೂ ಶುಭಪ್ರದವಾಗದು. ಮಂತ್ರಿಪದವಿಯು ಅತ್ಯಂತ ಕಠಿಣ ವಾದುದು. ಒಂದೊಂದು ಬಾರಿ ಪ್ರಭುಗಳ ಚಿತ್ತಕ್ಕೆ ವಿರೋಧವಾಗಿ ಹೇಳ ಬೇಕಾಗುತ್ತೆ. ಅದು ಮಂತ್ರಿಗಳ ಹಣೆಯಬರಹ ಈಗ ಆ ದುರ್ವಿಧಿಯು ನನ್ನ ಕಡೆಗೆ ತಿರುಗಿದೆ. ಪ್ರಭುಗಳಲ್ಲಿ ಇಷ್ಟೇ ಬಿನ್ನಹ ಮಾಡ ಬಹುದು" ಎಂದು ಹೇಳಿ ಕೃಷ್ಣದೇವರಾಯನ ಅಪ್ಪಣೆ ಪಡೆದು ಮನೆಗೆ ತೆರಳಿದನು.

ಅಂದಿನಿಂದ ಮಂತ್ರಿ ತಿಮ್ಮರಸನು ಅರಮನೆಗೆ ಬರುವುದನ್ನೇ ಬಿಟ್ಟು ಬಿಟ್ಟನು. ಬಹುಕಾಲ ಈ ವಿಷಯವು ರಹಸ್ಯದಲ್ಲಿರಲಿಲ್ಲ. ಮೊದಲು ರಾಣಿವಾಸದಲ್ಲಿ ರಾಣಿಯರಿಗೆ ತಿಳಿಯಿತು. ಮಹಾರಾಜರು ತಮ್ಮ ಏಕ ಮಾತ್ರ ಪುತ್ರನಿಗೆ ಪಟ್ಟಕಟ್ಟುತ್ತೇವೆಂದರೆ ಮಂತ್ರಿ ತಿಮ್ಮರಸನು ಸಮ್ಮತಿಸಲಿಲ್ಲ. ಇದರ ಕಾರಣವು ಏನಿರಬಹುದು? ಎಂದು ಪರಸ್ಪರ ರಾಣಿಯರು ಆಲೋಚನೆ ಮಾಡಿದರು ಈ ರಾಜ್ಯದಲ್ಲಿ ರಾಜಸಂತತಿಯನ್ನು ಅಪ್ರಬುದ್ಧ ರೆಂಬ ಕಾರಣದಿಂದಲೋ ನಿಸ್ಸತ್ವರೆಂಬ ಕಾರಣದಿಂದಲೋ ಮೂಲೆಗೆ ತಳ್ಳಿ ಮಂತ್ರಿಗಳೇ ಸಿಂಹಾಸನವನ್ನು ಆಕ್ರಮಿಸುವ ನಿದರ್ಶನಗಳು ಬೇಕಾದಷ್ಟಿವೆ. ನಮ್ಮ ಪೂರ್ವೀಕರೇ ಅದಕ್ಕೆ ಸಾಕ್ಷಿ ಈಗ ಪುನಃ ಅದೇ ಚಕ್ರವು ಪರಿವರ್ತಿತವಾಗುತ್ತಿದೆ ಎಂದು ರಾಣಿಯರು ಮಾತನಾಡಿಕೊಂಡರು. ರಾಜಕುಮಾರ ತಿರುಮಲರಾಯನಿಗೆ ಪಟ್ಟಕಟ್ಟಿಸಿಯೇ ಬಿಡಬೇಕು ಎಂದು ರಾಣಿಯರು ಹರತೊಟ್ಟರು.

ದರಬಾರಿನ ಉನ್ನತಾಧಿಕಾರಿಗಳಲ್ಲಿಯೂ ಈ ಮಾತುಗಳು ಹರಡಿ ದವು. ಹಲವರು ಆಪ್ತರಾದ ಅಧಿಕಾರಿಗಳು ಮಂತ್ರಿ ತಿಮ್ಮರಸನಲ್ಲಿ ಈ ಪ್ರಸ್ತಾಪವನ್ನು ಮಾಡಿದರು ರಾಣಿಯರು ಮಂತ್ರಿಯ ವಿಚಾರದಲ್ಲಿ ಅಸಂತುಷ್ಟರಾಗಿದ್ದಾರೆಂದು ತಿಳಿಸಿದರು ಮಂತ್ರಿ ತಿಮ್ಮರಸನು "ಅದು ಸಹಜವಾಗಿಯೇ ಇದೆ. ಮಾತೃವರ್ಗದವರು ಮುದ್ದುಮಗನಿಗೆ ಪಟ್ಟ ಕಟ್ಟಬೇಕೆಂದು ಆಶಿಪಡುವುದರಲ್ಲಿ ಆಶ್ಚರ್ಯವೇನಿದೆ? ಮಹಾರಾಜರು ಕೂಡಾ ಪುತ್ರಪ್ರೇಮದಿಂದ ಆ ಸಲಹೆಗೆ ತಲೆದೂಗಿರಬಹುದು. ದೇಶದಲ್ಲಿ ಮಹಾಜನರೂ ವಿದ್ವತ್‌ಜನರೂ ಸಾಮಂತ ನರಪತಿಗಳೂ ಸಮ್ಮತಿಸದೇ ಆ ಪಟ್ಟಾಭಿಷೇಕಕ್ಕೆ ನಾವು ಸಮ್ಮತಿಗೊಡುವುದಿಲ್ಲ. ರಾಜಪುತ್ರನು ವಿದ್ಯಾ ವಿನಯಸಂಪನ್ನನಾಗಿ ಪರಾಕ್ರಮಶಾಲಿಯಾಗಿರಬೇಕು. ಹಾಗಿದ್ದರೆ ಮಾತ್ರ ಅವರಿಗೆ ರಾಜತ್ವವು ಸಲ್ಲುತ್ತದೆ. ರಾಜತ್ವವೆಂಬುದು ಹುಡುಗಾಟಿಕೆಯ ಮಾತಲ್ಲ. ಇಡೀ ಹಿಂದೂಸ್ಥಾನವು ಒಪ್ಪುವಂಥದಾಗಿರಬೇಕು" ಎಂದು ಹೇಳುತ್ತಿದ್ದನು.

ಕೃಷ್ಣದೇವರಾಯನು ಹೀಗೆ ಬಹಳ ದಿನಗಳನ್ನು ಕಳೆಯಲಿಲ್ಲ. ಯಾರೊಡನೆಯೂ ಆಲೋಚನೆ ಮಾಡಲೂ ಇಲ್ಲ. ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳಬಹುದು. ತನ್ನ ಸಿಂಹಾಸನಕ್ಕೆ ತನ್ನ ಮಗನಿಗೇ ಪಟ್ಟ ಕಟ್ಟುವ ವಿಚಾರದಲ್ಲಿ ಯಾರೊಡನೆ ಆಲೋಚನೆ ಮಾಡತಕ್ಕದ್ದೇನಿದೆ ? ಕುಮಾರ ತಿರುಮಲರಾಯನು ಇಂದು ಬಾಲ್ಯಾವಸ್ಥೆಯಲ್ಲಿದ್ದಾನೆಂಬುದು ನಿಜ. ನಾಳೆ ಪ್ರೌಢಾವಸ್ಥೆಗೆ ಬಂದೇಬರುತ್ತಾನೆ ಎಂದು ತನ್ನಷ್ಟಕ್ಕೆ ತಾನೇ ಆಲೋಚನೆಮಾಡಿಕೊಂಡು ಮಗನ ಪಟ್ಟಾಭಿಷೇಕಕ್ಕೆ ಸಜ್ಜುಗೊಳಿಸುವಂತೆ ಅರಮನೆಯ ಅಧಿಕಾರಿಗಳಿಗೆ ಅಪ್ಪಣೆ ಮಾಡಿದನು. ಹಾಗೆಯೇ ತನಗೆ ಆಪ್ತರಾದ ಹಲವಾರು ಸಾಮಂತರಾಜರುಗಳಿಗೆ ಓಲೆಗಳನ್ನು ಬರೆಸಿ ಕಳಿಸಿದನು ಸಾಮಾನ್ಯವಾಗಿ ಸಂಪ್ರದಾಯಪ್ರಕಾರ ಎಲ್ಲರಿಗೂ ಕರೆಯೋಲೆಗಳು ಹೋದವು. ನಿಶ್ಚಯವಾಗಿದ್ದ ಸುಮುಹೂರ್ತದಲ್ಲಿ ಶಾಸ್ತ್ರೋಕ್ತವಾಗಿ ತಾನೇ ಮುಂದೆನಿಂತು ತಿರುಮಲರಾಯನಿಗೆ ಪಟ್ಟಾಭಿಷೇಕವನ್ನು ನೆರವೇರಿಸಿದನು.

ಮಾರನೆಯ ದಿನವೇ ಸಿಂಹಾಸನಾರೋಹಣ, ನಗರದ ಉತ್ಸವಗಳು ಸಾಂಗವಾಗಿ ನೆರವೇರಿಸಲ್ಪಟ್ಟವು. ಅಂದಿನಿಂದ ರಾಜ್ಯಭಾರವೆಲ್ಲವೂ ತಿರುಮಲರಾಯನ ಹೆಸರಿನಲ್ಲಿ ನಡೆಯಲು ಆರಂಭವಾದವು ಅಚ್ಯುತರಾಯನ ಪ್ರಧಾನಮಂತ್ರಿತ್ವದಲ್ಲಿ ಅಧಿಕಾರವು ನಡೆಯಲಾರಂಭವಾಯಿತು.

ಮಂತ್ರಿಯಾಗಿದ್ದ ಸಾಳ್ವ ತಿಮ್ಮರಸನು ಈ ಕಾರ್ಯಗಳಲ್ಲಿ ಭಾಗ ವಹಿಸಲಿಲ್ಲ ಪ್ರತ್ಯಕ್ಷವಾಗಿ ವಿರೋಧವನ್ನು ತೋರಲೂ ಇಲ್ಲ. ಸಾಳ್ವ ತಿಮ್ಮರಸನಿಗೆ ಸಲ್ಲುತ್ತಿದ್ದ ಮಾನಮರ್ಯಾದೆಗಳೂ ವರ್ಷಾಶನಗಳೂ ಯಥಾ ಪ್ರಕಾರವಾಗಿ ಸಲ್ಲುತ್ತಲೇ ಇದ್ದವು ದೇಶದಲ್ಲಿ ಜನರು ಮಾತ್ರ ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ತಿಮ್ಮರಸನಿಗೂ ಪ್ರಭು ಕೃಷ್ಣದೇವ ರಾಯನಿಗೂ ವೈಮನಸ್ಯವು ಬೆಳೆಯುತ್ತಿದೆಯೆಂದು ಜನವದಂತಿಯು ಪ್ರಬಲ ವಾಗಿ ಹಬ್ಬಿಹೋಗಿತ್ತು. ಈ ಸಮಯದಲ್ಲಿ ಕೃಷ್ಣದೇವರಾಯನ ವರ್ಧಂತಿಯ ಉತ್ಸವವು ಬಂದಿತು. ಸಂಪ್ರದಾಯದಂತೆ ಆ ವರ್ಷವೂ ಉತ್ಸವಗಳು

ನೆರವೇರಿದವು. ಅಂದಿನ ದರ್ಬಾರಿನಲ್ಲಿ ತಿಮ್ಮರಸನು ಭಕ್ತಿಪೂರ್ವಕವಾಗಿ ಉಡುಗರೆಗಳನ್ನು ತಂದೊಪ್ಪಿಸಿ, ಕೃಷ್ಣದೇವನ ಸಂದರ್ಶನವನ್ನು ಮಾಡಿದನು.

ಕೃಷ್ಣದೇವರಾಯನು ಅಂದಿನ ದರ್ಬಾರಿನ ಕಾರ್ಯಕಲಾಪಗಳೆಲ್ಲವೂ ಪೂರೈಸಿದನಂತರ ಮಂತ್ರಿಯಾದ ಸಾಳ್ವತಿಮ್ಮರಸನ ಕೈಹಿಡಿದು ಅರಮನೆಯೊಳಗೆ ಕರೆದುಕೊಂಡು ಹೋದನು. ಅವರಿಬ್ಬರಿಗೂ ಸೌಜನ್ಯದ ಮಾತುಕಥೆಗಳು ನಡೆದವು. ತಿಮ್ಮರಸನು, ಕುಮಾರ ತಿರುಮಲರಾಯನ ಪಟ್ಟಾಭಿಷೇಕ ನಡೆದಂದಿನಿಂದಲೂ ಉದಾಸೀನನಾಗಿರುವುದು ತರವಲ್ಲವೆಂದೂ ಅದರಿಂದ ತನ್ನ ಮನಸ್ಸು ಖಿನ್ನವಾಗಿದೆಯೆಂದೂ ತಿಳಿಸಿದನು.

ತಿಮ್ಮರಸನು, " ನಾನು ಯಾವ ವಿಚಾರಗಳಲ್ಲಿಯೂ ಔದಾಸೀನ್ಯವನ್ನು ವಹಿಸಿಲ್ಲ ಮಹಾರಾಜರ ವಿಷಯದಲ್ಲಿ ಅದೇ ಗೌರವವನ್ನು ಇಟ್ಟುಕೊಂಡಿದ್ದೇನೆ. ತಮ್ಮ ಹೊಟ್ಟೆಯಲ್ಲೇ ಹುಟ್ಟಿದ ರಾಜಕುಮಾರರ ವಿಷಯದಲ್ಲಿ ನನಗೂ ಪ್ರೀತಿವಿಶ್ವಾಸಗಳುಂಟು. ಆದರೆ ಈ ರಾಜ್ಯಭಾರವು ಚೆನ್ನಾಗಿಲ್ಲವೆಂದು ನನ್ನ ಅಭಿಪ್ರಾಯವು ಮಾತ್ರ ಸ್ಥಿರವಾಗಿಯೇ ಇದೆ. ಈಗಲೂ ಪ್ರೌಢಪ್ರತಾಪರಾದ ಮಹಾರಾಜರು ಇರುವಾಗ ಬಾಲಕನ ಹೆಸರಿನಲ್ಲಿ ರಾಜ್ಯಭಾರ ನಡೆಸುವುದು ಸರ್ವಲೋಕ ಸಮ್ಮತವಲ್ಲವೆಂದೇ ನನ್ನ ಅಭಿಮತವಾಗಿದೆ. ಮಂತ್ರಿಪದವಿಯು ಶಾಶ್ವತವಾದುದಲ್ಲ. ಎಂದಿಗಾದರೂ ಅದು ಮುಕ್ತಾಯವಾಗತಕ್ಕದ್ದೇ. ನನ್ನ ಮಕ್ಕಳು ಮೊಮ್ಮಕ್ಕಳು ವಂಶಪಾರಂಪರ್ಯವಾಗಿ ಈ ಮಂತ್ರಿಪದವಿಯು ನಡೆಯಬೇಕೆಂದು ನನಗೆ ಅಭಿಲಾಷೆಯಿಲ್ಲ. ಅದು ನ್ಯಾಯವೂ ಅಲ್ಲ ನಾನು ಜೀವಂತನಾಗಿರುವವರೆಗೆ ತಮ್ಮ ಆಜ್ಞೆಗೆ ತಲೆಬಾಗಿದವನಾಗಿದ್ದೇನೆ. ದೇಶದಲ್ಲಿ ಯುದ್ಧಗಳಾಗಲೀ ಅರಾಜಕತೆಯಾಗಲೀ ಸಂಭವಿಸಿದರೆ ನನ್ನ ಸೇವೆಯು ತಮಗಾಗಿ ಮುಡಿಪು ಇಡಲ್ಪಟ್ಟಿದೆ" ಎಂದು ಹೇಳಿದನು.

ಕೃಷ್ಣದೇವರಾಯನು ಮಂತ್ರಿಗಳು ಮಾತಿನಲ್ಲಿ ಮಧುರವಾಗಿ ಮಾತನಾಡಿದರು. ನನ್ನ ಮನಸ್ಸಿಗೆ ಸಂತೃಪ್ತಿಯಾಗಲಿಲ್ಲ. ನಿಸ್ಸೀಮ ರಾಜಭಕ್ತರೆನಿಸಿದ ತಿಮ್ಮರಸರವರೇ ಔದಾಸೀನ್ಯವನ್ನು ತಳೆದಿರುವಾಗ ಸಾಮಾನ್ಯರು

ಉದಾಸೀನರಾಗಿರುವುದು ಸಮಯ ಬಂದರೆ ವಿರೋಧಿಗಳಾಗುವುದು ಅತಿಶಯವೇನೂ ಅಲ್ಲ ಎಂದು ಹೇಳಿ ಮಂತ್ರಿಯನ್ನು ಕಳುಹಿಸಿಕೊಟ್ಟನು. ದೇಶದಲ್ಲಿ ನಾನಾಕಡೆಗಳಲ್ಲಿ ಅರಾಜಕತೆಯ ಅಂಕುರಗಳು ತಲೆದೋರಲು ಆರಂಭವಾದವು. ಆಂಧ್ರರಾಜ್ಯದಲ್ಲಿ ಅಚ್ಯುತರಾಯನು ಸ್ವತಃ ಹೋಗಿ ಅರಾಜಕತೆಯನ್ನು ಅಣಗಿಸಲು ಪ್ರಯತ್ನಪಡುತ್ತಿದ್ದನು ಆ ಸಮಯದಲ್ಲಿ ತಿಮ್ಮರಸನ ಮಗನಾದ ತಿಮ್ಮಣ್ಣ ದಂಡನಾಯಕನನ್ನು ಅಚ್ಯುತರಾಯನು ಕರೆಕಳುಹಿಸಿದನು.

ತಿಮ್ಮಣ್ಣ ದಂಡನಾಯಕನು ಅಚ್ಯುತರಾಯನ ಸಹಾಯಕ್ಕೆ ಹೋಗಿ ಪಾಳೆಯಗಾರರುಗಳನ್ನು ಅಣಗಿಸಿ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಬಂದು ಒಪ್ಪಿಸಿದನು. ಅಚ್ಯುತರಾಯನು ತಿಮ್ಮಣ್ಣ ದಂಡನಾಯಕನ ಪರಾಕ್ರಮವನ್ನು ಪ್ರಶಂಸೆಮಾಡಿ ತಿರುಮಲರಾಯನ ಎದುರಿನಲ್ಲಿ ಉಡುಗರೆ ಗಳನ್ನು ಕೊಡಿಸಿದನು. ತಿಮ್ಮಣ್ಣ ದಂಡನಾಯಕನು ಅವುಗಳನ್ನು ಸ್ವೀಕಾರ ಮಾಡದೇ ದರಬಾರಿನಿಂದ ಹೊರಟುಹೋದನು ಅಚ್ಯುತರಾಯನಿಗೆ ಬಹಳವಾಗಿ ಕೋಪಬಂದಿತು. ಸಿಂಹಾಸನಕ್ಕೆ ದಂಡನಾಯಕನು ಅವ ಮರ್ಯಾದೆಯಿಂದ ನಡೆದುಕೊಂಡನೆಂದೂ ಆ ಅಪರಾಧಕ್ಕೆ ಅವನು ಶಿಕ್ಷಾರ್ಹ ನೆಂದೂ ಅಚ್ಯುತರಾಯನು ಸಾರಿ ಹೇಳಿದನು. ಪುನಃ ತಿಮ್ಮಣ್ಣ ದಂಡ ನಾಯಕನು ದರಬಾರಿಗೆ ಬರಲೇ ಇಲ್ಲ. ಅವನು ರಾಜಧಾನಿಯನ್ನು ಬಿಟ್ಟು ಚಂದ್ರಗಿರಿಯ ಕಡೆ ಹೊರಟುಹೋಗಿದ್ದನು. ಅಚ್ಯುತರಾಯನು ಔದಾಸೀನ್ಯವನ್ನು ತೋರುತ್ತಾ ತಿಮ್ಮಣ್ಣ ದಂಡನಾಯಕನಮೇಲೆ ಕಣ್ಣಿಟ್ಟಿ ದ್ದನು. ಅಚ್ಯುತರಾಯನು ಚಂದ್ರಗಿರಿಯ ಕಡೆಗೆ ಆಗಾಗ ಹೋಗಿಬರುವ ಪದ್ಧತಿಯಿತ್ತು. ಆ ನೆಪಮಾಡಿಕೊಂಡು ಅಚ್ಯುತರಾಯನು ಚಂದ್ರಗಿರಿಗೆ ಹೊರಟನು. ಅಲ್ಲಿದ್ದ ಅಧಿಕಾರಿಗಳು ತಿಮ್ಮಣ್ಣ ದಂಡನಾಯಕನು ವಿದ್ರೋಹಾಚರಣೆ ಮಾಡುತ್ತಿದ್ದಾನೆಂದು ಅಂತರಂಗದಲ್ಲಿ ಅಚ್ಯುತರಾಯನಿಗೆ ದೂರುಕೊಟ್ಟರು. ಅಚ್ಯುತರಾಯನು ಬಹು ಪ್ರಯಾಸದಿಂದ ತಿಮ್ಮಣ್ಣ ದಂಡನಾಯಕನನ್ನು ಕರೆತರಿಸಿದನು. ಅವರಿಬ್ಬರಿಗೂ ಮಾತುಕಥೆಗಳಾದವು.

ಅಚ್ಯುತರಾಯನು ತಿಮ್ಮಣ್ಣ ನೀನು ಪರಾಕ್ರಮಿಯೆಂಬುದು ನಮಗೆ ಸಂತೋಷವನ್ನುಂಟುಮಾಡಿದೆ. ಆದರೆ ದರಬಾರಿನಲ್ಲಿ ನೀನು ಗೌರವದಿಂದ ವರ್ತಿಸಲಿಲ್ಲ. ಅದರಿಂದ ಮಹಾಪ್ರಭುಗಳ ಆಗ್ರಹಕ್ಕೆ ಪಾತ್ರನಾಗಿದ್ದೀಯೆ. ಈ ಪ್ರಾಂತ್ಯದಲ್ಲಿ ನೀನು ವಿದ್ರೋಹಾಚರಣೆ ಮಾಡುತ್ತಿದ್ದೀಯೆಂದು ದೂರು ಗಳು ಬಂದಿವೆ. ವಿಜಯನಗರದ ಮಹಾಮಂತ್ರಿಯಾಗಿದ್ದ ಸಾಳ್ವ ತಿಮ್ಮರಸರ ಗೌರವವನ್ನೂ ನಿನ್ನ ಪರಾಕ್ರಮವನ್ನೂ ಮನ್ನಿಸಿ ಮಹಾಪ್ರಭುಗಳು ಕ್ಷಮಿಸುತ್ತಿದ್ದಾರೆ. ನೀನು ಎಚ್ಚೆತ್ತುಕೊಂಡು ರಾಜಭಕ್ತನಾಗಿ ನಡೆದು ಕೊಳ್ಳುವುದು ಒಳ್ಳೆಯದು ಎಂದು ಬುದ್ಧಿವಾದ ಹೇಳಿದನು.

ತಿಮ್ಮಣ್ಣ ದಂಡನಾಯಕನು ದೂರವಿದ್ದರೆ ದೂರುಗಳು ಬರುವುದು ಸ್ವಾಭಾವಿಕ. ನನಗೆ ಬಾಲಕನಾದ ಪ್ರಭುವಿನಿಂದ ಉಡುಗರೆಗಳನ್ನು ಸ್ವೀಕರಿಸುವುದು ಅಗೌರವವೆನಿಸಿತು. ನಮ್ಮ ತಂದೆ ಸಾಳ್ವ ತಿಮ್ಮರಸರಿಗೆ ಗೌರವಕೊಟ್ಟು ನಾನು ದೇಶಭ್ರಷ್ಟನಾಗಿ ಅಲೆಯುತ್ತಿದ್ದೇನೆ. ಇಂಥಾ ಪರಿಸ್ಥಿತಿಯು ಬಹುದಿನಗಳು ನಡೆಯಲಾರವು. ನಿಮ್ಮ ಬಾಲರಾಜನ ಅಧಿಕಾರವನ್ನು ಮುಕ್ತಾಯಪಡಿಸದಿದ್ದರೆ, ಸಾಮ್ರಾಜ್ಯದಲ್ಲಿ ವಿಕ್ಷೋಭ ಉಂಟಾಗದಿರದು ಎಂದು ಹೇಳಿ ಅಚ್ಯುತರಾಯನ ಅಪ್ಪಣೆಯನ್ನು ಪಡೆಯದೇ ಹೊರಟುಹೋದನು. ಅಚ್ಯುತರಾಯನಿಗೆ ತಿಮ್ಮಣ್ಣನಮೇಲೆ ಉಗ್ರಕೋಪ ಬಂದರೂ ಅವನನ್ನು ನಿಗ್ರಹಿಸಲಾರದೇ ಹೋದನು. ಅಚ್ಯುತರಾಯನು ರಾಜಧಾನಿಗೆ ಹಿಂತಿರುಗಿ ಸಮಯೋಚಿತವಾಗಿ ತಿಮ್ಮಣ್ಣನ ವಿದ್ರೋಹಾ ಚರಣೆ ಯನ್ನು ಕೃಷ್ಣದೇವರಾಯನಿಗೆ ಅರಿಕೆಮಾಡಿದನು.

ಒಂದು ವರ್ಷ ಹೊರಳುವುದರೊಳಗೆ ರಾಜಧಾನಿಯಲ್ಲಿ ನಾನಾ ಪಕ್ಷ ವಿಪಕ್ಷಗಳು ಉದ್ಭವಿಸಿದವು ಕೃಷ್ಣದೇವರಾಯನಿಗೆ ಈ ವಾರ್ತೆಗಳೆಲ್ಲವೂ ತಿಳಿದುಬಂದು ಕ್ಷೋಭೆಯನ್ನುಂಟುಮಾಡಿದವು. ಕೃಷ್ಣದೇವರಾಯನು ಮಂತ್ರಿ ಸಾಳ್ವ ತಿಮ್ಮರಸನ ಮನೆಗೆ ಬಲವಾದ ಕಾವಲನ್ನು ಏರ್ಪಡಿಸಿದನು. ತಿಮ್ಮರಸನ ಅರಮನೆಗೆ ಯಾರೂ ಪ್ರವೇಶಮಾಡುವಂತಿಲ್ಲ ಹೊರಗೆ ಬರು ವಂತಿಲ್ಲ. ಇಂತಹ ಕಟ್ಟುಕಾವಲು ಏರ್ಪಾಡಾಯಿತು. ಈ ವಿಷಯಗಳು

ತಿಮ್ಮರಸನಿಗೂ ವಿಶೇಷ ಅಸಮಾಧಾನವನ್ನು ಉಂಟುಮಾಡಿದವು. ಅವನು ಸಮಾಧಾನವನ್ನು ತಳೆದು ರಹಸ್ಯವಾಗಿ ಅಚ್ಯುತರಾಯನ ಭೇಟಿಯನ್ನು ಮಾಡಿದನು. "ಯಾವ ಅಪರಾಧಕ್ಕಾಗಿ ನನಗೆ ಇಂಥಾ ಅಪಮಾನವು ಏರ್ಪಟ್ಟದೆ ?" ಎಂದು ಪ್ರಶ್ನಿಮಾಡಿದನು.

ಅಚ್ಯುತರಾಯನು, ತಿಮ್ಮರಸರವರೇ ಪ್ರತ್ಯಕ್ಷವಾಗಿ ನಿಮ್ಮ ಅಪರಾಧ ವೇನೂ ಕಾಣುತ್ತಿಲ್ಲ. ಹುಡುಕಿದರೂ ಸಿಕ್ಕುವಂತಿಲ್ಲ. ಈ ರಾಜಧಾನಿ ಯಲ್ಲಿಯೇ ಬಹುಜನ ಅಧಿಕಾರಿಗಳು ಮಹಾರಾಜರ ವಿರೋಧಿಗಳಾಗಿದ್ದಾರೆ. ಅದಕ್ಕೆಲ್ಲಾ ನಿಮ್ಮ ಪ್ರೋತ್ಸಾಹವೇ ಕಾರಣವೆಂದು ಮಹಾರಾಜರ ಮನ ವರಿಕೆಯಾಗಿದೆ. ನಿಮ್ಮ ಮಕ್ಕಳ ಅವಿನಯವಂತೂ ಸಹನೆಗೆ ಅತೀತ ವಾಗಿದೆ ಇಂತಹ ಪರಿಸ್ಥಿತಿಯಲ್ಲಿ ನಾನೇನು ಮಾಡಬಹುದು ? ಎಂದು ಪಶ್ಚಾತ್ತಾಪದಿಂದ ಹೇಳಿದನು.

ತಿಮ್ಮರಸನು ರಾಜ್ಯದಲ್ಲಿ ಅಸಂತುಷ್ಟಿಯೂ ಕ್ಷೋಭೆಯೂ ಎದ್ದಿರು ವುದು ನಿಜ ನನ್ನ ಮಕ್ಕಳು ವಿದ್ರೋಹಿಗಳಾಗಿ ನಡೆಯುತ್ತಿದ್ದಾರೆಂದು ನಿಮ್ಮಿಂದ ಕೇಳಿ ನನಗೆ ದುಃಖವೆನಿಸುತ್ತದೆ. ಮಹಾರಾಜರು ನನ್ನನ್ನು ವಿದ್ರೋಹಿಗಳ ಗುಂಪಿಗೆ ಸೇರಿದವನೆಂದು ಸಂದೇಹಪಡುವುದು ಆಶ್ಚರ್ಯಕರ ವಾಗಿದೆ. ನಾನು ವಿದ್ರೋಹವೆಣಿಸುವುದಾಗಿದ್ದರೆ ಈ ರಾಜಧಾನಿಯಲ್ಲಿ ಪ್ರಚಂಡವಾದ ವಿದ್ರೋಹಾನಲವು ಜ್ವಲಿಸುತ್ತಿದ್ದಿತು. ಅದರಲ್ಲಿ ನಾನೂ ಮಹಾರಾಜರೂ ನೀವೂ ಧುಮುಕಬೇಕಾಗುತ್ತಿದ್ದಿತು. ನನ್ನ ನಿರ್ಬಂಧ ಅಪಮಾನಗಳನ್ನು ನಾನು ಲೆಕ್ಕಿಸುವುದಿಲ್ಲ ಆದರೆ ಬಹುಕಾಲದಿಂದ ಭಕ್ತಿ ಯಿಂದ ಸೇವೆಮಾಡಿಕೊಂಡು ಬಂದಿರುವ ರಾಜಭಕ್ತರಿಗೆ ಇಂತಹ ಅಪಮಾನ ವಾದರೆ ರಾಜ್ಯಕ್ಕೂ ಮಹಾರಾಜರಿಗೂ ಕ್ಷೇಮ ಉಂಟಾಗಲಾರದು. ಇಂದು ಪ್ರಧಾನಾಮಾತ್ಯರಾದ ನೀವು ಇದನ್ನು ಚೆನ್ನಾಗಿ ಆಲೋಚನೆ ಮಾಡಬೇಕು.

ಅಚ್ಯುತರಾಯನು "ಮಂತ್ರಿವರ್ಯರೇ ನಿಮ್ಮ ಮಾತುಗಳಲ್ಲಿ ನ್ಯಾಯ ವಿರಬಹುದು. ಆದರೆ ಮಹಾರಾಜರ ಮನಸ್ಸಿಗೆ ಇದೊಂದೂ ಸರಿತೋರು ವುದಿಲ್ಲ. ನಾನೇನು ಮಾಡಲಿ ?"

ತಿಮ್ಮರಸನು ಮಹಾರಾಜರ ಮನಸ್ಸಿಗೆ ರಾಜನೀತಿಯು ಒಪ್ಪದಿದ್ದರೆ, ಅದು ರಾಜ್ಯಭಾರದ ಅಸ್ತಮಾನಕಾಲವೆನ್ನಬೇಕು. ಅಚ್ಯುತರಾಯರವರೇ ನಿಮ್ಮ ವಿಚಾರವನ್ನಾದರೂ ನೀವು ಚೆನ್ನಾಗಿ ಯೋಚನೆ ಮಾಡಿದ್ದೀರಾ? ಒಂದು ವಿಧವಾಗಿ ನಮ್ಮ ಮಹಾರಾಜರ ಅನಂತರ ಈ ರಾಜ್ಯಕ್ಕೆ ನೀವು ಉತ್ತರಾಧಿಕಾರಿಗಳು ಇಂಥಾ ಪ್ರಕರಣದಲ್ಲಿ ಏನಾದರೂ ಅಪಾಯವು ಸಂಭವಿಸಿದರೆ, ಎಲ್ಲ ದೋಷಗಳು ನಿಮ್ಮ ತಲೆಯಮೇಲೆ ಹೊರಿಸಲ್ಪಡುತ್ತವೆ ವೃಥಾ ದೋಷಾರೋಪಣೆಗೆ ನೀವು ಗುರಿಯಾಗುತ್ತೀರಿ ಎಂದು ಎಚ್ಚರಿಕೆ ಹೇಳಿ ತಿಮ್ಮರಸನು ಮನೆಗೆ ಹೊರಟುಬಂದನು.

೫

ತಿಮ್ಮಣ್ಣ ದಂಡನಾಯಕನು ವೇಷವನ್ನು ಮರೆಸಿಕೊಂಡು ರಾಜಧಾನಿಗೆ ಅಚ್ಯುತರಾಯನ ಹಿಂದೆಯೇ ಬಂದುಬಿಟ್ಟಿದ್ದನು ಅಚ್ಯುತರಾಯನಿಗೂ ಆ ರಹಸ್ಯವು ಕಿಂಚಿತ್ತಾದರೂ ತಿಳಿದಿರಲಿಲ್ಲ. ಮಂತ್ರಿ ತಿಮ್ಮರಸನಿಗೂ ಮಗನ ಆಗಮನ ವಿಚಾರವೇ ತಿಳಿದಿರಲಿಲ್ಲ ತಿಮ್ಮಣ್ಣ ದಂಡನಾಯಕನು ಅರಮನೆಯಲ್ಲಿ ಅನೇಕ ತಂತುಗಳನ್ನು ಸಜ್ಜುಗೊಳಿಸಿದ್ದನು. ಕಾವಲುಗಾರರು ಅಂಗರಕ್ಷಕರು ದಾಸದಾಸಿಯರು ಬಹುಮಂದಿ ದಂಡನಾಯಕನ ಪ್ರಲೋಭಕ್ಕೆ ಪಾತ್ರರಾಗಿದ್ದರು. ದಂಡನಾಯಕನು ತನ್ನದೇ ಒಂದು ಗುಂಪುಕಟ್ಟಿದ್ದನು ಆ ಗುಂಪಿನವರು ಪ್ರತಿದಿನವೂ ಅಂತರಂಗದಲ್ಲಿ ಆಲೋಚನೆಗಳನ್ನು ಮಾಡುತ್ತಿದ್ದರು. ಕುಮಾರ ತಿರುಮಲರಾಯನನ್ನೂ ಅಚ್ಯುತರಾಯನನ್ನೂ ಕೊನೆಗಾಣಿಸಿಬಿಡಬೇಕೆಂದು ದೃಢಸಂಕಲ್ಪಮಾಡಿದ್ದರು. ಈ ಅಂತರಂಗಕೂಟದಲ್ಲಿ ಅಂಥಾ ಕಾರ್‍ಯವನ್ನು ಮಾಡಿದರೆ ಸಾರ್ವಭೌಮ ಕೃಷ್ಣದೇವರಾಯನು ಆಗ್ರಹಗೊಂಡು ತಿಮ್ಮರಸನನ್ನು ಗಲ್ಲಿಗೇರಿಸಬಹುದು ಎಂಬ ಮಾತುಗಳು ಬರುತ್ತಿದ್ದವು. ತಿಮ್ಮಣ್ಣ ದಂಡನಾಯಕನು "ನಮ್ಮ ತಂದೆ ತಿಮ್ಮರಸರು ತಮ್ಮ ರಕ್ಷಣೆಯನ್ನು ಮಾಡಿಕೊಳ್ಳುವ ಶಕ್ತಿಯಿದ್ದರೆ ಮಾಡಿಕೊಳ್ಳಲಿ. ಇಲ್ಲದಿದ್ದರೆ, ಹೋಗಲಿ ಅವರಿಗಾಗಿ ನಾವು ನಮ್ಮ ಸಂಕಲ್ಪದಿಂದ ವಿಮುಖರಾಗಲು ಸಾಧ್ಯವಿಲ್ಲ" ಎಂದು ಹೇಳಿದನು.

ಸಂಗಡಿಗರು ತಿಮ್ಮಣ್ಣನ ಸ್ಥಿರಭಾವವನ್ನು ನೋಡಿ ಆಶ್ಚರ್ಯಚಕಿತರಾದರು. ತಿರುಮಲರಾಯನನ್ನೂ ಅಚ್ಯುತರಾಯನನ್ನೂ ಪರಲೋಕಕ್ಕೆ

ಕಳಿಸುವುದೇನೋ ನಿಶ್ಚಯ. ಮುಂದೆ ಈ ರಾಜ್ಯಕ್ಕೆ ಅಧಿಕಾರಿಗಳಾರು ? ಎಂಬ ವಿಚಾರವು ಬಂದಿತು. ತಿಮ್ಮಣ್ಣ ದಂಡನಾಯಕನು ಚಂದ್ರಗಿರಿಯಲ್ಲಿ ರಾಜಕುಲದವರಿದ್ದಾರೆ. ಕೃಷ್ಣದೇವರಾಯನ ಬುದ್ಧಿಯು ಸರಿಹೋದರೆ ಅವರನ್ನು ಪರಿಗ್ರಹಿಸುತ್ತಾನೆ. ಅಚ್ಯುತರಾಯನ ಮಗನಾದ ಸದಾಶಿವ ರಾಯನಿದ್ದಾನೆ. ಕೃಷ್ಣದೇವರಾಯನ ಮತ್ತೂ ಒಬ್ಬ ಸೋದರನಿದ್ದಾನೆ ಎಂದು ಸೂಚಿಸಿದನು.

ತಿಮ್ಮಣ್ಣ ದಂಡನಾಯಕನು ಚಂದ್ರಗಿರಿಯಲ್ಲಿದ್ದಾಗ ಅಚ್ಯುತರಾಯನ ಮೇಲೆ ಯಾವ ವೈಷಮ್ಯವನ್ನು ತೋರದಿದ್ದರೂ ಸದಾಶಿವರಾಯನೊಡನೆ ಅರಮನೆಯ ವೃತ್ತಾಂತಗಳನ್ನೆಲ್ಲಾ ಧಾರಾಳವಾಗಿ ಮಾತನಾಡಿದ್ದನು. ಬಾಲಕನಾದ ತಿರುಮಲರಾಯನ ಪಟ್ಟಾಭಿಷೇಕವು ಸದಾಶಿವರಾಯನಿಗೂ ಜುಗುಪ್ಸೆಯನ್ನುಂಟುಮಾಡಿತ್ತು. ಚಂದ್ರಗಿರಿಯ ರಾಜವಂಶೀಯರಾರೂ ತಿರುಮಲರಾಯನ ಪಟ್ಟಾಭಿಷೇಕವನ್ನು ಮೆಚ್ಚಿಕೊಂಡಿರಲಿಲ್ಲ ಸದಾಶಿವ ರಾಯನು ತಿಮ್ಮಣ್ಣನೊಡನೆ ಪ್ರತ್ಯಕ್ಷವಾಗಿ ಯಾವ ತಂತ್ರಗಳಿಗೂ ಸೇರ ದಿದ್ದರೂ ಅರಮನೆಯ ವಿಚಾರದಲ್ಲ ಅವನ ಮನಸ್ಸಿನಲ್ಲಿ ಅತೃಪ್ತಿಯು ತುಂಬಿದ್ದಿತು. ಸಂಗಡಿಗರು ನಮ್ಮ ಕೆಲಸವನ್ನು ನಾವು ಮಾಡುತ್ತೇವೆ. ಅಚ್ಯುತರಾಯನನ್ನೂ ತಿರುಮಲರಾಯನನ್ನೂ ಕೊನೆಗಾಣಿಸಿಬಿಡುತ್ತೇವೆ. ಆಮೇಲೆ ಕೃಷ್ಣದೇವರಾಯನು ತನಗೆ ತೋರಿದಂತೆ ಮಾಡಿಕೊಳ್ಳಲಿ ಎಂದು ನಿರ್ಧಾರಮಾಡಿಕೊಂಡರು ತಮ್ಮ ಸಂಕಲ್ಪದ ಸಾಧ್ಯಾಸಾಧ್ಯತೆಯ ವಿಚಾರ ವಾಗಿ ಅವರಿಗೆ ಯಾವ ಸಂಶಯವೂ ಉಳಿದಿರಲಿಲ್ಲ ಈ ವಿದ್ರೋಹಿಗಳು, ಅರಮನೆಯಲ್ಲಿ ತಮ್ಮ ಬಲೆಯನ್ನು ಅಷ್ಟು ಬಲವಾಗಿ ಬೀಸಿದ್ದರು. ಅವರು ಸಮಯವನ್ನು ನಿರೀಕ್ಷಿಸುತ್ತಿದ್ದರು.

ಅರಮನೆಯಲ್ಲಿಯೂ ಬಲವಾದ ಕಾವಲಿದ್ದಿತು. ಹೊರಗಡೆ ಏನೋ ವಿದ್ರೋಹಾಚರಣೆ ನಡೆಯುತ್ತಿದೆಯೆಂಬ ಶಂಕೆಯು ಕೃಷ್ಣದೇವರಾಯನ ತಲೆಯಲ್ಲಿಯೂ ಹೊಕ್ಕಿದ್ದಿತು. ಆದರೆ ಅರಮನೆಯೊಳಗೆ ಅಂತಃಪುರದಲ್ಲಿಯೂ ಕೂಡಾ ವಿದ್ರೋಹಿಗಳ ವ್ಯಾಪನೆಯಾಗಿದೆಯೆಂದು ಕೃಷ್ಣದೇವರಾಯನಿಗೆ

ಭಾಸವಾಗಿರಲಿಲ್ಲ. ಕೃಷ್ಣದೇವರಾಯನ ಹಿರಿಯಮಡದಿಯಾದ ಚಿನ್ನಾಂಬೆಯ ಪರಿವಾರದಲ್ಲಿ ಕನ್ನಾಂಬಿಕೆಯೆಂಬ ತರುಣಿ ಇದ್ದಳು. ಅವಳು ರೂಪ ಲಾವಣ್ಯಗಳಲ್ಲಿ ನರ್ತನಕಲೆಯಲ್ಲಿ ಚಿನ್ನಾಂಬೆಯ ಪಡಿಯಚ್ಚಿನಂತೆ ಇದ್ದಳು. ಕನ್ನಾಂಬೆಯು ಚಿನ್ನಾಂಬೆಯ ರಕ್ತಸಂಬಂಧಿಯೂ ಹೌದು. ಮಹಾರಾಜಾ ಕೃಷ್ಣದೇವರಾಯನ ಕಣ್ಣು ಅವಳ ಮೇಲೆ ಎಷ್ಟೋ ಬಾರಿ ಬಿದ್ದಿದ್ದಿತು. ಅವಳನ್ನು ಪ್ರತಾಪಶಾಲಿಯಾದ ರಾಜಕುಲದ ತರುಣನೊಬ್ಬನಿಗೆ ಕೊಟ್ಟು ವಿವಾಹಮಾಡಿಸಬೇಕೆಂದು ಕೃಷ್ಣದೇವನ ಮನಸ್ಸಿನಲ್ಲಿದ್ದಿತು ಒಂದೆರಡು ಬಾರಿ ತನ್ನ ಮನಸ್ಸಿನ ಇಷ್ಟವನ್ನೂ ಮೆಚ್ಚುಗೆಯನ್ನೂ ಚಿನ್ನಾಂಬೆಯೊಡನೆ ಹೇಳಿದ್ದನು. ತಿಮ್ಮರಸನ ಮಗನಾದ ತಿಮ್ಮಣ್ಣನು ಕನ್ನಾಂಬಿಕೆಗೆ ಅನುರೂಪನಾದ ವರನೆಂದು ಕೃಷ್ಣದೇವರಾಯನು ಎಷ್ಟೋ ಬಾರಿ ಭಾವಿಸಿಕೊಂಡಿದ್ದನು. ತಿಮ್ಮರಸನು ಇದಕ್ಕೆ ಒಪ್ಪಬೇಕು. ಇನ್ನು ವೃದ್ಧರಾದ ರಾಜಬಂಧುಗಳು ಒಪ್ಪಬೇಕು. ಈ ಕಾರ್ಯವು ಅಷ್ಟೊಂದು ಸುಲಭವೆಂದು ಕೃಷ್ಣದೇವರಾಯನಿಗೆ ತೋರಲಿಲ್ಲ. ಕನ್ನಾಂಬೆಯ ಕುಲದ ಮಾತು ಅಡ್ಡ ಬರಬಹುದೆಂಬ ಶಂಕೆಯು ಮಹಾರಾಜನ ಮನಸ್ಸಿಗೆ ಬರುತ್ತಲೇ ಇತ್ತು. ಚಿನ್ನಾಂಬೆಯನ್ನು ತಾನು ವಿವಾಹವಾಡಿಕೊಂಡಾಗ ರಾಜಕುಲದಲ್ಲಿ ಸಂಭವಿಸಿದ ಆಂದೋಳನವು ಅವನ ನೆನಪಿಗೆ ಬಂದು ಹಿಮ್ಮೆಟ್ಟುವಂತೆ ಮಾಡುತ್ತಿದ್ದಿತು. ಆದರೆ ಕನ್ನಾಂಬೆಯೂ ತಿಮ್ಮಣ್ಣನೂ ಸುಲಭವಾಗಿ ಪರಸ್ಪರ ಪ್ರೇಮವನ್ನು ಬೆಳಸಿಕೊಂಡಿದ್ದರು. ತಿಮ್ಮಣ್ಣ ದಂಡನಾಯಕನು ಕನ್ನಾಂಬೆಗೆ ವಾಗ್ದಾನವನ್ನೇ ಮಾಡಿದ್ದನು. ಅಷ್ಟರಲ್ಲಿ ಈ ರಾಜ್ಯದ ಘಟನೆಗಳು ಬಂದು ತಿಮ್ಮಣ್ಣನು ಕನ್ನಾಂಬೆಗೆ ದೂರವಾಗಿ ಹೋಗಿದ್ದನು. ತಿಮ್ಮಣ್ಣನು ರಾಜಧಾನಿಯಲ್ಲಿರುವವರೆಗೆ ಅವರಿಬ್ಬರೂ ದೇವಾಲಯದಲ್ಲಿಯೋ ವನವಾಟಿಕೆಯಲ್ಲಿಯೋ ಕ್ಷಣಕಾಲ ಮಾತನಾಡಿಕೊಳ್ಳುತ್ತಿದ್ದರು. ತಿಮ್ಮಣ್ಣನು ಮಹಾರಾಜರ ಆಗ್ರಹಕ್ಕೆ ಪಾತ್ರನಾಗಿದ್ದರೂ ಕನ್ನಾಂಬಿಕೆಯ ಪ್ರೀತಿಯು ತನ್ನಲ್ಲಿ ಅಚ್ಚಳಿಯದೇ ಇದೆಯೆಂದು ಅವನು ಸಂತೋಷಪಟ್ಟುಕೊಳ್ಳುತ್ತಿದ್ದನು. ಅರಮನೆಯಲ್ಲಿ ಕನ್ನಾಂಬಿಕೆಯು ರಾತ್ರಿ ಏಕಾಂತದಲ್ಲಿ ಮಲಗಿರುವಾಗ ಒಬ್ಬ

ತರುಣನನ್ನು ಕಂಡಳು. ಅವಳಿಗೆ ಆಶ್ಚರ್ಯವಾಯಿತು. ಈ ತರುಣನು ತಿಮ್ಮಣ್ಣನನ್ನು ಹೋಲುತ್ತಾನೆ ತಿಮ್ಮಣ್ಣನು ಮಹಾಪ್ರಭುಗಳ ಆಗ್ರಹ ಪಾತ್ರನಾಗಿದ್ದಾನೆ. ಅವನಿಲ್ಲಿಗೆ ಬರುವ ಸಂಭವವೇ ಇಲ್ಲ ಇವನಾರು? ಈ ಏಕಾಂತದಲ್ಲಿ ನನ್ನ ಅಂತರಂಗದ ಕೋಣೆಯಲ್ಲಿ ತರುಣನ ಪ್ರತ್ಯಕ್ಷ ದರ್ಶನ ಎಂದು ಕನ್ನಾಂಬೆಯ ಹೃದಯವು ನಡುಗಿತು. ಆ ತರುಣನು ಕನ್ನಾಂಬೆಗೆ ಸನ್ನೆಮಾಡಿ ಭಯಪಡಬೇಡ. ನಿನ್ನ ಪ್ರೇಮಪಾತ್ರನಾದ ತಿಮ್ಮಣ್ಣನೇ ನಾನು ಎಂದು ಹೇಳಿದನು.

ಕನ್ನಾಂಬೆಯ ಭಯವು ಮತ್ತೂ ಹೆಚ್ಚಾಯಿತು. ಮಹಾರಾಜರ ಆಗ್ರಹಪಾತ್ರನಾದ ತಿಮ್ಮಣ್ಣನು ತನ್ನ ಅಂತರಂಗ ಗೃಹದಲ್ಲಿದ್ದಾನೆ ಯಾರಿಗಾದರೂ ಇವರ ಸುಳಿವು ಸಿಕ್ಕಿದರೆ ಎಂತಹ ಅನಾಹುತ? ನನ್ನ ಗತಿ ಏನಾಗುವುದು? ಈ ತಿಮ್ಮಣ್ಣನಿಗಾದರೂ ಎಂತಹ ದುರವಸ್ಥೆಯು ಪ್ರಾಪ್ತವಾಗುವುದು ಎಂದು ಭಯದಿಂದ ನಡುಗಿದಳು ತಿಮ್ಮಣ್ಣನು ಬಾಗಿಲುಗಳನ್ನು ಭದ್ರವಾಗಿ ಮುಚ್ಚಿದನು ಕನ್ನಾಂಬೆಯನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು, "ಕನ್ನಾಂಬೆ! ನೀನು ನನ್ನವಳು. ನಿಮ್ಮ ಮಹಾರಾಜನೇ ಇದನ್ನು ಒಪ್ಪಿಕೊಂಡಿದ್ದಾನೆ. ದರಬಾರಿಗಳೆಲ್ಲರಿಗೂ ನಮ್ಮ ವಿವಾಹವು ಸಮ್ಮತವಾಗಿಯೇ ಇದೆ. ನನ್ನನ್ನು ಕಂಡರೆ ನೀನೇಕೆ ಅಂಜುವಿ?"

ಪ್ರಿಯಾ ತಿಮ್ಮಣ್ಣ ನಿನ್ನನ್ನು ದೇವರು ಸಂರಕ್ಷಿಸಲಿ ನನ್ನ ಮೇಲಿನ ಆಶೆಯಿಂದ ಮಹತ್ತರವಾದ ಸಾಹಸಮಾಡಿ ಈ ಅಂತಃಪುರಕ್ಕೆ ಬಂದಿರುವೆ. ನೀನು ವಿದ್ರೋಹಿಯೆಂದು ಮಹಾರಾಜರು ಎಲ್ಲೆಲ್ಲಿಯೂ ನಿನ್ನನ್ನು ಹುಡುಕಿಸುತ್ತಿದ್ದಾರೆ. ಇಂಥಾ ಸಂದರ್ಭದಲ್ಲಿ ನೀನು ಯಾರ ಕಣ್ಣಿಗಾದರೂ ಬಿದ್ದರೆ, ನಿನ್ನ ಗತಿಯೇನು? ಅಂತಃಪುರದ ಗುಪ್ತದ್ವಾರದಿಂದ ನಿನ್ನನ್ನು ಹೇಗಾದರೂ ಹೊರಗೆ ಬಿಡುತ್ತೇನೆ ಹೊರಟುಹೋಗು. ಈ ರಾಜಧಾನಿಯನ್ನು ಬಿಟ್ಟು ದೂರಹೋಗು.

"ಕನ್ನಾಂಬೆ! ನಾನು ಸುರಕ್ಷಿತವಾಗಿ ಇದ್ದೇನೆ ಈ ರಾಜಧಾನಿಯಲ್ಲಿಯೇ ಇದ್ದೇನೆ. ಈ ಅರಮನೆಯಲ್ಲಿ ಎಷ್ಟೋ ಬಾರಿ ನಿನ್ನನ್ನು ಕಂಡಿ

ದ್ದೇನೆ. ನೀನು ನನ್ನ ಕಡೆಗೆ ದೃಷ್ಟಿಹಾಕಲಿಲ್ಲ. ನಾನು ವಿದ್ರೋಹಿ ಮಹಾರಾಜರ ಆಗ್ರಹಕ್ಕೆ ಪಾತ್ರನಾದವನು ಎಂಬುದು ನಿಜ. ಆದರೂ ನೀನು ನನ್ನನ್ನು ಪ್ರೀತಿಸುವೆಯಾ ?

ಕನ್ನಾಂಬೆಯು ಆ ತರುಣನನ್ನು ಬಿಗಿದಪ್ಪಿ ಈ ಜನ್ಮದಲ್ಲಿ ನನ್ನ ಮನಸ್ಸು ಒಲಿದಿರುವುದು ನಿನ್ನೊಬ್ಬನನ್ನೇ. ಆಮರಣಾಂತ ನಿನ್ನ ಪ್ರೇಮವನ್ನು ಮರೆಯುವುದೆಂತು ? ಎಂದೆಂದಿಗೂ ನಾನು ನಿನ್ನವಳು.

“ ತಿಮ್ಮಣ್ಣನು ಕನ್ನಾಂಬೆಯ ಕಪೋಲಗಳನ್ನು ಚುಂಬಿಸುತ್ತಾ ಕನ್ನಾಂಬೆ ! ಮಹಾರಾಜರು ನನ್ನಮೇಲೆ ಆಗ್ರಹದಿಂದ ನನ್ನನ್ನು ಶೂಲ ಕ್ಕೇರಿಸಿದರೆ ? ”

ಕನ್ನಾಂಬೆಯು ಅಂತಹ ದುಸ್ಥಿತಿಯು ಬಾರದಿರಲಿ. ಒಂದು ಪಕ್ಷ ದುರದೃಷ್ಟದಿಂದ ಅಂತಹ ಸಂಭವ ಬಂದರೆ ನಾನೂ ನಿನ್ನೊಡನೆ ಶೂಲಕ್ಕೇರು ತ್ತೇನೆ. ಅಥವಾ ನೀನು ಮರಣಹೊಂದಿದರೆ ನಿನ್ನೊಡನೆ ಸಂತೋಷದಿಂದ ಚಿತೆಯನ್ನೇರುತ್ತೇನೆ ”

ತಿಮ್ಮಣ್ಣನು ಕನ್ನಾಂಬೆ ! ದೇವರ ಸಾಕ್ಷಿಯಾಗಿ ನಮ್ಮಿಬ್ಬರ ವಿವಾಹ ವಾದಂತೆಯೇ ನಾವಿಬ್ಬರೂ ಪರಸ್ಪರ ಸುಖದುಃಖಗಳಲ್ಲಿ ಭಾಗಿಗಳಾಗಿದ್ದೇವೆ ಎಂದು ಹೇಳಿದನು.

ಕನ್ನಾಂಬೆಯು ತಿಮ್ಮಣ್ಣನು ಹೊರಟುಹೋದನಂತರ ಇವನು ಮಹಾರಾಜರ ಆಗ್ರಹಕ್ಕೆ ಪಾತ್ರನಾದವನು ವಿದ್ರೋಹಿ. ಅಚ್ಯುತರಾಯನು ಇವನನ್ನು ಎಲ್ಲೆಲ್ಲಿಯೂ ಹುಡುಕಿಸುತ್ತಿದ್ದಾನೆ. ತಿಮ್ಮಣ್ಣನು ಇಷ್ಟು ಧೈರ್ಯವಾಗಿ ಅರಮನೆಗೆ ಬಂದುಹೋಗುತ್ತಾನೆ. ಇದು ಆಶ್ಚರ್ಯಕರ ವಾಗಿದೆ. ಈ ಅರಮನೆಯಲ್ಲಿ ಪಹರೆಯವರು ಕಾವಲುಗಾರರು ಅಧಿಕಾರಿಗಳು ಇವನ ಪಕ್ಷಪಾತಿಗಳಾಗಿರಬೇಕು. ಇಲ್ಲದಿದ್ದರೆ, ಇಂತಹ ಧೈರ್ಯವು ತಿಮ್ಮಣ್ಣ ನಿಗೆ ಎಲ್ಲಿಂದ ಬರಬೇಕು ಅವನು ರಾಜಾನುಗ್ರಹ ಪಾತ್ರನಾಗಿರಲಿ ವಿದ್ರೋ ಹಿಯೇ ಆಗಿರಲಿ ನಮ್ಮಿಬ್ಬರ ದರ್ಶನವಾದಂದಿನಿಂದ ನನ್ನ ಮನವು ಅವನನ್ನು ಒಲಿದಿದೆ. ಅಂದು ಮಹಾರಾಜರೇ ನಮ್ಮಿಬ್ಬರಿಗೂ ಮದುವೆಮಾಡಿಸುವ

ಅಪೇಕ್ಷೆಯನ್ನಿಟ್ಟುಕೊಂಡಿದ್ದರು. ಅದೆಲ್ಲಾ ಈಗ ಕನಸಿನ ಮಾತಾಗಿ ಹೋಯಿತು. ತಿಮ್ಮಣ್ಣನು ಮಾತ್ರ ಮಹಾ ಪರಾಕ್ರಮಶಾಲಿಯೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಅವನೇ ಒಂದು ರಾಜ್ಯವನ್ನು ಕಟ್ಟಬಲ್ಲ. ಅಥವಾ ಕಾರ್ಯಕಾರಣಗಳ ಘಟನೆಯಿಂದ ಮಹಾರಾಜರ ಪೂರ್ಣಾನುಗ್ರಹಕ್ಕೆ ಪಾತ್ರನಾಗಲೂ ಬಲ್ಲ, ಎಂದು ಆಶಾಕಲ್ಪನೆಗಳನ್ನು ಮಾಡಿಕೊಳ್ಳುತ್ತಿದ್ದಳು.

ಶಿವರಾತ್ರಿಯ ದಿನ ವಿರೂಪಾಕ್ಷ ದೇವಾಲಯದಲ್ಲಿ ಅತ್ಯಂತ ಸಡಗರ. ಬ್ರಾಹ್ಮಣರ ವೇದಘೋಷಗಳು ಭಕ್ತಜನರ ಸ್ತುತಿಪಾಠಗಳು ಮಹಾರಾಜರು ಮೊದಲುಗೊಂಡು ಭಿಕ್ಷುಕನವರೆಗೆ ಅಂದು ದೇವಾಲಯದಲ್ಲಿ ತಮ್ಮ ತಮ್ಮ ಭಕ್ತಿಯ ಕಾಣಿಕೆಗಳನ್ನು ಸಲ್ಲಿಸುತ್ತಾರೆ ರಾತ್ರಿ ಹಲವರು ಪರಿಚಾರಿಕೆಯರೊಂದಿಗೆ ಕನ್ನಾಂಬೆಯು ದೇವರ ಸಾನ್ನಿಧ್ಯದಲ್ಲಿ ದರ್ಶನಮಾಡಿ ಪ್ರಸಾದವನ್ನು ಸ್ವೀಕರಿಸಿದಳು ಅವಳ ಜೊತೆಗಾತಿಯರೆಲ್ಲರೂ ಪ್ರಸಾದಕ್ಕಾಗಿ ಮೇಲಾಟವಾಡುತ್ತಿದ್ದರು. ಮುಂದೆ ಮುಂದೆ ನುಗ್ಗಿ ಪೂಜಾರಿಯ ಎದುರಿನಲ್ಲಿ ಕೈಯೊಡ್ಡುತ್ತಿದ್ದರು. ಕನ್ನಾಂಬೆಯು ಹಿಂದಕ್ಕೆ ಸರಿದು ನಿಂತಳು. ಸಂಗಾತಿಯರು ಪ್ರಸಾದಗಳನ್ನು ಪಡೆದು ಮಂದಿರದಲ್ಲಿ ಹುಡುಕಿ ನೋಡಿದರು. ಕನ್ನಾಂಬೆಯಿರಲಿಲ್ಲ ದೇವಾಲಯದಲ್ಲಿ ಎಲ್ಲಿಯೋ ಇದ್ದಾಳೆ. ಬರುತ್ತಾಳೆ ಜೊತೆಗೂಡಿ ಹೋಗೋಣವೆಂದು ಮಹಾದ್ವಾರದಲ್ಲಿ ಕಾದು ಕುಳಿತರು. ದೇವಾಲಯದೊಳಗೆ ಬಂದು ಹೋಗುವ ಪುರುಷರ ಕಣ್ಣುಗಳೆಲ್ಲಾ ಈ ಪರಿಚಾರಿಕೆಯರ ಮೇಲೆಯೇ ಇದ್ದಿತು. ಆ ತರುಣಿಯರು ನಾಚಿಕೆಯಿಂದ ಅಲ್ಲಿ ಹೆಚ್ಚುಕಾಲ ಕುಳಿತಿರಲಾರದೇ ಅರಮನೆಗೆ ಹೊರಟುಹೋದರು.

ಅದಕ್ಕಿಂತ ಬಹುಹೊತ್ತು ಮುಂಚಿತವಾಗಿಯೇ ಕನ್ನಾಂಬೆಯು ದೇವಾಲಯವನ್ನು ಬಿಟ್ಟುಬಿಟ್ಟಿದ್ದಳು. ಆ ಭಕ್ತರ ಜಂಗುಳಿಯಲ್ಲಿ ತಿಮ್ಮಣ್ಣನು ಬಂದನು. ಅವನು ದೇವರ ದರ್ಶನಮಾಡಿ ಪ್ರಸಾದವನ್ನು ಸ್ವೀಕರಿಸಿ ಹೊರಗೆ ಬರುವಾಗ ಅಕಸ್ಮಾತ್ತಾಗಿ ಕನ್ನಾಂಬೆಯ ದರ್ಶನವಾಯಿತು. ಅವನು ವೇಗವಾಗಿ ದೇವಾಲಯವನ್ನು ಬಿಟ್ಟು ಹೊರಗೆ ಬಂದು ಕಾದಿದ್ದನು. ಕನ್ನಾಂಬೆಗೆ ಯಾವ ಉದ್ದೇಶ್ಯವೂ ಇಲ್ಲದಿದ್ದರೂ ಯಾವುದೋ ಆಕರ್ಷಣೆಯು

ಅವಳನ್ನು ದೇವಾಲಯದಿಂದ ಸೆಳೆದು ಒಯ್ದಿದ್ದಿತು. ಮಹಾದ್ವಾರದಲ್ಲಿ
ಪ್ರಾಂಗಣದಲ್ಲಿ ಕನ್ನಾಂಬೆಯ ಕಣ್ಣುಗಳು ಏನನ್ನೋ ಹುಡುಕುತ್ತಿದ್ದವು.
ಹಿಂಭಾಗದಿಂದ ತಿಮ್ಮಣ್ಣನುಬಂದು ಕನ್ನಾಂಬೆಯ ಕೈಹಿಡಿದುಕೊಂಡನು.
ಅವಳು ಬೆಚ್ಚಿಬಿದ್ದು ಹಿಂತಿರುಗಿ ನೋಡಿದಳು. ತಿಮ್ಮಣ್ಣನು ನಕ್ಕನು.
ಕನ್ನಾಂಬೆಯ ಮುಖದಲ್ಲಿಯೂ ನಗುವು ಮೂಡಿತು. ತಿಮ್ಮಣ್ಣನು ಕನ್ನಾಂಬೆ
ಯನ್ನು ವಿದ್ಯಾರಣ್ಯ ಮಹಾಮುನಿಗಳ ಸಮಾಧಿಯ ಬಳಿಗೆ ಕರೆದೊಯ್ದನು
ಕನ್ನಾಂಬೆಯು "ತಿಮ್ಮಣ್ಣ! ಎಲ್ಲಿಗೆ ಹೋಗಬೇಕು? ನಿನ್ನ ಯೋಚನೆ
ಗಳೇನು? ಅರಮನೆಯನ್ನು ಬಿಟ್ಟು ಬಹುದೂರ ಬಂದಿದ್ದೇವೆಂಬುದ
ನೆನಪಿದೆಯೇ?" ಎಂದು ಸಣ್ಣದನಿಯಿಂದ ಕೇಳಿದಳು.

ತಿಮ್ಮಣ್ಣನು "ಹೌದು ಕನ್ನಾಂಬಿಕೆ! ವಿರೂಪಾಕ್ಷನ ಪ್ರೇರಣೆ
ಯಾಗಿದೆ. ನಾವಿಬ್ಬರೂ ದೂರ ಹೋಗಬೇಕು. ಸಮುದ್ರಾಂತದವರೆಗಾದರೂ
ನಾವಿಬ್ಬರೂ ಹೋಗಬೇಕು ಬರುವೆಯಷ್ಟೆ."

ಕನ್ನಾಂಬೆಯು "ನಿನ್ನ ಜೊತೆಯಲ್ಲಿ ಎಲ್ಲಿಗೆ ಬೇಕಾದರೂ ಬರುತ್ತೇನೆ.
ಆದರೆ ನಾವಿಬ್ಬರೂ ಎಲ್ಲಿಗಾದರೂ ಹೊರಟುಹೋಗುವುದೆಂದರೆ ರಾಜಧಾನಿ
ಯನ್ನೂ ಅರಮನೆಯನ್ನೂ ಒಂದೇ ಬಾರಿಗೆ ತ್ಯಜಿಸಿ ಹೋಗಿಬಿಡಬೇಕು.
ಇಲ್ಲದಿದ್ದರೆ ನಮ್ಮಿಬ್ಬರ ಶಾಸ್ತ್ರೋಕ್ತವಾದ ವಿವಾಹವಾಗುವತನಕ ಜನರ
ಕಣ್ಣಿಗೆ ಮರೆಯಾಗಿರಬೇಕು. ಜನರ ಬಾಯಿಗೆ ಬೀಳದಂತೆ ಎಚ್ಚರಿಕೆಯಿಂದ
ನಡೆಯಬೇಕು."

ಕನ್ನಾಂಬೆ! ಅಂತಹ ಸಮಯವು ಬೇಗ ಬರುತ್ತದೆ. ಬಾ ಅದನ್ನು
ಇಂದೇ ನಿಷ್ಕರ್ಷೆಮಾಡಿಬಿಡೋಣ ಎಂದು ಹೇಳಿ ಜನರಹಿತವಾಗಿದ್ದ
ತುಂಗಾತೀರದ ದಿಬ್ಬದ ಮೇಲಕ್ಕೆ ಕರೆದೊಯ್ದನು. ಅಲ್ಲಿ ಪ್ರಶಸ್ತವಾದ
ಹಾಸುಗಲ್ಲಿನ ಮೇಲೆ ಇಬ್ಬರೂ ಕುಳಿತುಕೊಂಡರು. ಕಗ್ಗತ್ತಲೆಯ ರಾತ್ರಿ.
ಅರ್ಧರಾತ್ರಿಯ ಸಮಯ. ಮೇಲೆ ಶುಭ್ರಗಗನದಲ್ಲಿ ನಕ್ಷತ್ರಗಳು ರಾರಾಜಿ
ಸುತ್ತಿವೆ. ಕೆಳಗೆ ಗಂಭೀರವಾದ ತುಂಗಭದ್ರೆ. ತಂಗಾಳಿಯು ಬೀಸುತ್ತಿದೆ.
ಆ ಪ್ರಶಾಂತ ವಾತಾವರಣದಲ್ಲಿ ಅವರಿಬ್ಬರೂ ಕುಳಿತಿದ್ದರು.

ತಿಮ್ಮಣ್ಣನು ನೋಡು ಕನ್ನಾಂಬೆ ! ನನ್ನನ್ನು ನೀನು ಅರಿಯದೇ ಪ್ರೇಮಿಸುತ್ತಿದ್ದಿ. ನೀನು ತಿಳಿದಿರುವಂತಹ ದರಬಾರಿನ ರಾಜಪುರುಷನು ನಾನಲ್ಲ ಇಂದು ಕ್ರೂರಾತ್ಮನಾದ ಮಹಾಪಾತಕಿ ಎಂದುಕೋ. ಆ ಶಿವ ನಾಣೆಗೂ ಹೇಳು. ಇಷ್ಟು ಹೇಳಿದ ಮೇಲೆಯೂ ನೀನು ನನ್ನನ್ನು ವರಿಸು ವೆಯಾ ? ಭಯಪಡಬೇಡ. ನೀನೂ ನನ್ನಂತೆ ವೀರರಮಣಿ. ನಿನ್ನ ಕೂದಲು ಕೊಂಕುವುದಿಲ್ಲ. ಸುರಕ್ಷಿತವಾಗಿ ನಿನ್ನನ್ನು ಅರಮನೆಗೆ ತಲುಪಿಸಿ ಮರೆತುಬಿಡುತ್ತೇನೆ. ಈ ಜನ್ಮದಲ್ಲಿ ಪುನಃ ನಿನ್ನ ದರ್ಶನ ಮಾಡು ವುದಿಲ್ಲ.

“ ತಿಮ್ಮಣ್ಣ ! ನೀನೇಕೆ ವ್ಯಗ್ರನಾಗಿ ಮಾತನಾಡುತ್ತೀ ವಿರೂಪಾಕ್ಷನ ಆಣೆಗೂ ನಾನು ನಿನ್ನವಳು. ಈ ತುಂಗಭದ್ರೆಯ ಮಡುವಿನಲ್ಲಿ ಧುಮಿಕಿಬಿಡು ಎಂದು ಹೇಳಿದರೆ ಧುಮುಕುತ್ತೇನೆ.”

ತಿಮಣ್ಣನು ವಿಕಟವಾಗಿ ನಕ್ಕು ನನ್ನಂತಹ ಕ್ರೂರಾತ್ಮನ ಪ್ರಣಯಿ ನಿಯಾ ತುಂಗಭದ್ರೆಯಲ್ಲಿ ಧುಮುಕುವುದು ಸುಲಭ. ಜ್ವಾಲಮಾಲೆಗಳಿಂದ ಉರಿಯುವ ಯಜ್ಞೇಶ್ವರನನ್ನು ಹೋಗುವುದು ಸುಖಕರ ನನ್ನಂತಹ ಕ್ರೂರಾತ್ಮನೊಡನೆ ಬದುಕಿ ಬಾಳುವುದು ಮಹಾ ಕಷ್ಟ. ನನ್ನೊಡನೆ ಬದುಕ ಬಲ್ಲೆಯಾ ? ನನ್ನ ಸಹಾಯಕ್ಕೆ ನಿಲ್ಲಬಲ್ಲೆಯಾ ?

ಕನ್ನಾಂಬೆಯ ಮುಖವು ವಿವರ್ಣವಾಯಿತು ಅದು ತಿಮ್ಮಣ್ಣನ ಕಣ್ಣಿಗೆ ಸ್ಪಷ್ಟವಾಗಿ ಕಾಣಲಿಲ್ಲ ಅವಳು ಧೈರ್ಯವನ್ನು ತಂದುಕೊಂಡು ನಾನು ಬದುಕುವುದಕ್ಕಾಗಿಯೇ ನಿನ್ನನ್ನು ಪ್ರೇಮಿಸುತ್ತೇನೆ ಎಂದು ತಿಮ್ಮಣ್ಣನ ಕೈ ಮೇಲೆ ಕೈ ತಟ್ಟಿ ನುಡಿದಳು.

ತಿಮ್ಮಣ್ಣನು “ ಕನ್ನಾಂಬೆ! ಹೇಳುತ್ತೇನೆ ಕೇಳು. ನಾವು ಕ್ಷತ್ರಿಯರು. ನಮಗಿರುವುದು ಒಂದೇ ಮಾರ್ಗ. ಅದು ಶತ್ರುಗಳ ನಾಶ. ಕ್ಷತ್ರಿಯನು ಸೋತಮನಸ್ಸಿಂದ ಓಡಿಹೋಗಕೂಡದು. ತಂದೆ, ಗುರು, ಆಚಾರ್ಯ, ಪ್ರಭು ಎಲ್ಲರನ್ನೂ ಕತ್ತಿ ಹಿರಿದು ಎದುರಿಸಬೇಕು. ಅದೇ ಕ್ಷತ್ರಿಯನ ಧರ್ಮ. ಭಗವಾನ್ ಕೃಷ್ಣನು ತನ್ನ ಪ್ರಿಯಶಿಷ್ಯನಾದ ಅರ್ಜುನನಿಗೆ ಕೊಟ್ಟ

ಪ್ರಥಮ ಉಪದೇಶವದು. ಅದನ್ನೇ ನಾನು ನಿನಗೆ ಹೇಳುತ್ತಿದ್ದೇನೆ. ನನ್ನ ಮಾತಿನಲ್ಲಿ ಲವಲೇಷವಾದರೂ ಅಧರ್ಮವಿಲ್ಲ."

"ಹೇಳು ತಿಮ್ಮಣ್ಣ! ನಾನು ನಿನ್ನ ಸಹಧರ್ಮಿಣಿ ಹೇಳು."

ತಿಮ್ಮಣ್ಣನು ಸಮಯ ಬಂದರೆ ನಾನು ಕೃಷ್ಣದೇವರಾಯನನ್ನು ಕತ್ತರಿಸಿಹಾಕಬಹುದು ಅಥವಾ ಅವನ ಕತ್ತಿಯ ಏಟಿನಿಂದ ಸ್ವರ್ಗಕ್ಕೆ ಹೋಗಬಹುದು. ನೀನು ಸಿದ್ಧಳಾಗಿರುವೆಯಾ?

"ಸತ್ಯವಾಗಿಯೂ ನಿನ್ನೊಡನೆ ಸ್ವರ್ಗಕ್ಕಾಗಲೀ ನರಕಕ್ಕಾಗಲೀ ನಾನು ಬರುತ್ತೇನೆ. ನಿನ್ನ ಪ್ರೇಮಬಂಧನದ ಮುಂದೆ ಸ್ವರ್ಗ ನರಕಗಳ ಭೇದವು ನನಗೆ ಕಾಣುತ್ತಿಲ್ಲ."

"ನಿನ್ನನ್ನು ಸಾಕಿಸಲಹಿದ ಮಾತೃಸ್ವರೂಪಿಣಿ ಚಿನ್ನಾಂಬೆಯನ್ನು ತೊರೆಯಬಲ್ಲೆಯಾ?"

"ತೊರೆದಿದ್ದೇನೆ"

"ನಡೀ! ನಾವಿಬ್ಬರೂ ಹೋಗೋಣ. ಇಂದಿನಿಂದ ನಮ್ಮಿಬ್ಬರದು ಒಂದೇ ಪ್ರಾಣ. ಒಂದೇಕರ್ಮ. ಒಂದೇ ಧರ್ಮ" ಎಂದು ಹೇಳಿದನು.

ತಿಮ್ಮಣ್ಣನು ಕನ್ನಾಂಬಿಕೆಯ ಅರಮನೆಯ ಮಹಾದ್ವಾರದ ವರೆಗೆ ಧೈರ್ಯದಿಂದ ಕರೆದುಕೊಂಡು ಹೋಗಿಬಿಟ್ಟನು. ಅರಮನೆಯನ್ನು ಸಮೀಪಿಸುತ್ತಿರುವಾಗ ಕನ್ನಾಂಬೆಯು "ತಿಮ್ಮಣ್ಣ ನೀನು ಬಹುದೂರ ಬಂದುಬಿಟ್ಟೆ ಇಲ್ಲಿ ನಿನಗೆ ಅಪಾಯಪರಂಪರೆಗಳು ಕಾದಿವೆ" ಎಂದು ಎಚ್ಚರಿಸಿದಳು.

ತಿಮ್ಮಣ್ಣನು ಕನ್ನಾಂಬೆ! ಭಯಪಡಲೇಕೆ? ಆ ಅಪಾಯಗಳಿಗಿಂತ ರಕ್ಷಣೆಯೇ ಅಧಿಕವಾಗಿದೆ. ಅರ್ಧ ಅರಮನೆಯು ನನ್ನ ಪಾಲಿನದು. ಇಂದು ಅರ್ಧ ಅಂತಃಪುರವು ನನ್ನದಾಯಿತು ಎಂದು ಹೇಳಿ ಕನ್ನಾಂಬೆಯನ್ನು ಕಳುಹಿಸಿ ಮಾಯವಾಗಿ ಹೋದನು.

೬

ಶಿವರಾತ್ರಿಯ ಮಾರನೆಯ ದಿವಸ ಅಮಾವಾಸ್ಯೆ. ರಾತ್ರಿ ಹನ್ನೆರಡು ಗಂಟೆಯ ಸಮಯ. ತಿಮ್ಮಣ್ಣನು ಯುದ್ಧದ ವೇಷವನ್ನು ಧರಿಸಿಕೊಂಡು ಅಂತಃಪುರದಲ್ಲಿ ಕನ್ನಾಂಬೆಯ ಶಯನಗೃಹದಲ್ಲಿ ಬೇಟಿಯಿತ್ತನು. ಕನ್ನಾಂಬೆಗೆ ಚೆನ್ನಾಗಿ ನಿದ್ರೆಹತ್ತಿದ್ದಿತು. ತಿಮ್ಮಣ್ಣನು ಕನ್ನಾಂಬೆಯ ಮೈತಡವಿ ಎಚ್ಚರ ಗೊಳಿಸಿದನು. ಕನ್ನಾಂಬೆಯು ಎಚ್ಚೆತ್ತು ಕಣ್ತೆರದು ನೋಡಿದಳು. ಎದುರಿಗೆ ತಿಮ್ಮಣ್ಣನ ಮುಖವನ್ನು ನೋಡಿದಳು ಅವನ ಕೆಂಗಣ್ಣುಗಳನ್ನು ನೋಡಿ ಚಕಿತಳಾದಳು. ಏಳು ಕನ್ನಾಂಬೆ! ಏಳು ಇಂದಿನ ಸಮಯವು ಮತ್ತೆ ದೊರೆಯಲಾರದು ಮೇಲಕ್ಕೆ ಎದ್ದೇಳು. ಕನ್ನಾಂಬೆಯು ಎದ್ದಳು. ಕನ್ನಾಂಬೆ! ನಿನ್ನೆ ಕೊಟ್ಟ ವಚನವನ್ನು ನೀನಿಂದು ಪಾಲಿಸಬೇಕು ತಿರುಮಲಾಂಬೆಯ ಅಂತಃಪುರಕ್ಕೆ ಹೋಗು. ಅಲ್ಲಿರುವ ಕಾವಲುಗಾರರು ನನ್ನ ಭಟರು. ಕಣ್ಣು ಬಿಟ್ಟುಕೊಂಡಿದ್ದರೂ ಕಾಣದವರಂತೆ ನಿಂತಿರುತ್ತಾರೆ. ಕೃಷ್ಣದೇವರಾಯನ ಶಯ್ಯಾಗಾರದಲ್ಲಿದ್ದಾಳೆ. ಅಲ್ಲಿರುವ ಅಂಗರಕ್ಷಕರೂ ನಮ್ಮವರು. ಮಹಾ ರಾಜನೂ ರಾಣಿ ತಿರುಮಲಾಂಬೆಯೂ ಬಂಧನದಲ್ಲಿದ್ದಂತೆಯೇ ನಡೆ! ತಿರುಮಲಾಂಬೆಯ ಪರ್ಯಂಕದ ಮೇಲೆ ಬಾಲಕನಾದ ತಿರುಮಲರಾಯನು ಮಲಗಿದ್ದಾನೆ. ಈ ಬಟ್ಟಲಿನಲ್ಲಿರುವ ಔಷಧವನ್ನು ಅವನ ಬಾಯಿಯಲ್ಲಿ ಸುರಿದುಬಿಡು. ಧೈರ್ಯವಿದೆಯೇ ತೆಗೆದುಕೋ ಎಂದು ಬಟ್ಟಲನ್ನು ಕನ್ನಾಂಬಿಕೆಯ ಕೈಗೆ ಕೊಟ್ಟನು. ತಿಮ್ಮಣ್ಣನು ಬಾಲಕ ತಿರುಮಲ ರಾಯನು ಅರ್ಧ ಹಾದಿ ಹೊರಟುಹೋಗಿದ್ದಾನೆ. ಈ ಕತ್ತಿಯಿಂದ ಕೋಮಲ ಬಾಲಕನನ್ನು ಕತ್ತರಿಸಿ ಹಾಕಬಾರದು. ಅವನು ನಿದ್ರಿಸುತ್ತಿರು

ವಂತೆಯೇ ತಣ್ಣಗಾಗಿ ಹೋಗಬೇಕು. ಅದು ವಿಧಿಯ ಸಂಕಲ್ಪ ಎಂದು ಹೇಳಿದನು.

ಕನ್ನಾಂಬೆಯ ಮುಖವು ಬಿಳಿಚಿಕೊಂಡಿತು ಮಾತು ಹೊರಡ ದಾಯಿತು. ಸೂತ್ರದ ಗೊಂಬೆಯಂತೆ ಕನ್ನಾಂಬೆಯು ಅಡಿಗಳನ್ನು ಮುಂದಿ ಟ್ಟಳು. ನಿಜವಾಗಿಯೂ ಅವಳ ಮೈಮೇಲೆ ಪ್ರಜ್ಞೆ ಇರಲಿಲ್ಲ. ಯಾವುದೋ ಶಕ್ತಿಯು ಅವಳನ್ನು ತಿರುಮಲಾಂಬೆಯ ಶಯನಗೃಹಕ್ಕೆ ಕೊಂಡೊಯ್ದು ಬಿಟ್ಟಿತು. ತಿಮ್ಮಣ್ಣನು ವಾತಾಯನದಿಂದ ನೋಡುತ್ತಿದ್ದನು. ಕನ್ನಾಂಬೆಯು ಹಾಸಿಗೆಯ ಮೇಲೆ ಮಲಗಿದ್ದ ಬಾಲಕನ ಬಾಯಿಬಿಡಿಸಿ ಕೈಯಲ್ಲಿದ್ದ ಔಷಧ ವನ್ನು ಹುಯ್ದುಬಿಟ್ಟಳು ಶಿವಶಿವಾ ಎನ್ನುತ್ತಾ ಮಂಚದಡಿಯಲ್ಲಿ ಕುಸಿದು ಬಿದ್ದಳು. ತಿಮ್ಮಣ್ಣನು ಧೈರ್ಯವಾಗಿ ಹಲ್ಲುಕಡಿದು ನೋಡುತ್ತ ನಿಂತಿದ್ದನು. ವಿಷವೇಗದಿಂದ ಒದ್ದಾಡಿ ಬಾಲಕನು ಮಂಚದಿಂದ ಕೆಳಗೆಬಿದ್ದನು. ತಿಮ್ಮ ಣ್ಣನು ವಾತಾಯನದಿಂದಲೇ ಆ ಅಂತಃಪುರದ ಕೋಣೆಯೊಳಗೆ ಪ್ರವೇಶ ಮಾಡಿ ಬಗ್ಗಿ ನೋಡಿದನು. ಬಾಲಕನ ಕಣ್ಣುರಳಿತ್ತು ಪ್ರಾಣವಾಯುವು ಹಾರಿ ಹೋಯಿತು. ಹಾಸಿಗೆಯ ಮೇಲಿದ್ದ ಬಟ್ಟೆಯನ್ನು ಸೆಳೆದು ಬಾಲಕನ ಮೇಲೆ ಹೊದ್ದಿಸಿದನು. ಮೂರ್ಛಿತಳಾಗಿ ನೆಲದ ಮೇಲೆ ಬಿದ್ದಿದ್ದ ಕನ್ನಾಂಬೆಯನ್ನು ಎತ್ತಿಕೊಂಡು ಅಂತಃಪುರದ ಗುಪ್ತಮಾರ್ಗದಿಂದ ಹೊರಗೆ ಬಂದನು. ತಲೆಯೆತ್ತಿ ಆಕಾಶವನ್ನು ನೋಡಿದನು. ಮಿಣುಗುವ ನಕ್ಷತ್ರಗಳನ್ನು ನೋಡಿದನು. ಉದ್ಯಾನದ ಹೊರಬಾಗಿಲಿನಲ್ಲಿ ಸಿದ್ಧನಾಗಿದ್ದ ಕುದುರೆಯ ಮೇಲೆ ಕನ್ನಾಂಬೆಯನ್ನು ಎತ್ತಿ ಕೂರಿಸಿ ತಾನೂ ಕುದುರೆಯ ಮೇಲೇರಿ ಕೋಟೆಯನ್ನು ದಾಟಿ ಹೊರಟುಹೋದನು.

ಬೆಳಕುಹರಿಯುವ ಕಡೆಯ ಝಾವದಲ್ಲಿ ತುಂಗಭದ್ರೆಯ ತೀರದ ದಿಬ್ಬದ ಮೇಲೆ ಅದೇ ಹಾಸುಗಲ್ಲಿನ ಮೇಲೆ ತಿಮ್ಮಣ್ಣನು ಕುಳಿತಿದ್ದನು. ಅವನ ತೊಡೆಯ ಮೇಲೆ ಕನ್ನಾಂಬೆಯ ಶರೀರವು ಇದ್ದಿತು. ತಂಗಾಳಿಯಿಂದ ಕನ್ನಾಂಬೆಯು ಎಚ್ಚೆತ್ತು ನಾನೆಲ್ಲಿದ್ದೇನೆ, ಬಾಲಕನಾದ ತಿರುಮಲರಾಯನಿಗೆ ವಿಷ ಉಣ್ಣಿಸಿದವಳು ನಾನೇ ಅಲ್ಲವೇ. ನನ್ನ ಕೈಯಿಂದಲೇ ವಿಷ ಉಣ್ಣಿಸಿದೆ.

ರಾಜಭಟರು ನನ್ನನ್ನು ಸೆಳೆದೊಯ್ಯುತ್ತಾರೆ ಎಂದು ಕೂಗಿಕೊಂಡಳು. ತಿಮ್ಮಣ್ಣನು ಕನ್ನಾಂಬೆಯ ಪೈದಡವಿ ಎಚ್ಚರಗೊಳಿಸಿದನು. ಕನ್ನಾಂಬೆ! ನೀನು ನಿನ್ನ ಪ್ರಿಯತಮನಾದ ತಿಮ್ಮಣ್ಣನ ಅಂಕಶಾಯಿನಿಯಾಗಿರುವೆ. ರಾಜಭಟರು ನಿನ್ನ ಕಾಲುಗುರನ್ನು ತೊಡಲಾರರು. ಧೈರ್ಯದಿಂದ ಎದ್ದೇಳು ಎಂದು ಹೇಳಿ ಮೇಲಕ್ಕೆಬ್ಬಿಸಿದನು ಕನ್ನಾಂಬೆಯು ಕಣ್ಣು ತೆರೆದು ಸುತ್ತಲೂ ನೋಡಿದಳು. ಅರುಣೋದಯದ ಸಮಯ. ಫಾಲ್ಗುಣಮಾಸದ ಪ್ರಥಮ ದಿನ. ಆ ಅರುಣಪ್ರಭೆಯು ಕನ್ನಾಂಬೆಯ ಮುಖದ ಮೇಲೆ ಬಿದ್ದಿತ್ತು. ತಿಮ್ಮಣ್ಣನು ಅವಳನ್ನು ಆಲಿಂಗಿಸಿ ಕಪೋಲವನ್ನು ಚುಂಬಿಸಿದನು. ಕನ್ನಾಂಬೆಯು, "ತಿಮ್ಮಣ್ಣ ಆ ಕುಮಾರರಾಜನು ಮೃತಿಹೊಂದಿದನೇ? ಈ ಕಾರ್ಯವನ್ನು ನನ್ನ ಕೈಯಿಂದ ಏಕೆ ಮಾಡಿಸಿದೆ" ಎಂದಳು.

ಕನ್ನಾಂಬೆ! ಇದೇ ದಿಬ್ಬದ ಮೇಲೆ ನೀನು ಪುಣ್ಯಪಾಪಗಳಲ್ಲಿ ನನ್ನ ಸಹಧರ್ಮಿಣಿಯೆಂದು ವಚನವಿತ್ತುದನ್ನೂ ಮರೆತೆಯಾ? ನೀನು ಈ ವಿಜಯನಗರದ ರಾಜ್ಯಕ್ಕೆ ಕ್ಷೇಮವನ್ನು ಮಾಡಿರುವಿ. ಅದರ ಪ್ರಭಾವವು ಮುಂದೆ ತಿಳಿಯುತ್ತದೆ ಎಂದನು.

ಕನ್ನಾಂಬೆ ಇನ್ನು ಮಾಡಬೇಕಾಗದ ಬಹಳ ಕಾರ್ಯಗಳು ಉಳಿದಿವೆ. ನೀನು ಭಯಪಡಬೇಡ. ಹೊಸಪೇಟೆಯಲ್ಲಿ ನಿನಗೊಂದು ನಿರ್ಭಯ ಸ್ಥಾನವನ್ನು ಕಲ್ಪಿಸಿದ್ದೇನೆ ನಡೆ ಎಂದು ಹೇಳಿ ಕನ್ನಾಂಬೆಯನ್ನು ನದಿ ದಾಟಿಸಿ ಕರೆದುಕೊಂಡುಹೋದನು.

ಬೆಳಕು ಹರಿಯಿತು. ಮೊಟ್ಟಮೊದಲು ಅಂತಃಪುರದಲ್ಲಿ ಸತ್ತುಬಿದ್ದಿದ್ದ ತಿರುಮಲರಾಯನನ್ನು ಕಂಡ ದಾಸಿಯು ಚಿಟ್ಟನೆ ಚೀರಿ ಅರಚಿಕೊಂಡಳು. ದ್ವಾರಪಾಲಕರು ಪಹರೆಯವರು ಎಲ್ಲರೂ ಆ ಸ್ಥಳಕ್ಕೆ ಓಡಿದರು. ಎಲ್ಲರೂ ಹಾಹಾಕಾರ ಮಾಡುತ್ತಾರೆ. ಯಾರ ಬಾಯಿಯಲ್ಲಿಯೂ ಒಂದು ಮಾತೂ ಹೊರಡದು ಒಬ್ಬರ ಮುಖಗಳನ್ನೊಬ್ಬರು ನೋಡುತ್ತಾರೆ. ಅರಮನೆಯಲ್ಲೆಲ್ಲಾ ಸುದ್ದಿಯು ಹರಡಿತು. ದಾಸಿಯರು ಓಡಿಹೋಗಿ ಮಹಾರಾಣಿ ತಿರುಮಲಾಂಬೆಯನ್ನು ಅಲ್ಲಿಗೆ ಕರೆತಂದರು. ತಿರುಮಲಾಂಬೆಯು ಮಗನ ಮೇಲೆ

ಬಿದ್ದು ಗೋಳಿಡಲಾರಂಭಿಸಿದಳು. ಚಿನ್ನಾಂಬೆಯೂ ಅಲ್ಲಿಗೆ ಬಂದಳು. ಮಹಾರಾಜನಿಗೆ ಸಮಾಚಾರವು ಬಂದಿತು. ಅವನು ತಿರುಮಲಾಂಬೆಯ ಅಂತಃಪುರಕ್ಕೆ ಬಂದು ನೆಲದ ಮೇಲೆ ಬಿದ್ದಿದ್ದ ಬಾಲಕನನ್ನು ನೋಡಿದನು. ಶಿಲಾಪ್ರತಿಮೆಯಂತೆ ನಿಂತುಬಿಟ್ಟನು. ಮಾತನಾಡಲಿಲ್ಲ. ನಿಂತಲ್ಲಿಯೇ ನಿಂತಿದ್ದನು. ನಗರದಲ್ಲೆಲ್ಲಾ ಸಮಾಚಾರವು ಹಬ್ಬಿತು. ಅಚ್ಯುತರಾಯನಿಗೂ ಈ ದುರಂತವಾರ್ತೆಯು ಕಿವಿಗೆ ಬಿತ್ತು. ಅವನು ಅರಮನೆಗೆ ಧಾವಿಸಿ ಬಂದು ಮಹಾರಾಜನನ್ನು ಸಂತೈಸಿದನು. ಆದಿನವೆಲ್ಲಾ ಕನ್ನಾಂಬೆಯ ನೆನಪು ಯಾರಿಗೂ ಬರಲಿಲ್ಲ. ಸಂಧ್ಯಾಕಾಲದವರೆಗೂ ಅರಮನೆಯೆಲ್ಲಾ ದುಃಖಮಯವಾಗಿತ್ತು. ಮೊದಲು ಕನ್ನಾಂಬೆ ಎಲ್ಲಿ ? ಎಂಬ ಯೋಚನೆಯು ಚಿನ್ನಾಂಬಿಕೆಗೆ ಹೊಳೆಯಿತು. ಅವಳು ಹೋಗಿ ಕನ್ನಾಂಬೆಯನ್ನು ಅರಸಿದಳು. ಅಂತಃಪುರದಲ್ಲಿ ವಿಷಪ್ರಾಶನ ಮಾಡಿಸಿದವರು ಯಾರು ಎಂಬ ಗುಸುಗುಂಪಲು ಹತ್ತಿತು. ಎಲ್ಲರ ತುಟಿಗಳ.ಮೇಲೆಯೂ ಕನ್ನಾಂಬೆಯ ಹೆಸರು ಅಸ್ಪಷ್ಟವಾಗಿ ಬಂದಿತು. ಚಿನ್ನಾಂಬೆಯ ಮುಖವು ಅಪಮಾನದಿಂದ ಮಲಿನವಾಯಿತು. ಅವಳು ಕಣ್ಣೀರಿಡುತ್ತಾ ತನ್ನ ಅಂತಃಪುರಕ್ಕೆ ಹೊರಟುಹೋದಳು ಕೃಷ್ಣ ದೇವರಾಯನು ಇದೆಲ್ಲವನ್ನೂ ಕಂಡರೂ ಕಾಣದವನಂತೆ ಗಂಭೀರಭಾವದಿಂದ ಇದ್ದನು. ರಾಜಧಾನಿಗೆ ರಾಜಧಾನಿಯೇ ಅರಮನೆಯ ಮುಂದೆ ಬಂದು ನಿಂತು ಗೋಳಿಟ್ಟಿತು. ಮರುದಿನ ಪ್ರಾತಃಕಾಲ ಆ ಬಾಲರಾಜನ ಶರೀರ ವನ್ನು ಪುಷ್ಪಾಲಂಕಾರಗಳಿಂದ ಅಲಂಕರಿಸಿ ಚಿನ್ನದ ಪಲ್ಲಕ್ಕಿಯಲ್ಲಿ ಉತ್ಸವ ದಿಂದ ಕೊಂಡೊಯ್ದು ಶಾಸ್ತ್ರೋಕ್ತವಾಗಿ ಸಂಸ್ಕಾರಗಳನ್ನು ನೇರವೇರಿಸಿದರು.

ಕೃಷ್ಣದೇವರಾಯನು ದುಃಖದಲ್ಲಿ ಮುಳುಗಿ ಏನೊಂದು ಆಲೋಚನೆ ಯನ್ನು ಮಾಡದೇ ತಳಮಳಿಸುತ್ತಿದ್ದನು. ಬಾಲರಾಜನಾದ ತಿರುಮಲರಾಯ ನನ್ನು ಕೊಲೆಮಾಡಿದವರಾರು ? ಎಂಬ ಮಾತುಗಳನ್ನು ರಾಜಧಾನಿಯಲ್ಲೆಲ್ಲಾ ಮಾತನಾಡಿಕೊಳ್ಳುತ್ತಿದ್ದರು. ಮಂತ್ರಿಯಾದ ಸಾಳ್ವ ತಿಮ್ಮರಸನೂ ಅವನ ಮಕ್ಕಳುಗಳೂ ಈ ಅಕೃತ್ಯವನ್ನು ಮಾಡಿದ್ದಾರೆಂದು ಜನಜನಿತವಾಗಿ ಹೋಗಿತ್ತು. ಸಾಳ್ವ ತಿಮ್ಮರಸನ ವಿಚಾರವಾಗಿ ಜನರು ನಾನಾವಿಧವಾಗಿ

ಮಾತನಾಡಿಕೊಳ್ಳುತ್ತಿದ್ದರು. ತಿಮ್ಮರಸನ ಕೈಕೆಳಗೆ ಬಲವಾದ ಸೈನ್ಯವಿದೆ. ಅಪಾರವಾದ ಐಶ್ವರ್ಯವಿದೆ. ಕೃಷ್ಣದೇವರಾಯನು ಪುತ್ರಶೋಕದಿಂದ ಸತ್ತು ಹೋಗುತ್ತಾನೆ. ಅಚ್ಯುತರಾಯನು ಶೂರನೂ ಅಲ್ಲ. ಪರಾಕ್ರಮಿಯೂ ಅಲ್ಲ. ಅವನನ್ನು ಮೂಲೆಗೆ ಕೂಡಿಸಿ ಸಾಳ್ವ ತಿಮ್ಮರಸನು ಪರಾಕ್ರಮಶಾಲಿಗಳಾದ ಅವನ ಮಕ್ಕಳೂ ರಾಜ್ಯಾಡಳಿತವನ್ನು ಕೈಗೆ ತೆಗೆದುಕೊಳ್ಳಲು ಸಂಚು ಮಾಡುತ್ತಿದ್ದಾರೆಂದು ದರಬಾರಿನ ಅಧಿಕಾರಿಗಳೆಲ್ಲರೂ ಮಾತನಾಡಿಕೊಳ್ಳು ತ್ತಿದ್ದರು. ಸಾಮಂತರಾಜರಲ್ಲಿಯೂ ಇಬ್ಭಾಗವಾಗಿತ್ತು. ಕೃಷ್ಣದೇವರಾಯನ ಶೋಕವು ಕ್ರೋಧವಾಗಿ ಪರಿಣಮಿಸಿತು. ಅವನು ಅರಮನೆಯಲ್ಲಿ ಅನೇಕರ ಮೇಲೆ ಸಂಶಯಪಟ್ಟು ಬಹುಮಂದಿ ಕಾವಲುಗಾರರನ್ನು ಅರಮನೆಯ ಅಧಿಕಾರಿಗಳನ್ನು ಕೊಲ್ಲಿಸಿದನು ಹೇರಳವಾಗಿ ಗುಪ್ತಚಾರರಿಗೆ ಹಣಕೊಟ್ಟು ತಿಮ್ಮಣ್ಣ ದಂಡನಾಯಕನು ಎಲ್ಲಿದ್ದಾನೆ. ಏನು ಮಾಡುತ್ತಿದ್ದಾನೆ ಎಂಬ ಸಮಾಚಾರಗಳನ್ನು ತರಿಸಿಕೊಳ್ಳುತ್ತಿದ್ದನು. ಉಪಾಯದಿಂದ ಆ ತಿಮ್ಮಣ್ಣ ದಂಡನಾಯಕನನ್ನು ಹಿಡಿಯಬೇಕೆಂದು ತನ್ನ ಕಡೆಯವರನ್ನು ನೇಮಿಸಿದನು.

ಸಾಳ್ವ ತಿಮ್ಮರಸನಿಗೆ ತಿರುಮಲರಾಯನ ಮರಣ ಕೃಷ್ಣದೇವ ರಾಯನ ದುಃಖ. ಆ ದುಃಖದಿಂದ ಅರಮನೆಯಲ್ಲಿ ಮಹಾರಾಜನು ಅನೇಕ ರನ್ನು ಸಂದೇಹದಿಂದ ಕೊಲೆ ಮಾಡಿಸಿದ್ದು. ಚಿನ್ನಾಂಬೆಯು ಆ ದುಃಖದಿಂದ ಅಪಮಾನದಿಂದ ಮೂಲೆಗುಂಪಾಗಿ ಬಿದ್ದಿರುವುದು ಇವೆಲ್ಲವೂ ಮನಸ್ಸಿಗೆ ಅತ್ಯಂತ ಖೇದವನ್ನುಂಟುಮಾಡಿತ್ತು. ಸಾಳ್ವ ತಿಮ್ಮರಸನು ಮನೋವ್ಯಥೆ ಯಿಂದ ರೋಗಪೀಡಿತನಾಗಿ ಬಿದ್ದುಬಿಟ್ಟನು. ಜನರ ಕಣ್ಣಿಗೆ ಬೀಳದೇ ಅಗೋಚರನಾಗಿ ಅಲೆಯುತ್ತಿದ್ದ ತಿಮ್ಮಣ್ಣ ದಂಡನಾಯಕನಿಗೆ ತನ್ನ ತಂದೆಯು ವ್ಯಾಧಿಗ್ರಸ್ತನಾಗಿ ಬಿದ್ದಿರುವನೆಂದೂ ಬದುಕಲಾರನೆಂದೂ ಸಮಾಚಾರವು ಸಿಕ್ಕಿತು. ತಿಮ್ಮಣ್ಣನು ವೇಷವನ್ನು ಮರೆಸಿಕೊಂಡು ರಾತ್ರಿಯ ಸಮಯದಲ್ಲಿ ತಂದೆಯ ದರ್ಶನವನ್ನು ಮಾಡಿ ಅವನ ಪಾದ ಗಳಿಗೆರಗಿದನು. ತಿಮ್ಮರಸನು ಅತ್ಯಂತ ವ್ಯಥೆಯಿಂದ ತಿಮ್ಮಣ್ಣನಾಯಕ ನನ್ನು ಕುರಿತು ನೀನು ಎಂತಹ ಪಾಪಕೃತ್ಯವನ್ನು ಮಾಡಿಬಿಟ್ಟೆ. ದೇವರ

ಇಷ್ಟದಂತೆ ನಡೆಯುತ್ತಿದ್ದಿತು. ನಾವೇಕೇ ಇದಕ್ಕೆ ಕಾರಣಕರ್ತರಾಗಬೇಕು ? ನೀನು ಕಳ್ಳನಂತೆ ತಲೆಯನ್ನು ಮರೆಸಿಕೊಂಡು ತಿರುಗಬೇಕಾಗಿದೆ. ಒಂದು ಪಕ್ಷ ಪ್ರತ್ಯಕ್ಷವಾಗಿ ಮಹಾರಾಜನಿಗೆ ಎದುರು ನಿಂತರೂ ನಮಗೆ ಶಕ್ತಿಯುಂಟು ಬೆಂಬಲವುಂಟು. ಈಗ ಮಾಡಿದ ನೃಶಂಸಕೃತ್ಯಕ್ಕಿಂತಲೂ ಎದುರು ನಿಂತಿದ್ದರೆ ಚೆನ್ನಾಗಿಯೇ ಇರುತ್ತಿತ್ತು. ಈ ಬಾಲರಾಜನ ಕೊಲೆ ನೀನು ತಲೆತಪ್ಪಿಸಿಕೊಂಡು ತಿರುಗುತ್ತಿರುವುದು ಮಹಾರಾಜನು ನೂರಾರು ಮಂದಿ ನಿರಪರಾಧಿಗಳನ್ನು ಕೊಲೆಮಾಡಿಸುತ್ತಿರುವುದು ಇದೆಲ್ಲವೂ ನನ್ನ ಮನಸ್ಸಿಗೆ ದುಃಖವನ್ನುಂಟುಮಾಡಿದೆ. ಇನ್ನು ಹೆಚ್ಚುಕಾಲ ಬದುಕಿರಲಾರೆ. ನಾನು ಕಾಲಗತಿಯನ್ನು ಹೊಂದಬಹುದು. ಈ ಕಡೆಗಾಲದಲ್ಲಾದರೂ ದೇವರು ನಿನ್ನನ್ನು ಕರೆತಂದು ಮುಖದರ್ಶನವನ್ನು ಮಾಡಿಸಿದ. ಅದೇ ನನ್ನ ಪುಣ್ಯ. ಮಹಾರಾಜನಾದ ಕೃಷ್ಣದೇವರಾಯನದೂ ಅಷ್ಟೆ. ಅವನು ವಿಜಯನಗರದ ಎಲ್ಲ ಚಕ್ರವರ್ತಿಗಳಿಗಿಂತಲೂ ಯಶಸ್ಸನ್ನೂ ಕೀರ್ತಿಯನ್ನೂ ಸಂಪಾದಿಸಿದ. ಶತ್ರುಗಳನ್ನು ಸದೆಬಡಿದು ರಾಜ್ಯವನ್ನು ವಿಸ್ತರಿಸಿದ. ಆದರೇನು ಈ ಕೊನೆಗಾಲದಲ್ಲಿ ಅವನಿಗೆಷ್ಟು ಅಪಖ್ಯಾತಿ ಇದು ಅವನ ಅಸ್ತಮಾನದ ಸಮಯ. ಈ ಪುತ್ರಶೋಕವು ಅದಕ್ಕೆ ಸಂಕೇತವಾಗಿದೆ. ಈ ದೈವ ದುರ್ವಿಲಾಸಕ್ಕೆ ನಾವು ಕಾರಣರಾಗಬೇಕಾಯಿತಲ್ಲಾ ಎಂಬುದೇ " ನನ್ನ ಚಿಂತೆ " ಎಂದು ವ್ಯಸನದಿಂದ ಕಣ್ಣೀರಿಟ್ಟನು.

ತಿಮ್ಮಣ್ಣ ದಂಡನಾಯಕನು ಪೂಜ್ಯನಾದ ತಂದೆಯೇ ಬಾಲಕನಾದ ತಿರುಮಲರಾಯನನ್ನು ನಾನೇ ಕೊಲ್ಲಿಸಿದೆ. ಆದರೆ ಅದರಿಂದ ಯಾರಿಗೆ ಪ್ರಯೋಜನವಾಯಿತು. ಅರ್ಥಾತ್ ಅಚ್ಚುತರಾಯನಿಗೆ ಪ್ರಯೋಜನವಾದಂತಾಯಿತು ನೀವು ಈ ಬಾಲರಾಜನ ಪಟ್ಟಾಭಿಷೇಕವನ್ನು ನಿರೋಧಿಸಿದಿರಿ. ನಿಮ್ಮ ಅಧಿಕಾರವು ಹೋಗಿ ಮುಖ್ಯ ಅಮಾತ್ಯಾಧಿಕಾರವು ಅಚ್ಚುತರಾಯನ ಕೈಗೆ ಸಿಕ್ಕಿತು. ನಾನು ಆ ಬಾಲಕನನ್ನು ಕೊಲ್ಲಿಸಿದೆ. ಆ ದುಃಖದಲ್ಲಿ ಕೃಷ್ಣದೇವರಾಯನು ಮರಣಹೊಂದುತ್ತಾನೆ. ಅವನು ಬದುಕಿದ್ದರೂ ಇನ್ನುಮೇಲೆ ಸತ್ತಂತೆಯೇ ಪೂರ್ಣ ರಾಜ್ಯಾಧಿಕಾರವು

ಅಚ್ಯುತರಾಯನಿಗೆ ಅನಾಯಾಸವಾಗಿ ಸಿಕ್ಕಿದಂತಾಗುತ್ತದೆ ನಾವು ಮಾಡಿದ ಕಾರ್ಯದಿಂದ ಅಚ್ಯುತರಾಯನಿಗೆ ಲಾಭವಾದಂತಾಯಿತು. ಇದರಿಂದ ಈಗೀಗ ನನಗೂ ವ್ಯಸನವಾಗುತ್ತಿದೆ. ತಪ್ಪುಮಾಡಿದೆನೆಂದೇ ಭಾಸವಾಗುತ್ತಿದೆ. ಕ್ಷತ್ರಿಯರಾಗಿ ಹುಟ್ಟಿ ಮಾಡಿದ ಕರ್ಮಕ್ಕಾಗಿ ಕಣ್ಣೀರಿಡುತ್ತ ಕೂಡುವುದು ಧೀರರ ಲಕ್ಷಣವಲ್ಲ ನಾನು ಕೊನೆಯವರೆಗೂ ವಿದ್ರೋಹಿಯಾಗಿಯೇ ಸಾಹಸಮಾಡುತ್ತೇನೆ. ವಿರೂಪಾಕ್ಷನ ಇಷ್ಟದಂತೆ ನಡೆಯಲಿ. ನೀವು ನನ್ನನ್ನು ಆಶೀರ್ವದಿಸಿರಿ. ಸುಖವಾಗಿ ಶಾಂತಿಯಿಂದ ಪ್ರಾಣವನ್ನು ಬಿಡಿರಿ ಎಂದು ಕಣ್ಣೀರು ಸುರಿಸುತ್ತಾ ನಿಂತನು.

ಆ ತಂದೆಮಕ್ಕಳಿಬ್ಬರೂ ಆಲಿಂಗಿಸಿದರು ಆ ಸಮಯಕ್ಕೆ ಸರಿಯಾಗಿ ರಾಜಭಟರು ಬಂದು ಅವರಿಬ್ಬರನ್ನು ಬಂಧಿಸಿದರು ತಿಮ್ಮಣ್ಣ ದಂಡನಾಯಕನು ಕೋಪಾವೇಶದಿಂದ ಅರ್ಭಟಿಸುತ್ತಾ ಕತ್ತಿಗೆ ಕೈಹಚ್ಚಿದನು. ದುರ್ವಿಧಿಯ ವಿಪಾಕದಿಂದ ತಂದೆಯ ದರ್ಶನಕ್ಕೆ ಬರುವಾಗ ನಡುಕಟ್ಟನ್ನು ಬಿಚ್ಚಿಟ್ಟು ಬಂದಿದ್ದನು. ಆ ನೆನಪಾಗಿ ತಿಮ್ಮಣ್ಣನು ಬೆರಳನ್ನು ಕಚ್ಚಿದನು. ಛಿಲ್ಲೆಂದು ರಕ್ತವು ಹಾರಿತು. ಆ ಸ್ಥಳಕ್ಕೆ ಅಚ್ಯುತರಾಯನು ಬಂದು ಅವರಿಬ್ಬರನ್ನು ಕಾರಾಗೃಹನಲ್ಲಿರಿಸಿದನು ತಿಮ್ಮಣ್ಣ ದಂಡನಾಯಕನ ತಮ್ಮನಾದ ಗೋವಿಂದರಾಜನನ್ನು ಹಿಡಿತಂದು ಕಾರಾಗೃಹದಲ್ಲಿಟ್ಟರು. ಮೂವರನ್ನು ಬೇರೆಬೇರೆಯಾಗಿ ಗುಪ್ತಸ್ಥಳಗಳಲ್ಲಿ ಬಂಧಿಸಿಡುವಂತೆ ಅಚ್ಯುತರಾಯನು ಅಪ್ಪಣೆಮಾಡಿ ಕೃಷ್ಣದೇವರಾಯನ ಸಮ್ಮುಖಕ್ಕೆ ಹೋಗಿ ಮಹಾರಾಜನ ಅಪ್ಪಣೆಯಂತೆ ಮಂತ್ರಿಯನ್ನು ಅವನ ಮಕ್ಕಳನ್ನು ಹಿಡಿದು ಕಾರಾಗೃಹದಲ್ಲಿ ಇಟ್ಟಿರುವುದಾಗಿ ತಿಳಿಸಿದನು ಸಾಳ್ವ ತಿಮ್ಮರಸನು ನಿಜವಾಗಿಯೂ ವ್ಯಾಧಿಗ್ರಸ್ತನಾಗಿದ್ದಾನೆಂದು ಅರಿಕೆಮಾಡಿದನು.

ಕೃಷ್ಣದೇವರಾಯನಿಗೆ ಸ್ವಲ್ಪ ಸಮಾಧಾನವಾಯಿತು ಅವನು ಅಚ್ಯುತರಾಯನೊಡನೆ ಹೇಳಿದನು — ಈ ದಂಡನಾಯಕನ ಜೊತೆಯಲ್ಲಿ ಕನ್ನಾಂಬೆಯೆಂಬ ಹುಡುಗಿಯೊಬ್ಬಳಿದ್ದಾಳೆ ಅವಳು ನಮ್ಮರಮನೆಯಲ್ಲಿಯೇ ಬೆಳೆದವಳು. ಹೇಗಾದರೂ ಅವಳನ್ನು ಪತ್ತೆಹಚ್ಚಬೇಕು. ಅವಳು

ಹೇಗೆ ಆ ತಿಮ್ಮಣ್ಣನಾಯಕನ ವಶಕ್ಕೆ ಸೇರಿದಳೋ ಅದು ನಿಗೂಢ ರಹಸ್ಯ ವಾಗಿದೆ. ಅವಳನ್ನು ಅಪಮಾನಗೊಳಿಸದೇ ಭಯಪಡಿಸದೇ ಹಿಡಿಸಿ ತರಿಸಬೇಕು.

ಬೆಳಕು ಹರಿಯುವುದರೊಳಗೆ ವಿಜಯನಗರದ ನಗರವೆಲ್ಲವೂ ಅಲ್ಲ ಕಲ್ಲೋಲವಾಯಿತು. ಮಂತ್ರಿ ತಿಮ್ಮರಸನ ಬಂಧನದಿಂದ ರಾಜಧಾನಿಯ ಇಡೀ ವಾತಾವರಣವೇ ಪ್ರಕ್ಷುಬ್ಧವಾಗಿ ಹೋಯಿತು. ರಾಣಿಯರು ಮಹಾ ರಾಜನ ಪ್ರಾಣಕ್ಕೂ ಆಪತ್ತು ಸಂಭವಿಸುವುದೆಂದು ಭಯಗ್ರಸ್ತರಾದರು. ಕೃಷ್ಣದೇವರಾಯನೊಡನೆ ರಾಣಿಯರು ಅತ್ತು ಕರೆದು ಬೇಡಿಕೊಂಡು ನಾಗಲಾಪುರಿಗೆ ಮಹಾರಾಜರು ಹೊರಡಬೇಕೆಂದು ಹಠಮಾಡಿದರು.

ಕೃಷ್ಣದೇವರಾಯನು ಅರಮನೆಯನ್ನು ಬಿಟ್ಟು ನಾಗಲಾಪುರಿಗೆ ತನ್ನ ರಾಣಿವಾಸದವರ ಸಮೇತವಾಗಿ ಹೊರಟುಹೋದನು.

ಆ ದಿನ ಸಂಧ್ಯಾಕಾಲದ ಸಮಯಕ್ಕೆ ನಗರದಲ್ಲೆಲ್ಲಾ ಶಾಂತಿಯು ನೆಲೆಸಿತ್ತು. ರಾಜಮಾರ್ಗಗಳಲ್ಲಿ ಅನೇಕ ಹೆಣಗಳು ಉರುಳಿಹೋಗಿದ್ದವು. ಅಚ್ಯುತರಾಯನು ತನ್ನ ಅಂಗರಕ್ಷಕರೊಡನೆ ನಗರದಲ್ಲೆಲ್ಲಾ ಗಸ್ತುತಿರುಗು ತ್ತಿದ್ದನು. ಅರ್ಧರಾತ್ರಿಯ ಸಮಯದಲ್ಲಿ ತಿಮ್ಮಣ್ಣ ದಂಡನಾಯಕನು ಇದ್ದ ಕಾರಾಗಾರದ ಬಾಗಿಲು ಚಿಲಕಗಳು ತೆರೆಯಲ್ಪಟ್ಟವು. ಅರಮನೆಯ ರಾಜ ಭಟರು ಮಹಾರಾಜರ ಆಜ್ಞೆಯಾಗಿದೆ ಎಂದು ಹೇಳಿ ತಿಮ್ಮಣ್ಣನಾಯಕನ ಕೈಕಾಲುಗಳಿಗೆ ಕಬ್ಬಿಣದ ಬೇಡಿಗಳನ್ನು ತೊಡಿಸಿ ಹಿಡಿದುಕೊಂಡು ಹೋದರು. ಕಾರಾಗೃಹದ ಅಧಿಕಾರಿಯು ಮಹಾರಾಜರು ತಿಮ್ಮಣ್ಣ ದಂಡನಾಯಕನನ್ನು ಗುಪ್ತವಾಗಿ ಕೊಲೆಮಾಡಿಸುತ್ತಾರೆಂದು ನಿರ್ಧಾರಮಾಡಿಕೊಂಡರು ಆ ರಾಜ ಭಟರು ತಿಮ್ಮಣ್ಣ ದಂಡನಾಯಕನನ್ನು ಹೊತ್ತುಕೊಂಡು ಅಂತಃಪುರದ ಉದ್ಯಾನದ ಕಡೆಗೆ ಕರೆದೊಯ್ದರು. ಅಲ್ಲಿ ಕನ್ನಾಂಬಿಕೆಯು ಕಾದಿದ್ದಳು. ಆ ಅರಮನೆಯ ರಾಜಭಟರು ತನ್ನ ಕಡೆಯವರೇ ಎಂಬುದನ್ನು ತಿಮ್ಮಣ್ಣನು ಗುರುತಿಸಿದನು. ತಿಮ್ಮಣ್ಣ ದಂಡನಾಯಕನು ಅವರನ್ನು ಉದ್ದೇಶಿಸಿ ಈ ಸಾಹಸಕೃತ್ಯವನ್ನು ಹೇಗೆ ಮಾಡಿದಿರಿ ಎಂದು ಆಶ್ಚರ್ಯದಿಂದ ಕೇಳಿದನು.

ಅವರು ವಿಸ್ತಾರವಾಗಿ ಎಲ್ಲವನ್ನು ಹೇಳುತ್ತೇವೆ. ಅಚ್ಯುತರಾಯನಿಗೆ ಸಮಾಚಾರವು ತಲುಪುವುದರೊಳಗೆ ನಾವು ಏಳು ಕೋಟೆಯ ಬಾಗಿಲುಗಳನ್ನು ಅತಿಕ್ರಮಿಸಿ ಹೊರಟುಹೋಗಿರಬೇಕು ಎಂದು ಹೇಳಿ ಅವಸರಪಡಿಸಿ ತಿಮ್ಮಣ್ಣನನ್ನೂ ಕನ್ನಾಂಬಿಕೆಯನ್ನೂ ಕುದುರೆಯ ಮೇಲೆ ಹತ್ತಿಸಿದರು. ಬೇಡಿಗಳನ್ನು ಕಿತ್ತು ಸರೋವರದಲ್ಲಿ ಬಿಸಾಡಿದರು.

ಅಚ್ಯುತರಾಯನು ನಗರದ ಗಸ್ತನ್ನು ಪೂರೈಸಿಕೊಂಡು ಗುಪ್ತ ಕಾರಾಗೃಹಕ್ಕೆ ಬಂದು ನೋಡಿದನು. ತಿಮ್ಮರಸನು ವ್ಯಾಧಿಯಿಂದ ಮುಲುಗುತ್ತ ಬಿದ್ದಿದ್ದನು. ಗೋವಿಂದರಾಜನು ನಿದ್ರಾಭಿಭೂತನಾಗಿದ್ದನು. ತಿಮ್ಮಣ್ಣ ದಂಡನಾಯಕನಿದ್ದ ಕೋಣೆಯನ್ನು ಸಮೀಪಿಸುತ್ತಲೇ ಅಚ್ಯುತರಾಯನ ಎದೆ ಹಾರಿಹೋಯಿತು. ಆ ಕೋಣೆಯು ಶೂನ್ಯವಾಗಿದ್ದಿತು. ಕಾರಾಗೃಹದ ಅಧಿಕಾರಿಯು ಶಿಸ್ತಿನಿಂದ ಕಾವಲು ಕಾಯುತ್ತಿದ್ದನು. ಅಚ್ಯುತರಾಯನು ಅವನನ್ನು ಸಮೀಪಕ್ಕೆ ಕರೆದು ಈ ಖೈದಿಯ ಸಮಾಚಾರವೇನು ಎಂದು ಕೇಳಿದನು.

ಅಧಿಕಾರಿಯು ಕಿಸೆಯಲ್ಲಿ ಭದ್ರವಾಗಿಟ್ಟುಕೊಂಡಿದ್ದ ಪತ್ರವನ್ನು ತೆಗೆದು ಅಚ್ಯುತರಾಯನ ಕೈಗೆ ಕೊಟ್ಟನು. ಅದು ಖುದ್ದು ಮಹಾರಾಜರ ಪತ್ರದಂತಿದ್ದಿತು. ಅಕ್ಷರಗಳೆಲ್ಲವೂ ಖಾಸ್ ರಾಯಸದವರದು. ಕೃಷ್ಣದೇವರಾಯನ ಸ್ವದಸ್ತೂರು ರುಜುವಿದೆ. ಅರಮನೆಯ ಮುದ್ರೆಯೊತ್ತಿದೆ. ಈ ಪತ್ರವನ್ನು ನೋಡಿ ಅಚ್ಯುತರಾಯನಿಗೆ ಆಶ್ಚರ್ಯವಾಯಿತು. ಗಾಬರಿಯೂ ಆಯಿತು. ಕೃಷ್ಣದೇವರಾಯನು ತನಗೆ ಅಧಿಕಾರವನ್ನು ಒಪ್ಪಿಸಿದಂದಿನಿಂದ ಯಾವ ಪತ್ರಗಳಿಗೂ ರುಜುಮಾಡಿರಲಿಲ್ಲ. ಅರಮನೆಯ ಮುದ್ರೆಯಿದೆ ಎಂದುಕೊಂಡು ನೇರವಾಗಿ ಅರಮನೆಗೆ ಹೋದನು. ಆ ರಾಯಸವನ್ನು ಬರೆದಿದ್ದ ಖಾಸ್ ರಾಯಸದವನನ್ನು ಮನೆಯಿಂದ ಕರೆತರುವಂತೆ ಅಪ್ಪಣೆ ಮಾಡಿದನು. ರಾಯಸದವನು ಮನೆಯಲ್ಲಿಲ್ಲ. ಅರಮನೆಯ ಗುರಿಕಾರನು ಫರಾರಿಯಾಗಿದ್ದಾನೆ. ಕೂಡಲೇ ಅಚ್ಯುತರಾಯನಿಗೆ ಇದು ಭಯಂಕರವಾದ ಕೃತ್ರಿಮ ಪತ್ರವೆಂದು ಮನಸ್ಸಿಗೆ ಹೊಳೆಯಿತು. ಅವನು ಆ ಕ್ಷಣವೇ

ತನ್ನ ಕಡೆಯ ರಾಜಭಟರನ್ನು ಕರೆಸಿ ತಿಮ್ಮಣ್ಣ ದಂಡನಾಯಕನು ಕಾರಾಗೃಹದಿಂದ ತಪ್ಪಿಸಿಕೊಂಡು ಹೋಗಿದ್ದಾನೆ. ಇನ್ನು ಒಂದು ಗಂಟೆಯಾಗಿಲ್ಲ ನಾಲ್ಕು ಕಡೆಯೂ ಹುಡುಕಿನೋಡಿ ಅವನನ್ನು ಹಿಡಿತರಬೇಕು ಎಂದು ಕಟ್ಟಪ್ಪಣೆಮಾಡಿ ಸ್ವತಃ ನಾಗಲಾಪುರಕ್ಕೆ ತೆರಳಿದನು.

ಪ್ರಾತಃಕಾಲದಲ್ಲಿ ಮಹಾರಾಜರಿಗೆ ಈ ಸಮಾಚಾರವು ತಿಳಿಯಿತು. ಆ ಪತ್ರವನ್ನು ಮಹಾರಾಜನು ಪರಿಶೀಲಿಸಿದನು. ಓಹೋ! ವಿದ್ರೋಹವು ಸರ್ವತ್ರ ವ್ಯಾಪಿಸಿದೆ. ಖಾಸ್ ರಾಯಸದವರು ಗುರುಕಾರ ಎಲ್ಲರೂ ಸಾಮೀಲಾಗಿದ್ದಾರೆ ಇನ್ನೇನು ಬೇಕು. ಇಂತಹ ಪರಿಸ್ಥಿತಿಯನ್ನು ನಾನು ಕನಸು ಮನಸುಗಳಲ್ಲಿಯೂ ಎಣಿಸಿರಲಿಲ್ಲ ವಿರೂಪಾಕ್ಷನೇ ನನ್ನನ್ನು ಕಾಪಾಡುತ್ತಿದ್ದಾನೆ. ನಾನು ಆ ಅರಮನೆಯಲ್ಲಿಯೇ ಇದ್ದಿದ್ದರೆ ನನ್ನನ್ನು ಕೊನೆಗಾಣಿಸುತ್ತಿದ್ದರು. ಇದೆಂತಹ ವಿಪರ್ಯಾಸ! ದರಬಾರಿನಲ್ಲಿ ಶತ್ರುಪಕ್ಷವೇ ಅಧಿಕವಾಗಿರುವಂತಿದೆ ಎಂದು ಹೇಳಿ ನಿಟ್ಟುಸಿರುಬಿಟ್ಟನು ನಾಗಲಾಪುರದ ಅರಮನೆಯ ಪಹರೆಯವರು ಕಾವಲುಗಾರರು ರಕ್ಷಣಾಧಿಕಾರಿಗಳು ಎಲ್ಲರನ್ನೂ ಹೊರಗೆ ಕಳಿಸಿ ಎಲ್ಲ ಸ್ಥಳಗಳಿಗೂ ಪೋರ್ಚುಗೀಸ್ ಸೈನಿಕರನ್ನು ನೇಮಿಸಿದನು ಅಂದಿನ ದಿನವೇ ಅಜಬೋಯಿಸ್ಸ ಎಂಬ ಪೋರ್ಚುಗೀಸ್ ಸರದಾರನನ್ನು ಮಂತ್ರಿಯಾಗಿ ನೇಮಕಮಾಡಿದನು.

ತಿಮ್ಮಣ್ಣ ದಂಡನಾಯಕನು ಬಂಧನದಿಂದ ಬಿಡುಗಡೆ ಹೊಂದುತ್ತಲೇ ಸಮೀಪದಲ್ಲಿದ್ದ ಕಮಲಾಪುರಕ್ಕೆ ಹೋಗಿ ಸೇರಿದನು. ಕನ್ನಾಂಬೆಯ ಬುದ್ಧಿಚಾತುರ್ಯದಿಂದ ತನ್ನ ಬಂಧವಿಮೋಚನೆಯಾಯಿತೆಂದು ಅವನು ಸಂತೋಷಿಸಿದನು.

೭

ಕೃಷ್ಣದೇವರಾಯನು ಪುತ್ರಶೋಕದಿಂದಲೂ ತನ್ನ ಮಂತ್ರಿಗಳ ಕುಟುಂಬದವರೇ ತನಗೆ ವಿರೋಧವಾಗಿ ನಿಂತಿರುವ ಖೇದದಿಂದಲೂ ಪರಿತಪಿಸುತ್ತಿದ್ದನು. ಸೆರೆಯಲ್ಲಿದ್ದ ತಿಮ್ಮಣ್ಣ ದಂಡನಾಯಕನು ಕಾರಾಗೃಹ ದಿಂದ ತಪ್ಪಿಸಿಕೊಂಡು ಹೋಗಿ ತನಗೆ ವಿರುದ್ಧವಾಗಿ ಜನರನ್ನು ಎತ್ತಿ ಕಟ್ಟುತ್ತಾ ಇರುವುದು, ಸೈನ್ಯವನ್ನು ಜಮಾಯಿಸುತ್ತಿರುವುದು ಊರುವಿನ ಮೇಲೆ ಬಕ್ಕೆ ಎದ್ದಂತಾಗಿದ್ದಿತು. ದರಬಾರಿನಲ್ಲಿ ತನಗಾರು ಪ್ರಿಯರು ಯಾರು ಅಪ್ರಿಯರು ಎಂಬುದನ್ನು ನಿರ್ಣಯಿಸಲಾರದವನಾಗಿದ್ದನು. ಅಂತಃಪುರದಲ್ಲಿಯೂ ಸುಖಶಾಂತಿಗಳಿರಲಿಲ್ಲ. ಪುತ್ರಶೋಕದಿಂದ ಪರಿತಪ್ತ ಳಾದ ತಿರುಮಲಾಂಬೆಯೊಂದು ಕಡೆ, ಅಪವಾದ ಶಂಕೆಯಿಂದ ಕುಂದಿ ಕೊಂಗುತ್ತಿರುವ ಚಿನ್ನಾಂಬೆಯು ಮತ್ತೊಂದೆಡೆ ಹೀಗೆ ಅಂತಃಪುರವು ದುಃಖಮಯವಾಗಿದ್ದಿತು. ಅವನು ತನ್ನ ದುರ್ದೈವವೇ ಇದಕ್ಕೆಲ್ಲಾ ಕಾರಣ ವೆಂದು ಅನೇಕ ಬಾರಿ ತನ್ನಷ್ಟಕ್ಕೆ ತಾನೇ ಸಮಾಧಾನಮಾಡಿಕೊಳ್ಳು ತ್ತಿದ್ದನು.

ಅಚ್ಯುತರಾಯನು ಕೃಷ್ಣದೇವರಾಯನ ಸಮಯವನ್ನು ನಿರೀಕ್ಷಣೆ ಮಾಡುತ್ತಿದ್ದನು. ಕೃಷ್ಣದೇವರಾಯನನ್ನು ಏಕಾಂತದಲ್ಲಿ ಕಂಡರೂ ಮನಬಿಚ್ಚಿ ಮಾತನಾಡಲು ಧೈರ್ಯಬಾರದೇ ಹೋಗುತ್ತಿದ್ದಿತು. ಆದರೂ ಅಚ್ಯುತ ರಾಯನು ಸಮಾಧಾನವಾಗಿ ಕೂಡುವಂತಿರಲಿಲ್ಲ. ತಿಮ್ಮಣ್ಣ ದಂಡನಾಯಕನ ಪ್ರತಾಪವು ದಿನದಿನಕ್ಕೆ ಹೆಚ್ಚಾಗುತ್ತಿದೆ. ಅವನು ಅಂತರಂಗದಲ್ಲಿಯಾದರೂ ತನ್ನ ಮೇಲೆ ಅಣ್ಣನಾದ ಕೃಷ್ಣದೇವರಾಯನ ಮೇಲೆ ಪ್ರಾಣಾಪಹಾರ

ಪ್ರಯತ್ನ ಮಾಡಬಹುದು ಅಥವಾ ಪ್ರಬಲವಾದ ಸೈನ್ಯವನ್ನೆ ಕಟ್ಟಿಕೊಂಡು ಬಂದು ನಮ್ಮ ಮೇಲೆ ಯುದ್ಧಹೂಡಬಹುದು ರಾಜಧಾನಿಯಲ್ಲಿರುವ ಸಾಮಂತರೂ ಶ್ರೀಮಂತರೂ ಯಾವ ಕಡೆಗೆ ಒಲಿಯುವರೆಂಬ ನಿರ್ಧಾರವಿಲ್ಲ. ಸೇನಾಧಿಪತಿಗಳನ್ನು ತಾನೇ ನಂಬುವುದು ಹೇಗೆ? ನಮ್ಮ ವಂಶವೇ ನಾಶವಾಗುವ ಕಾಲವು ಸಮೀಪಿಸುತ್ತಿದೆ ಎಂಬ ಭಯಂಕರ ಆಲೋಚನೆಗಳು ಅವನನ್ನು ಎಡೆಬಿಡದೇ ಪೀಡಿಸುತ್ತಿದ್ದವು ಅಚ್ಯುತರಾಯನ ಅಂತರಂಗದ ಮನೋವ್ಯಥೆಯನ್ನು ಸಹಿಸಲಾರದೇ ಹರಾತ್ತನೆ ಸಾರ್ವಭೌಮ ಕೃಷ್ಣದೇವನ ಭೇಟಿಮಾಡಿ ತನ್ನ ಮನಸ್ಸಿನ ಉದ್ವೇಗಗಳನ್ನೆಲ್ಲಾ ಅರಿಕೆಮಾಡಿದನು.

"ಅಣ್ಣನವರೇ! ನೀವು ಪುತ್ರಶೋಕದಲ್ಲಿ ಮುಳುಗಿದ್ದೀರಿ ಹೊರಗಿನ ವ್ಯಾಪಾರಗಳೊಂದಕ್ಕೂ ಮನಸ್ಸು ಕೊಡುತ್ತಿಲ್ಲ ತಿಮ್ಮಣ್ಣ ದಂಡನಾಯಕನು ಕಮಲಾಪುರದಲ್ಲಿ ನಮಗೆ ವಿರುದ್ಧವಾಗಿ ಮೂವತ್ತು ಸಾವಿರ ದಂಡನ್ನು ಸೇರಿಸಿದ್ದಾನೆ. ಮಂತ್ರಿ ಸಾಲ್ವ ತಿಮ್ಮರಸನು ಶೇಖರಿಸಿಟ್ಟಿದ್ದ ಅಪಾರ ಐಶ್ವರ್ಯವನ್ನು ವೆಚ್ಚಮಾಡುತ್ತಿದ್ದಾನೆ ನಮ್ಮ ಮೇಲೆ ಅವನು ಯುದ್ಧಕ್ಕೆ ಬಂದರೂ ಬರಬಹುದು. ನಮ್ಮ ಕುಮಾರನನ್ನು ಕೊಲೆಮಾಡಿ ಕಾರಾಗೃಹ ದಲ್ಲಿ ಶಿಕ್ಷೆಯನ್ನನುಭವಿಸುತ್ತಿದ್ದ ತಿಮ್ಮಣ್ಣನು ತಪ್ಪಿಸಿಕೊಂಡು ಹೋಗಿ ನಮಗೆ ವಿರುದ್ಧವಾಗಿ ದಂಡುಕಟ್ಟುತ್ತಿದ್ದರೂ ನಾವು ಔದಾಸೀನ್ಯದಿಂದ ಕುಳಿತಿರುವುದನ್ನು ನೋಡಿ ರಾಜಧಾನಿಯಲ್ಲಿರುವ ದೊಡ್ಡ ಅಧಿಕಾರಿಗಳು ಶ್ರೀಮಂತರು ನಾವು ಹೀನಸತ್ವರಾಗಿದ್ದೇವೆಂದು ನಮ್ಮನ್ನು ಉಪೇಕ್ಷಿಸುವ ಸ್ಥಿತಿಗೆ ಬಂದುಹೋಗಿದೆ. ಇದಕ್ಕೆಲ್ಲಾ ಪರಿಹಾರೋಪಾಯವನ್ನು ನೀವು ಚಿಂತಿಸಬೇಕು."

ಕೃಷ್ಣದೇವರಾಯನು "ಅಚ್ಯುತರಾಯ ನೀನು ಹೇಳುವುದೆಲ್ಲಾ ಒಂದು ವಿಧದಲ್ಲಿ ಸರಿಯಾಗಿಯೇ ಇದೆ. ತಿಮ್ಮಣ್ಣನು ದಂಡುಕಟ್ಟಿಕೊಂಡು ಬಂದು ನಮ್ಮ ಮೇಲೆ ಯುದ್ಧಕ್ಕೆ ನಿಲ್ಲಬಹುದೆಂಬುದು ಉತ್ಪ್ರೇಕ್ಷೆಯಾಗಿರಬಹುದು ಅಥವಾ ಅವನಿಗೆ ಹುಚ್ಚು ಹಿಡಿದಿರಬೇಕು. ಆದರೂ ಮಹಾಪರಾಧಮಾಡಿದ ತುಂಟನನ್ನು ಪುನಃ ಬಂಧಿಸಿತಂದು ಶಿಕ್ಷೆ ವಿಧಿಸದಿದ್ದರೆ, ನಮ್ಮ ದರ್ಬಾರಿನ

ಬಿಗುವು ತಪ್ಪಿಹೋಗುತ್ತದೆ. ತಿಮ್ಮಣ್ಣನನ್ನು ಶಿಕ್ಷಿಸಲೇಬೇಕು. ಯಾರಾದರೂ ಸೇನಾಧಿಪತಿಗಳನ್ನು ಕಳುಹಿಸಿ ಅವನನ್ನು ಹಿಡಿತರಿಸು" ಎಂದು ಅಪ್ಪಣೆ ಮಾಡಿದನು.

ಅಚ್ಯುತರಾಯನು ನೀವು ಅನ್ಯಥಾ ಭಾವಿಸಬಾರದು. ತಿಮ್ಮಣ್ಣ ದಂಡನಾಯಕನು ಅಷ್ಟು ಸುಲಭವಾಗಿ ಕೈಗೆ ಸಿಕ್ಕುವವನಲ್ಲ. ಅವನು ನಮ್ಮ ಎದುರಾಳಿಯೆಂದು ಜನರು ನಂಬುವಷ್ಟು ಕೊಬ್ಬಿಹೋಗಿದ್ದಾನೆ. ಅಪ್ಪಣೆ ಯಾದರೆ ನಾನೇ ಸೈನ್ಯವನ್ನು ತೆಗೆದುಕೊಂಡು ಹೋಗಿ ಅವನನ್ನು ಹಿಡಿತರು ತ್ತೇನೆ. ಅಥವಾ ಅವನು ಹುಚ್ಚುತನದಿಂದ ಹೋರಾಡಿದರೆ ಯುದ್ಧದಲ್ಲಿ ಮಡಿಯುತ್ತಾನೆ. ಅಂತೂ ಅವನನ್ನು ಸ್ವಚ್ಛಂದವಾಗಿ ಬಿಟ್ಟರಕೂಡದು ಎಂದು ಹೇಳಿ ಕೃಷ್ಣದೇವರಾಯನ ಅಪ್ಪಣೆಯನ್ನು ಪಡೆದು ನಾಗಲಾಪುರ ದಿಂದ ವಿಜಯನಗರಕ್ಕೆ ಹೋಗಿ ತಲುಪಿದನು.

ಅಚ್ಯುತರಾಯನು ತನಗೆ ಆಪ್ತರಾದ ಇಬ್ಬರು ಸೇನಾಧಿಪತಿಗಳನ್ನು ಹತ್ತುಸಾವಿರ ಸೈನ್ಯವನ್ನು ತೆಗೆದುಕೊಂಡು ಕಮಲಾಪುರದ ಸಮೀಪದಲ್ಲಿ ಹೋಗಿ ಬೀಡುಬಿಟ್ಟನು. ತನ್ನ ದೂತರೊಡನೆ ತಿಮ್ಮಣ್ಣ ದಂಡನಾಯಕನಿಗೆ ಹೇಳಿಕಳಿಸಿದನು ತಿಮ್ಮಣ್ಣ ದಂಡನಾಯಕನು ತಕ್ಷಣ ಸಾರ್ವಭೌಮ ಕೃಷ್ಣದೇವರಾಯರ ಸನ್ನಿಧಾನಕ್ಕೆ ಬಂದು ಶರಣಾಗತನಾಗಬೇಕು ಇಲ್ಲದಿದ್ದರೆ ಪ್ರಾಣಸಹಿತವಾಗಿ ಹಿಡಿದುತರಬೇಕು ಅಥವಾ ತಲೆಯನ್ನು ಕತ್ತರಿಸಿ ತರಬೇಕು ಎಂದು ಸಾರ್ವಭೌಮರ ಆಜ್ಞೆಯಾಗಿದೆ ಎಂಬುದಾಗಿ ಹೇಳಿ ಕಳಿಸಿದನು. ತಿಮ್ಮಣ್ಣ ದಂಡನಾಯಕನಿಗೆ ವಿಜಯನಗರದ ಸೈನ್ಯಗಳು ಬಂದಿವೆ. ಸ್ವಯಂ ಅಚ್ಯುತರಾಯನೇ ಸೇನಾಧಿಪತಿಯಾಗಿ ತನ್ನ ಮೇಲೆ ಯುದ್ಧಕ್ಕೆ ಬಂದಿದ್ದಾನೆ ಎಂಬ ಸಮಾಚಾರವು ಚಾರರಮುಖೇನ ತಿಳಿಯಿತು. ಅದಕ್ಕನುಗುಣವಾಗಿ ಅಚ್ಯುತರಾಯನ ಕಡೆಯ ದೂತರು ಬಂದಿದ್ದಾರೆಂದು ದ್ವಾರಪಾಲಕರು ಬಿನ್ನಹ ಮಾಡಿದರು. ತಿಮ್ಮಣ್ಣನು ಆ ದೂತರನ್ನು ತನ್ನ ಸಮ್ಮುಖಕ್ಕೆ ಕರೆಸಿಕೊಂಡನು. ಅವರು ದಂಡನಾಯಕನ ಸಮ್ಮುಖಕ್ಕೆ ಬಂದು ಕೈಮುಗಿದು ನಿಂತುಕೊಂಡರು. ತಿಮ್ಮಣ್ಣನು ನೀವು ಸಾರ್ವಭೌಮ ಕೃಷ್ಣ

ದೇವರಾಯರ ಸಹೋದರ ಅಚ್ಯುತರಾಯರ ಕಡೆಯಿಂದ ಬಂದಿರುವ ದೂತರೋ ? ನೀವು ತಂದಿರುವ ಸಮಾಚಾರವೇನು ? ಎಂದು ಪ್ರಶ್ನೆ ಮಾಡಿದನು.

ದೂತರು ತಾವು ರಾಜಧಾನಿಗೆ ಬರಬೇಕೆಂದು ಮಹಾಪ್ರಭುಗಳ ಆಜ್ಞೆಯಾಗಿರುತ್ತದೆ. ಅದಕ್ಕೆ ತಪ್ಪಿದ್ದಲ್ಲಿ ತಮ್ಮನ್ನು ಹಿಡಿದುಕೊಂಡು ಬರಬೇಕು ಅಥವಾ ತಮ್ಮ ಶಿರಸ್ಸನ್ನು ತರಬೇಕು ಎಂದು ಆಜ್ಞೆಯಾಗಿದೆ.

ಓಹೋ ! ಅಚ್ಯುತರಾಯರು ನಮ್ಮನ್ನು ಹಿಡಿದುಕೊಂಡು ಹೋಗಲು ಬಂದಿದ್ದಾರೆ. ನಾವು ಬಾರದಿದ್ದರೆ, ನಮ್ಮ ಶಿರಸ್ಸನ್ನು ಕತ್ತರಿಸಿ ತೆಗೆದು ಕೊಂಡು ಹೋಗುತ್ತಾರೆ. ನಾವು ಎಲ್ಲದಕ್ಕೂ ಸಿದ್ಧರಾಗಿದ್ದೇವೆ. ಅಚ್ಯುತ ರಾಯರೇ ಸ್ವತಃ ಬಂದಿರುವುದು ನಮಗೆಷ್ಟೋ ಸಂತೋಷಕರವಾಗಿದೆ, ಅವರಿಗೆ ತಿಳಿಸಿರಿ. ಅಚ್ಯುತರಾಯರೇ ಇಲ್ಲಿಗೆ ಬರಲಿ, ಭಯವೇನೂ ಇಲ್ಲ ನಾನು ಮೋಸದಿಂದ ಅವರನ್ನು ಬಂಧಿಸುವುದಿಲ್ಲ. ನಮ್ಮೊಡನೆ ಎದುರುನಿಂತು ಯುದ್ಧಮಾಡುವಂಥಾ ಶೂರರು ಅವರಲ್ಲ ಅವರು ಇಲ್ಲಿಗೆ ಬರಲಿ ಔತಣೋಪ ಚಾರಗಳನ್ನು ಮಾಡಿಸಿ ಉಡುಗರೆಗಳನ್ನು ಕೊಟ್ಟುಕಳುಹಿಸುತ್ತೇವೆ ಯುದ್ಧ ದಲ್ಲಿ ಗೆಲ್ಲುವುದಂತೂ ಅಸಂಭವದ ಮಾತು ಶಿರಸ್ಸು ನನ್ನ ಶಿರಸ್ಸನ್ನು ತೆಗೆದುಕೊಂಡು ಸಾರ್ವಭೌಮ ಕೃಷ್ಣದೇವರಾಯನು ಪಡೆಯುವ ಭಾಗ್ಯ ವಾದರೂ ಏನಿದೆ ? ಎಂದು ಹೇಳಿಕಳಿಸಿದನು.

ದೂತರು ಅಚ್ಯುತರಾಯನ ಶಿಬಿರಕ್ಕೆ ಬಂದು ತಿಮ್ಮಣ್ಣ ದಂಡ ನಾಯಕನ ಮಾತುಗಳನ್ನು ಅಕ್ಷರಶಃ ಅರಿಕೆಮಾಡಿದರು. ಅಚ್ಯುತರಾಯನು ತನ್ನ ಸಮೀಪದಲ್ಲಿದ್ದ ಸೇನಾಧಿಪತಿಗಳ ಕಡೆಗೆ ತಿರುಗಿ ಈ ತಿಮ್ಮಣನು ನಮಗೆ ತಿರಸ್ಕಾರದ ಪ್ರತ್ಯುತ್ತರ ಕಳುಹಿಸಿದ್ದಾನೆ. ಅಲಕ್ಷ್ಯದ ಮಾತುಗಳನ್ನು ಹೇಳಿಕಳುಹಿಸಿದ್ದಾನೆ. ಅವನಲ್ಲಿಗೆ ನಾವು ದೂತರನ್ನು ಕಳುಹಿಸಿದ್ದೇ ತಪ್ಪು. ಮಹಾಪರಾಧಮಾಡಿ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಿರುವ ಅಪರಾಧಿಯಲ್ಲಿಗೆ ರಾಜರಿಗೆ ಕಳಿಸುವಂತೆ ದೂತರನ್ನು ಕಳುಹಿಸಿದ್ದು ನಮ್ಮದೇ ಅವಿವೇಕ. ಆದರೂ ಯುದ್ಧಕ್ಕೆ ಪೂರ್ವಸಂಪ್ರದಾಯವನ್ನು ಅನುಸರಿಸಲೇ

ಬೇಕು. ಅದರಿಂದ ನಾವು ದೂತರನ್ನು ಕಳಿಸಿದೆವು. ನೀವು ಸೈನ್ಯವನ್ನು ತೆಗೆದುಕೊಂಡು ಹೋಗಿ ಆ ತಿಮ್ಮಣ್ಣ ದಂಡನಾಯಕನನ್ನು ಹಿಡಿದು ಬಂಧಿಸಿ ಕರೆತನ್ನಿರಿ' ಎಂದಪ್ಪಣೆ ಮಾಡಿದನು.

ಸೇನಾಧಿಪತಿಗಳು ಸೈನ್ಯವನ್ನು ತೆಗೆದುಕೊಂಡು ಹೋಗಿ ಯುದ್ಧಕ್ಕೆ ನಿಂತರು. ತಿಮ್ಮಣ್ಣನು ತನ್ನ ಸೈನ್ಯದೊಡನೆ ಯುದ್ಧಕ್ಕೆ ಸಿದ್ಧನಾಗಿದ್ದನು. ಬಲವಾದ ಹೋರಾಟವಾಯ್ತು. ವಿಜಯನಗರದ ಸೈನ್ಯವು ಬಹುಮಟ್ಟಿಗೆ ನಾಶವಾಯಿತು. ಸೇನಾಧಿಪತಿಗಳಿಬ್ಬರೂ ರಣಕ್ಷೇತ್ರದಲ್ಲಿ ಮುಡಿದುಹೋದರು. ಅಚ್ಯುತರಾಯನು ಕ್ರೋಧಾವೇಶದಿಂದ ಉಳಿದ ಸೈನ್ಯವನ್ನು ಕಟ್ಟಿಕೊಂಡು ಬಂದು ಯುದ್ಧಕ್ಕೆ ನಿಂತನು. ಯುದ್ಧವು ನಡೆಯುತ್ತಿದ್ದಂತೆಯೇ ತಿಮ್ಮಣ್ಣ ದಂಡನಾಯಕನ ಸೈನ್ಯಗಳು ಅಚ್ಯುತರಾಯನನ್ನು ಸುತ್ತುಗಟ್ಟಿದವು ಅಚ್ಯುತ ರಾಯನ ಸೈನ್ಯಗಳು ದಿಕ್ಕಾಪಾಲಾಗಿ ಓಡತೊಡಗಿದವು ಅಚ್ಯುತರಾಯನು ಓಡಿಹೋಗುವುದಕ್ಕೆ ಎಡೆ ಸಿಕ್ಕದೇ ಸಿಕ್ಕಿಕೊಂಡನು.

ತಿಮ್ಮಣ್ಣನಾಯಕನು ದೂರದಿಂದ ತನ್ನ ಕುದುರೆಯನ್ನು ಓಡಿಸಿ ಕೊಂಡು ಬಂದು ಅಚ್ಯುತರಾಯನ ಮುಂದೆ ನಿಂತನು ಅವನು ಗಹಗಹಿಸಿ ನಗುತ್ತಾ ಸಾರ್ವಭೌಮ ಕೃಷ್ಣದೇವರ ಸಹೋದರರಿಂಗೆ ಕತ್ತಿಯನ್ನೆತ್ತಿ ವಂದಿಸುತ್ತೇನೆ ಕೃಷ್ಣದೇವರಾಯರು ನಿಮ್ಮನ್ನು ಯುದ್ಧಕ್ಕೆ ಕಳಿಸಿಲ್ಲ. ನಿಮ್ಮ ಪರಾಕ್ರಮವೆಷ್ಟಿದೆ ಎಂಬುದನ್ನು ಪರೀಕ್ಷೆಮಾಡಲು ಕಳಿಸಿಕೊಟ್ಟಿ ದ್ದಾರೆ. ಇದರಿಂದ ಕೃಷ್ಣದೇವರಾಯರ ಖ್ಯಾತಿಗೆ ಕುಂದಕವಿಲ್ಲ. ಕುತಂತ್ರಿ ಯಾದ ಅವರ ಸಹೋದರನು ಎಂಥಾ ಪರಾಕ್ರಮಶಾಲಿಯೆಂಬುದನ್ನು ಅವರೊಂದು ಬಾರಿ ಪರೀಕ್ಷಿಸಿದಂತಾಯ್ತು. ನಾನು ಕೃಷ್ಣದೇವರಾಯನಿಗೆ ಶರಣಾಗತನಾಗಬೇಕು ಅಥವಾ ನನ್ನ ಶಿರಚ್ಛೇದ ಮಾಡಿ ತರಬೇಕೆಂದು ಸಾರ್ವಭೌಮರ ಆಜ್ಞೆಯಾಗಿದೆ. ಕೃಷ್ಣದೇವರಾಯನ ಆಜ್ಞೆಗೆ ನಾನು ಯಾವಾಗಲೂ ತಲೆಬಾಗಿಸತಕ್ಕವನು. ನಿನ್ನನ್ನು ಈಗ ಪ್ರಾಣಸಹಿತವಾಗಿ ಬಿಟ್ಟುಬಿಡುತ್ತೇನೆ. ವ್ಯಾಧಿಗ್ರಸ್ತನಾಗಿ ಕಾರಾಗೃಹದಲ್ಲಿ ಕೊಳೆಯುತ್ತಿರುವ ನಮ್ಮ ತಂದೆ ಸಾಳ್ವ ತಿಮ್ಮರಸನನ್ನು ಬಿಡುಗಡೆ ಮಾಡಿ ಆಸ್ಥಾನದಲ್ಲಿ

ಅವರನ್ನು ಗೌರವಿಸಿ ಕೃಷ್ಣದೇವರಾಯರು ಕ್ಷಮಾಪಣೆ ಕೇಳಿಕೊಂಡರೆ ಆ ಕ್ಷಣವೇ ವಿಜಯನಗರದ ಈ ಸಣ್ಣ ದಂಡನಾಯಕನು ಬಂದು ಶರಣಾಗತನಾಗಿ ಶಿರಸ್ಸನ್ನು ಸಾರ್ವಭೌಮರ ಪಾದಗಳಿಗೆ ಒಡ್ಡುತ್ತಾನೆಂದು ಸ್ಪಷ್ಟವಾಗಿ ತಿಳಿಸು. ಅದರಿಂದ ಕೃಷ್ಣದೇವನ ಖ್ಯಾತಿಯು ಇಮ್ಮಡಿಯಾಗುತ್ತದೆ ಎಂದು ಹೇಳಿ ಅಚ್ಯುತರಾಯನಿಗೆ ದಾರಿಯನ್ನು ಬಿಟ್ಟುಕೊಟ್ಟು ಹೋಗು ಸಾರ್ವಭೌಮ ಸಹೋದರನೇ ಮನೆಗೆ ಹಿಂತಿರುಗಿ ಹೋಗು. ಇನ್ನೆಂದಿಗೂ ರಣಕ್ಷೇತ್ರಕ್ಕೆ ಕಾಲಿಡಬೇಡ ಎಂದು ಹೇಳಿದನು.

ಅಚ್ಯುತರಾಯನು ಮರುಮಾತನಾಡದೇ ತನ್ನ ಕುದುರೆಯನ್ನು ಹಿಂದಕ್ಕೆ ಸರಿಸಿಕೊಂಡು ರಣಕ್ಷೇತ್ರದಿಂದ ಪಲಾಯನಮಾಡಿದನು.

ಅಚ್ಯುತರಾಯನು ಅಪಮಾನದಿಂದ ಖಿನ್ನನಾಗಿ ಕೃಷ್ಣದೇವರಾಯನ ಸಮ್ಮುಖಕ್ಕೆ ಹೋಗಿ ಅರ್ಧ ಸೈನ್ಯವು ನಾಶವಾಯಿತು. ಸೇನಾಧಿಪತಿಗಳಿಬ್ಬರೂ ರಣದಲ್ಲಿ ಮಡಿದರು. ಉಳಿದ ಸೈನ್ಯಗಳು ರಣಕ್ಷೇತ್ರಕ್ಕೆ ಹೋಗಲು ಹಿಂಜರಿದವು. ತಿಮ್ಮಣ್ಣನಾಯಕನನ್ನು ಹಿಡಿತರುವುದು ದುಸ್ತರವಾಯಿತು ಎಂದು ಅರಿಕೆಮಾಡಿದನು.

ಕೃಷ್ಣದೇವರಾಯನು ತನ್ನ ಸಹೋದರನನ್ನು ಸಮಾಧಾನಗೊಳಿಸಿ ರಾಜಧಾನಿಗೆ ಕಳಿಸಿಕೊಟ್ಟನು.

ಕೃಷ್ಣದೇವರಾಯನು ತಿಮ್ಮಣ್ಣನನ್ನು ಇನ್ನು ಉದಾಸೀನಮಾಡಿಬಿಡುವುದು ಸರಿಯಲ್ಲ. ಅವನನ್ನು ಹಿಡಿತರಲು ನಾನೇ ಹೋಗುವುದು ಗೌರವಾಸ್ಪದವಾದುದಲ್ಲ. ಮಹಾಪ್ರಧಾನನೆನಿಸಿಕೊಂಡ ಅಚ್ಯುತರಾಯನೇ ಹಿಂಜರಿದು ಬಂದಿರುವಾಗ ನಮ್ಮ ಇತರ ಸೇನಾಧಿಪತಿಗಳು ಈ ಕಾರ್‍ಯಕ್ಕೆ ಹೋಗುವುದನ್ನು ಮನಸಾರ ಸಮ್ಮತಿಸದು. ಮುಖ್ಯವಾಗಿ ನಮ್ಮ ಸೇನಾಧಿಪತಿಗಳಲ್ಲಿ ಬಹುಮಂದಿ ಸಾಳ್ವ ತಿಮ್ಮರಸನಿಂದ ಉಪಕೃತರಾದವರು. ಆ ಕೃತಜ್ಞತೆಯು ಅವರ ಉತ್ಸಾಹಪೌರುಷಗಳನ್ನು ಕುಂಠಿತವಾಗಿ ಮಾಡುತ್ತವೆ ಎಂದು ಆಲೋಚಿಸಿ ಪೋರ್ಚುಗೀಸ್ ಸೇನಾಧಿಪತಿಯಾದ ಅಜಬೋಯಿಸ್ಸನನ್ನು ಸಮ್ಮುಖಕ್ಕೆ ಕರೆಸಿದನು. ಅಜಬೋಯಿಸ್ಸನೊಡನೆ ಅಪ್ರತೆಯಿಂದ

ಹೇಳಿದನು—ಪ್ರಕೃತ ನಮ್ಮ ದರ್ಬಾರಿನ ವಿಚಾರಗಳೆಲ್ಲವೂ ನಿಮಗೆ ತಿಳಿದೇ ಇದೆ. ನಮ್ಮ ದಂಡನಾಯಕನೊಬ್ಬನು ದಂಗೆ ಎದ್ದಿದ್ದಾನೆ. ಅವನು ಸಾಲ್ವ ತಿಮ್ಮರಸರ ಮಗ ತಿಮ್ಮಣ್ಣ ದಂಡನಾಯಕ. ಪರಾಕ್ರಮಶಾಲಿಯೂ ಹೌದು. ಅವನ ತಂದೆಯ ಅಧೀನದಲ್ಲಿದ್ದ ಸೈನ್ಯವನ್ನು ಕಟ್ಟಿಕೊಂಡು ಕಮಲಾಪುರದಲ್ಲಿ ಸೇರಿಕೊಂಡು ದಾಂಧಲೆ ಮಾಡುತ್ತಿದ್ದಾನೆ. ನಮ್ಮ ಸಹೋದರರಾದ ಅಚ್ಯುತರಾಯರು ಸ್ವತಃ ಅವನನ್ನು ಹಿಡಿತರಲು ಹೋಗಿ ಅಸಮರ್ಥರಾಗಿ ಹಿಂದಕ್ಕೆ ಬಂದಿದ್ದಾರೆ ನೀವು ನಿಮ್ಮ ಸೈನ್ಯದೊಡನೆ ಹೋಗಿ ಅವನನ್ನು ಹಿಡಿದುತರಬೇಕು ಎಂದನು.

ಅಜಬೋಯಿಸ್ಸನು ಸಾರ್ವಭೌಮರ ಇಷ್ಟದಂತೆ ತಿಮ್ಮಣ್ಣನನ್ನು ಹಿಡಿದುತರುವುದಾಗಿ ವಾಗ್ದಾನಮಾಡಿ ತನ್ನ ಸೈನ್ಯವನ್ನು ತೆಗೆದುಕೊಂಡು ಕಮಲಾಪುರಕ್ಕೆ ಹೋದನು.

ಪೋರ್ಚುಗೀಸ್ ಸೇನಾಧಿಪತಿಯು ತನ್ನನ್ನು ಹಿಡಿದುಕೊಂಡು ಹೋಗಲು ಬಂದಿದ್ದಾನೆಂಬ ವಾರ್ತೆಯನ್ನು ಕೇಳುತ್ತಲೇ ತಿಮ್ಮಣ್ಣನು ಅಧೀರನಾದನು. ತಾನು ಯುದ್ಧಮಾಡಬೇಕೇ ಶರಣಾಗತಿಯನ್ನು ಒಪ್ಪಿಕೊಳ್ಳಬೇಕೆ ? ಎಂದು ಕ್ಷಣಹೊತ್ತು ಆಲೋಚನೆ ಮಾಡಿದನು. ಪೋರ್ಚುಗೀಸ್ ಸೇನಾಧಿಪತಿಯು ಬಂದಿದ್ದಾನೆಂಬ ಮಾತ್ರಕ್ಕೆ ನಾನೇಕೆ ಅಂಜಬೇಕು. ಒಂದುಬಾರಿ ಯುದ್ಧಕ್ಕೆ ನಿಂತಮೇಲೆ ಕೊನೆಯತನಕ ಯುದ್ಧಮಾಡಿಯೇ ಬಿಡಬೇಕು. ಜಯಾಪಜಯಗಳು ದೇವರ ಅಧೀನ ಓಡಿಹೋಗಿ ಪ್ರಾಣವನ್ನು ಉಳಿಸಿಕೊಳ್ಳುವುದು ಹೇಡಿಗಳ ಲಕ್ಷಣ ಸಾಲ್ವ ತಿಮ್ಮರಸನ ಮಗ ವೀರಪುತ್ರ ಎಂದು ದೇಶವೆಲ್ಲವೂ ಕೊಂಡಾಡುವಂತೆ ಯುದ್ಧಮಾಡುತ್ತೇನೆ ಎಂದು ನಿಶ್ಚಯಮಾಡಿಕೊಂಡು ಸೈನ್ಯಸಮೇತವಾಗಿ ಯುದ್ಧಕ್ಕೆ ಹೊರಟನು. ಆ ಪೋರ್ಚುಗೀಸ್ ಸೈನಿಕರೊಡನೆ ದಂಡನಾಯಕನ ಸೈನ್ಯವು ಹೆಚ್ಚುಕಾಲ ಹೋರಾಡಲಾರದೇ ಚದುರಿಹೋಗಲಾರಂಭಿಸಿತು. ತಿಮ್ಮಣ್ಣ ದಂಡನಾಯಕನು ತನ್ನ ಸೈನ್ಯಗಳು ಸಾವಿರ ಸಂಖ್ಯೆಯಲ್ಲಿ ಸತ್ತುಬಿದ್ದಿರುವುದನ್ನು ಕಣ್ಣಾರ ನೋಡಿದನು. ಹಾಗೆ ಅನ್ಯಾಯವಾಗಿ ಸೈನ್ಯಗಳನ್ನು ಸಾವಿರಗಟ್ಟಲೆ ಬಲಿ

ಕೊಡುವುದು ನ್ಯಾಯವಲ್ಲವೆಂದು ಬಗೆದು ಸೇನಾಧಿಪತಿ ಅಜಬೋಯಿಸ್ಸನಲ್ಲಿಗೆ ದೂತರನ್ನು ಕಳಿಸಿಕೊಟ್ಟನು. ಯುದ್ಧದಿಂದ ಪ್ರಯೋಜನವಿಲ್ಲ ನಾನು ಸೇನಾಧಿಪತಿಗಳ ವಶವಾಗುತ್ತೇನೆ. ಅರಮನೆಗೆ ಹೋಗಿ ಸೇನಾಧಿಪತಿಗಳ ಸಮ್ಮುಖಕ್ಕೆ ಬರುತ್ತೇನೆ ಎಂದು ಹೇಳಿಕಳಿಸಿದನು. ಪೋರ್ಚುಗೀಸ್ ಸೇನಾಧಿಪತಿಯು ಯುದ್ಧವನ್ನು ನಿಲ್ಲಿಸಿದನು.

ತಿಮ್ಮಣ್ಣ ದಂಡನಾಯಕನು ಭರದಿಂದ ತನ್ನ ನಿವಾಸಕ್ಕೆ ಹಿಂತಿರುಗಿದನು. ಅವನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಕನ್ನಾಂಬಿಕೆಯನ್ನು ದರ್ಶನ ಮಾಡಿ ಈ ಯುದ್ಧದಲ್ಲಿ ಪೋರ್ಚುಗೀಸ್ ಸೇನಾಧಿಪತಿಯು ಜಯಹೊಂದಿದ್ದಾನೆ. ನಾನು ಅವನಿಗೆ ವಶನಾಗುವುದಾಗಿ ಒಪ್ಪಿಗೆ ಕೊಟ್ಟಿದ್ದೇನೆ. ವಶನಾಗದಿದ್ದರೂ ಅವನು ನನ್ನನ್ನು ಸೆರೆಹಿಡಿಯುತ್ತಾನೆ. ಸ್ವತಃ ಪ್ರಾಣ ಕಳೆದುಕೊಳ್ಳುವುದು ಹೇಡಿಗಳ ಲಕ್ಷಣ. ನಾನು ಅವನೊಡನೆ ಕೃಷ್ಣದೇವರಾಯನ ಸಮ್ಮುಖಕ್ಕೆ ಹೋಗುತ್ತೇನೆ. ಅವನು ಕೊಟ್ಟ ಶಿಕ್ಷೆಗೆ ತಲೆಯೊಡ್ಡುತ್ತೇನೆ. ಜೀವದಿಂದ ಉಳಿದಿದ್ದರೆ ಎಂದಿಗಾದರೂ ಬಂದು ನಿನ್ನನ್ನು ಸೇರಿಕೊಳ್ಳುತ್ತೇನೆ. ಇಲ್ಲದಿದ್ದರೆ ನಮ್ಮ ಋಣಾನುಬಂಧವು ಇಂದಿಗೆ ತೀರಿತೆಂದು ತಿಳಿದುಕೋ ಎಂದು ಹೇಳಿದನು.

ಕನ್ನಾಂಬಿಕೆಯು ಅಧೀರಳಾಗಲಿಲ್ಲ. ಅವಳು ವೀರಪತ್ನಿ. ತಿಮ್ಮಣ್ಣ ದಂಡನಾಯಕನಿಗೆ ಧೈರ್ಯ ಹೇಳಿದಳು. ಪ್ರಾಣನಾಥ ನೀನು ವೀರ ಪುರುಷನೆಂದು ನಾನು ನಿನ್ನನ್ನು ವಿವಾಹಿತಳಾಗಿದ್ದೇನೆ. ಯುದ್ಧದಲ್ಲಿ ಜಯಾಪಜಯಗಳು ಯಾರಿಗೂ ಸ್ಥಿರವಲ್ಲ. ನೀನು ನಿನ್ನ ಇಷ್ಟದಂತೆ ಸಾರ್ವಭೌಮರ ದರಬಾರಿಗೆ ಹೋಗು. ಧೀರನಂತೆ ವರ್ತಿಸು. ನನ್ನ ಸಾಹಸವನ್ನೆಲ್ಲಾ ಪ್ರಯೋಗಿಸಿ ಪುನಃ ನಿನ್ನನ್ನು ಪಡೆಯುವಂತೆ ಪ್ರಯತ್ನ ಮಾಡುತ್ತೇನೆ. ನೀನು ಬದುಕಿರುವವರೆಗೂ ನನ್ನ ಪ್ರಯತ್ನಗಳಲ್ಲಿ ಹಿಂತೆಗೆಯುವುದಿಲ್ಲ ನೀನು ಮರಣವನ್ನು ಹೊಂದಿದರೆ, ನಾನು ಮೊದಲೇ ಪ್ರಮಾಣಮಾಡಿಕೊಟ್ಟಂತೆ ನಿನ್ನೊಡನೆ ಸಂತೋಷದಿಂದ ಚಿತೆಯನ್ನು ಏರುತ್ತೇನೆ ಎಂದು ಹೇಳಿದಳು.

ಅಷ್ಟರಲ್ಲಿ ಸೇನಾಧಿಪತಿಯಾದ ಅಜಬೋಯಿಸ್ಸನು ಅರಮನೆಯನ್ನು ಸುತ್ತುಗಟ್ಟಿದನು. ದಂಡನಾಯಕನ ನಿವಾಸದ ಒಳಗೆ ಪ್ರವೇಶಮಾಡಿ ಅಂತಃಪುರದ ಬಾಗಿಲಿನಲ್ಲಿ ಬಂದು ನಿಂತನು. ತಿಮ್ಮಣ್ಣನು ಬಾಗಿಲುಗಳನ್ನು ಮುಕ್ತದ್ವಾರವಾಗಿ ತೆಗೆದು ನಿಂತುಕೊಂಡನು. ಸೇನಾಧಿಪತಿ ಬೋಯಿಸ್ಸನು ಒಳಗೆ ಬರುತ್ತಲೇ ಅವನನ್ನು ಆಸನದ ಮೇಲೆ ಕುಳ್ಳಿರಿಸಿ ತನ್ನ ಕೈ ನೀಡಿ ನಾನು ನಿಮ್ಮ ವಶನಾಗಿದ್ದೇನೆ. ನನ್ನನ್ನು ಬಂಧಿಸಬಹುದು ಎಂದು ಹೇಳಿದನು.

ಕನ್ನಾಂಬಿಕೆಯು ಆ ಸೇನಾಧಿಪತಿಯ ಮುಂದೆ ನಿಂತು ನಾನು ಈ ತಿಮ್ಮಣ್ಣನ ಧರ್ಮಪತ್ನಿ ಇವನ ಅಪರಾಧದಲ್ಲಿ ಸಮಭಾಗಿನಿ. ನನ್ನನ್ನೂ ನೀವು ಬಂಧಿಸಿ ಕರೆದೊಯ್ಯಬಹುದು ಎಂದು ಹೇಳಿದಳು

ಬೋಯಿಸ್ಸನು ರಾಜಕುಮಾರಿ ! ನಾನು ಸ್ತ್ರೀಯರ ಮೇಲೆ ಯುದ್ಧಕ್ಕೆ ಬಂದಿಲ್ಲ. ಈ ತಿಮ್ಮಣ್ಣ ದಂಡನಾಯಕರ ಮೇಲೆಯೂ ನನಗೇನೂ ದ್ವೇಷವಿಲ್ಲ. ಇಂಥಾ ಪರಾಕ್ರಮಶಾಲಿಗಳನ್ನು ನಾನು ಯಾವಾಗಲೂ ಗೌರವದಿಂದ ಪ್ರೀತಿಸುತ್ತೇನೆ ನಾನು ಸಾರ್ವಭೌಮ ಕೃಷ್ಣದೇವರಾಯರಿಗೆ ಈ ತಿಮ್ಮಣ್ಣನಾಯಕನನ್ನು ಹಿಡಿದು ತಂದು ಒಪ್ಪಿಸುತ್ತೇನೆಂದು ವಚನ ವಿತ್ತಿದ್ದೇನೆ. ಅದರಂತೆ ಇವನನ್ನು ಕರೆದುಕೊಂಡು ಹೋಗಿ ಅವರಿಗೊಪ್ಪಿಸುವುದು ನನ್ನ ಕರ್ತವ್ಯ ನಿಮ್ಮಂಥಾ ಸ್ತ್ರೀಯರನ್ನು ಹಿಡಿಯಬೇಕೆಂದು ಕೃಷ್ಣದೇವರಾಯರು ಅಪ್ಪಣೆ ಇತ್ತರೂ ನಾನು ನಿಮ್ಮಂಥವರ ಮೇಲೆ ಕೈಮಾಡತಕ್ಕವನಲ್ಲ ಮುಖ್ಯವಾಗಿ ಖ್ಯಾತಿಪೆತ್ತ ಕೃಷ್ಣದೇವರಾಯನಿಗೆ ಇಂಥಾ ಸಂಕಟಗಳು ಒದಗಬಾರದು. ಕೃಷ್ಣದೇವರಾಯರ ಸೇನಾಧಿಪತಿಯಾದ ತಿಮ್ಮಣ್ಣ ನಾಯಕರನ್ನು ಹಿಡಿದುಕೊಂಡು ಹೋಗಲು ನನ್ನ ಮನವು ಹಿಂಜರಿಯುತ್ತದೆ ನಾನು ಸಾರ್ವಭೌಮರ ಸಮ್ಮುಖದಲ್ಲಿ ಈ ತಿಮ್ಮಣ್ಣ ನಾಯಕನನ್ನು ಕರೆದೊಯ್ದು ಒಪ್ಪಿಸಿ ಅವರ ಪರವಾಗಿಯೂ ನಿಮ್ಮ ಪರವಾಗಿಯೂ ಕ್ಷಮೆ ಕೊಡಬೇಕೆಂದು ಸಾರ್ವಭೌಮರಲ್ಲಿ ಪ್ರಾರ್ಥನೆ ಮಾಡುತ್ತೇನೆ ಎಂದು ಹೇಳಿ ತಿಮ್ಮಣ್ಣ ನಾಯಕನನ್ನು ಕೈ ಹಿಡಿದು ತನ್ನ ಶಿಬಿರಕ್ಕೆ ಕರೆದುಕೊಂಡುಹೋದನು

೮

ನಾಗಲಾಪುರದ ಅರಮನೆಯಲ್ಲಿ ಏಕಾಂತದಲ್ಲಿ ಕುಳಿತಿದ್ದ ಕೃಷ್ಣದೇವ ರಾಯನನ್ನು ಅಜಬೋಯಿಸ್ಸನು ಬಂದು ಭೇಟಿಮಾಡಿ ಮಹಾರಾಜರೇ! ತಮ್ಮ ಆಜ್ಞೆಯಂತೆ ತಿಮ್ಮಣ್ಣ ದಂಡನಾಯಕನನ್ನು ಕರೆತಂದಿದ್ದೇನೆ ಎಂದು ನಮ್ರತೆಯಿಂದ ಹೇಳಿದನು.

ಕೃಷ್ಣದೇವರಾಯನ ಮುಖದಲ್ಲಿ ಸಂತೋಷದ ಚಿಹ್ನೆಗಳು ಮೂಡಿದವು. ಅವನು ನಿಮ್ಮಂಥಾ ಶೂರರು ಹೋದಮೇಲೆ ಕಾರ್ಯಸಾಧನೆಯಾಗುವುದರಲ್ಲಿ ಸಂದೇಹವುಂಟೇ? ಅವನು ತಾನಾಗಿ ಬಂದನೋ ನೀವಾಗಿ ಬಲಾತ್ಕಾರದಿಂದ ಹಿಡಿತಂದಿದ್ದೀರೋ?"

ಮಹಾರಾಜರೇ ಅವನು ವೀರಪುರುಷ ವೀರಪುರುಷರಿಗೆ ತಕ್ಕಂತೆ ನಡೆದುಕೊಂಡ ಅವನ ತಪ್ಪುಗಳೇನಿವೆಯೋ ನಿಜವಾಗಿಯೂ ಅದನ್ನು ನಾನರಿಯೆ. ನಿಮ್ಮ ಮಗನು ವಿರೋಧಭಾವನೆಯಿಂದ ಹೋಗಿ ದೂರದಲ್ಲಿ ಹಿಡಿದು ನಿಂತಿದ್ದರೆ ಹೇಗೆ ವರ್ತಿಸಬೇಕೋ ಅವನು ಹಾಗೆ ವರ್ತಿಸಿದ ಎರಡು ದಿನಗಳು ಮಹಾಪರಾಕ್ರಮದೊಡನೆ ನಮ್ಮೊಡನೆ ಹೋರಾಡಿದ ಯುದ್ಧದಲ್ಲಿ ಅವನು ಬಳಲಲಿಲ್ಲ. ಅವನ ಪರಾಕ್ರಮವು ಕುಂದಲೂ ಇಲ್ಲ ಆದರೆ ನಮ್ಮ ಸೈನಿಕರ ಗುಂಡಿನೇಟುಗಳಿಗೆ ಅವನ ಸೈನಿಕರು ಸಾವಿರಗಟ್ಟಲೆ ಸತ್ತು ಬಿದ್ದರು. ತನ್ನ ಜನರು ಅನ್ಯಾಯವಾಗಿ ಸಾಯುವುದನ್ನು ನೋಡಿ ಸಹಿಸಲಾರದೇ ನನ್ನ ವಶವರ್ತಿಯಾಗುವುದಾಗಿ ಹೇಳಿ ಕಳಿಸಿದ. ನಾನು ಯುದ್ಧವನ್ನು ನಿಲ್ಲಿಸಿದೆ. ಅವನು ಅರಮನೆಗೆ ಹೋಗಿ ಸಂತೋಷವಾಗಿ ಯಾತ್ರೆ ಹೊರಡುವ ಮಹಾ ಯಾತ್ರಿಕನಂತೆ ತನ್ನ ಸೈನಿಕರಿಗೆಲ್ಲಾ ಸಕಲ ಐಶ್ವರ್ಯ

ಗಳನ್ನು ಹಂಚಿಕೊಟ್ಟ. ಅಂಥಾ ಉದಾರಿಯಾದ ಸೇನಾಧಿಪತಿಯನ್ನು ನಾನೆಂದೂ ಕಂಡಿರಲಿಲ್ಲ. ನಾನೊಬ್ಬ ಸಾಮಾನ್ಯ ಸೈನಿಕನಾಗಿದ್ದಿದ್ದರೆ ಆಮರಣಾಂತ ಆ ಸ್ವಾಮಿಯನ್ನು ಬಿಟ್ಟುಹೋಗುತ್ತಿರಲಿಲ್ಲ. ಅವನು ತನ್ನ ನಿವಾಸದೊಳಗೆ ಹೆಂಡತಿಯ ಅಪ್ಪಣೆಯನ್ನು ಪಡೆದು ನನ್ನೊಡನೆ ಸ್ನೇಹಿತ ನಂತೆ ಹೊರಟುಬಂದ. ಅವನನ್ನು ನನ್ನ ಜೊತೆಯಲ್ಲಿಯೇ ರಥದಲ್ಲಿ ಕೂಡಿಸಿಕೊಂಡು ಬಂದೆ. ಜೊತೆಯಲ್ಲಿ ಬರುವಾಗ ಅವನನ್ನು ಎಷ್ಟೋ ವಿಧ ವಾಗಿ ಮಾತನಾಡಿಸಿದೆ ಅವನು ಒಬ್ಬರ ಮೇಲೂ ದ್ವೇಷಕಾರಲಿಲ್ಲ ಒಬ್ಬ ರನ್ನು ಹಳಿಯಲಿಲ್ಲ. ನೀನೇಕೆ ಇಂತಹ ಸಾಹಸಕೃತ್ಯವನ್ನು ಮಾಡಿದೆ ಎಂದವನನ್ನು ಸ್ನೇಹಿತನಂತೆ ಪ್ರಶ್ನೆಮಾಡಿದೆ ಅವನು ತನ್ನ ತಂದೆಗೆ ಅಪ ಮಾನವಾಗಿದೆ. ಈ ರಾಜ್ಯದಲ್ಲಿ ನನ್ನ ತಂದೆ ಸಾಳ್ವ ತಿಮ್ಮರಸನಿಗೆ ಸರಿಸಮನಾಗಿ ಪ್ರಭುಸೇವೆ ಮಾಡಿದ ಮಹಾಪುರುಷನು ಬೇರೊಬ್ಬನಿಲ್ಲ. ಅಂತಹವನು ಕಾರಾಗೃಹದಲ್ಲಿ ಕೊಳೆಯುವಂತಾಯಿತು ಅವನ ಮಗನಾಗಿ ಹುಟ್ಟಿ ನಾನು ನನ್ನ ಸರ್ವಪ್ರಯತ್ನದಿಂದಲೂ ಅವನಿಗೆ ಗೌರವವನ್ನು ತಾರ ದಿದ್ದರೆ, ಏನು ಫಲ? ನಮ್ಮಂಥಾ ವೀರರಿಗೆ ಉಳಿದಿರುವುದು ಇದೊಂದೇ ಮಾರ್ಗ. ಯುದ್ಧ ಅಥವಾ ವೀರಸ್ವರ್ಗ ಎಂದು ಹೇಳಿದ ಮುಂದೇನು ಮಾಡುವೆ ? ಎಂದು ಅವನನ್ನು ಕೇಳಿದೆ. ಅವನು ಏನೊಂದುತ್ತರವನ್ನೂ ಕೊಡಲಿಲ್ಲ. ಕೊನೆಗೆ ಮಹಾರಾಜಾ ಕೃಷ್ಣದೇವರಾಯನನ್ನು ಇನ್ನೂ ಪರೀಕ್ಷಿಸುತ್ತೇನೆ ಎಂದು ಹೇಳಿದ "ಮಹಾರಾಜರೇ! ಈ ವಿಜಯ ನಗರದಲ್ಲಿ ನಿಮ್ಮ ಛತ್ರಚ್ಛಾಯೆಯಲ್ಲಿ ಇಂತಹ ವೀರಾಧಿವೀರರು ಹುಟ್ಟಿ ರುವುದರಿಂದಲೇ ನಿಮ್ಮ ರಾಜ್ಯವು ಆಸಮುದ್ರಾಂತ ವಿಸ್ತಾರವಾಗಿದೆ. ನಿಮ್ಮ ಪರಾಕ್ರಮವು ಎಲ್ಲೆಲ್ಲಿಯೂ ಬೆಳಗುತ್ತಿದೆ ' ಎಂದು ಹೇಳಿದನು.

ಕೃಷ್ಣದೇವರಾಯನು " ಅಜಬೋಯಿನ್ನರೇ ಅವನಿಗೆ ಧರ್ಮಪತ್ನಿ ಇದ್ದಾಳೆಂದು ಹೇಳಿದಿರಿ. ಅವಳನ್ನು ನೀವು ನೋಡಿದಿರಾ ?"

" ಹೌದು ! ನಾನು ನೋಡಿದ್ದೇನೆ ಮತ್ತು ಮಾತನಾಡಿದ್ದೇನೆ. ಅವಳೂ ವೀರರಮಣೀ. ದಂಡನಾಯಕನ ಜೊತೆಯಲ್ಲಿ ನನ್ನನ್ನೂ ಸೆರೆ

ಹಿಡಿದುಕೊಂಡುಹೋಗಿರಿ. ಅವನ ಅಪರಾಧಗಳಲ್ಲಿ ನಾನೂ ಸಮಭಾಗಿನಿ ಎಂದು ಹೇಳಿದಳು.

" ನೀವು ಆ ದಂಡನಾಯಕನ ಪತ್ನಿಯನ್ನು ಕರೆತಂದಿದ್ದೀರಾ ?"

" ಮಹಾರಾಜರೇ! ಇದೇನು ಹೀಗೆ ಕೇಳುತ್ತೀರಿ ಅವಳನ್ನು ಹಿಡಿದು ತರಲು ನನಗೆ ಅಧಿಕಾರವೆಲ್ಲಿದೆ? ಒಂದು ಪಕ್ಷ ನೀವು ಅಪ್ಪಣೆ ಮಾಡಿದ್ದರೂ ನಾನು ಆ ಕಾರ್ಯಕ್ಕೆ ಒಪ್ಪುತ್ತಿರಲಿಲ್ಲ. ನೀವು ಎಷ್ಟೋ ಯುದ್ಧಗಳನ್ನು ಮಾಡಿದ್ದೀರಿ ಎಷ್ಟೋ ರಾಜರನ್ನು ಗೆದ್ದಿದ್ದೀರಿ ಯಾವ ರಾಜಪತ್ನಿಯನ್ನು ನಿಮ್ಮ ಮುಂದೆ ಓಡಿಸಿ ತರಿಸಿದ ವೃತ್ತಾಂತವನ್ನು ನಾನು ಕೇಳಿಲ್ಲ ತಾವು ಇಷ್ಟೊಂದು ಆಸಕ್ತಿಯಿಂದ ಆ ಪ್ರಶ್ನೆಯನ್ನು ಕೇಳಿದ್ದು ನನಗೆ ಆಶ್ಚರ್ಯವನ್ನುಂಟುಮಾಡುತ್ತದೆ "

" ಕೃಷ್ಣದೇವರಾಯನು ನಕ್ಕು ಅದಕ್ಕೆ ವಿಶೇಷ ಕಾರಣವುಂಟು. ನಮ್ಮರಮನೆಯಿಂದ ರಾಣಿಯವರ ಪಾಲಿತ ಪುತ್ರಿಯೊಬ್ಬಳು ಅಪಹೃತ ಳಾಗಿದ್ದಾಳೆ."

" ಹೋಯಿನ್ನನು ಅವಳು ಅಪಹೃತ ಕನ್ಯೆಯಾಗಿದ್ದರೂ ದಂಡನಾಯಕ ನಲ್ಲಿ ಅನುರಕ್ತಳು. ಅವರವರ ಪ್ರಗಾಢಪ್ರೇಮ ಆ ಅಪಹರಣವು ದೋಷವಾಗದು."

" ಆ ದಂಡನಾಯಕನ ಪತ್ನಿಯ ಹೆಸರನ್ನು ಕೇಳಿದಿರಾ ?"

" ಇಲ್ಲ ಮಹಾರಾಜರೇ ನಮ್ಮಲ್ಲಿ ಸ್ತ್ರೀಯರ ಹೆಸರು ಕೇಳುವ ಸಂಪ್ರದಾಯವಿಲ್ಲ ನಿಮ್ಮ ಹೆಂಗಸರುಗಳ ಹೆಸರು ಕಿವಿಗೆ ಬಿದ್ದರೂ ನಮಗೆ ನೆನಪಿರುವುದಿಲ್ಲ. ಖಚಿತವಾಗಿ ಹೇಳಬಲ್ಲೆ. ದಂಡನಾಯಕನ ಪತ್ನಿಯ ಹೆಸರನ್ನು ನಾನು ಕಾಣೆ. ಆದರೆ ಆ ಯುವತಿಯು ಪರಮ ಸುಂದರಿ ಧೈರ್ಯಸ್ಥೈರ್ಯಗಳಲ್ಲಿ ಆ ದಂಡನಾಯಕನಿಗೆ ಸಮಜೋಡಿಯಾದವಳು "

" ಈಗ ಅವನನ್ನೆಲ್ಲಿಟ್ಟಿದ್ದೀರಿ ?"

" ನಮ್ಮ ಬಿಡಾರದಲ್ಲಿ ಅಪ್ಪಣೆಯಾದರೆ ಕರೆತಂದು ತಮ್ಮ ಪಾದ ಗಳಮೇಲೆ ಕೆಡವುತ್ತೇನೆ.

“ಇಲ್ಲ ನಾಳೆಯದಿನ ದರಬಾರಿನಲ್ಲಿ ಅವನ ವಿಚಾರಣೆಯು ನಡೆಯುತ್ತದೆ” ಎಂದು ಹೇಳಿ ಆ ಸೇನಾಧಿಪತಿಯನ್ನು ಶ್ಲಾಘನೆಮಾಡಿ ಕಳುಹಿಸಿಕೊಟ್ಟನು.

ಕೃಷ್ಣದೇವರಾಯನು ತಿಮ್ಮಣ್ಣ ದಂಡನಾಯಕನ ವಿಚಾರದಲ್ಲಿ ಎಷ್ಟೋ ಆಲೋಚನೆ ಮಾಡಿದನು. ಪರದೇಶದವನಾದ ಜೋಯಿಸ್ಸನ ಮೆಚ್ಚುಗೆಯ ಮಾತುಗಳು ಅವನ ಕೃಪೆಯನ್ನು ಉಬ್ಬುವಂತೆ ಮಾಡಿದ್ದವು. ಅವನ ಹೆಂಡತಿಯೆಂಬ ಹೆಣ್ಣು ಮತ್ಯಾರೂ ಇಲ್ಲ. ಆ ಕನ್ನಾಂಬೆಯೇ. ಅವಳಿಗಾಗಿಯಾದರೂ ಆ ತಿಮ್ಮಣ್ಣನನ್ನು ಕ್ಷಮಿಸಲೇಬೇಕಾಗುವುದು ಎಂದುಕೊಂಡನು. ಮತ್ತೊಂದುಬಾರಿ ಆ ಜೋಧಬಾಲಕ ತಿರುಮಲರಾಯನ ದುರಂತ ಮರಣ ಸಾಳ್ವ ತಿಮ್ಮರಸನ ಮನೆತನದವರು ರಾಜ್ಯದಲ್ಲಿ ಎಬ್ಬಿಸಿರುವ ಗೊಂದಲ ಅಚ್ಯುತರಾಯನಿಗೆ ಆದ ಅಪಮಾನ ಇವೆಲ್ಲವೂ ಜ್ಞಾಪಕಕ್ಕೆ ಬಂದು ಕ್ರೋಧಾವೇಶದಿಂದ ಮನಸ್ಸಿನಲ್ಲಿ ಉರಿಯೆದ್ದಿತು. ಕ್ಷಮೆ ಮತ್ತು ಶಿಕ್ಷೆ ಇವುಗಳು ಅವನ ಮನಸ್ಸಿನಮೇಲೆ ಒಂದರಮೇಲೊಂದು ಎದ್ದು ಬಂದು ಕಾದಾಡಿ ಅವನ ಹೃದಯವನ್ನು ಛಿಪ್ರಪಟಿ ಮಾಡಿಬಿಟ್ಟವು.

ಮಾರನೆಯ ದಿನ ಪ್ರಾತಃಕಾಲ ಅರಮನೆಯ ದರ್ಬಾರು ಮಂದಿರದಲ್ಲಿ ರಾಜಸಭೆಯು ಸೇರಿದ್ದಿತು. ಕಾರಾಗೃಹದಲ್ಲಿದ್ದ ತಿಮ್ಮರಸನನ್ನೂ ಗೋವಿಂದರಾಜನನ್ನೂ ರಾಜಭಟರು ಕರೆತಂದು ರಾಜನ ಸಮ್ಮುಖದಲ್ಲಿ ನಿಲ್ಲಿಸಿದರು. ಮತ್ತೊಂದುಕಡೆ ಪೋರ್ಚುಗೀಸ್ ಸಿಪಾಯಿಗಳು ತಿಮ್ಮಣ್ಣ ದಂಡನಾಯಕನನ್ನು ಕರೆತಂದು ನಿಲ್ಲಿಸಿದರು. ಆ ಸಭೆಯಲ್ಲಿ ಸೇರಿದ್ದ ಸಾಮಂತರೂ ಉನ್ನತಾಧಿಕಾರಿಗಳೂ ಎಲ್ಲರ ಮುಖಗಳೂ ಕಳೆಗುಂದಿದ್ದವು. ಎಲ್ಲರೂ ತಲೆತಗ್ಗಿಸಿಕೊಂಡು ಕುಳಿತಿದ್ದರು. ಸಿಂಹಾಸನಾಸೀನನಾಗಿದ್ದ ಕೃಷ್ಣದೇವನು ಒಂದುಬಾರಿ ಕ್ರೂರದೃಷ್ಟಿಯಿಂದ ತಿಮ್ಮಣ್ಣ ದಂಡನಾಯಕನ ಕಡೆಗೆ ನೋಡಿದನು. ಸುತ್ತಲೂ ಸಭೆಯ ಕಡೆಗೆ ನೋಡಿದನು. ಆ ಮ್ಲಾನವದನಗಳನ್ನು ನೋಡಿದನು. ಈ ರಾಜಸಭೆಯೆಲ್ಲವೂ ತಿಮ್ಮಣ್ಣನ ಕಡೆಗೆ ಇದೆ, ಎಂದು ಅವನ ಮನದಲ್ಲಿ ಕ್ರೋಧವೆದ್ದಿತು. ಒಂದುಬಾರಿ

ಸಾಲ್ವ ತಿಮ್ಮರಸನಕಡೆಗೆ ನೋಡಿದನು. ಅವನ ತೇಜೋವಂತವಾದ ಮುಖ ಮುದ್ರೆಯನ್ನೂ ಶಾಂತವಾದ ವಿಶಾಲ ನೇತ್ರಗಳನ್ನೂ ನೋಡಿ ಕೃಷ್ಣದೇವ ರಾಯನ ಮನಸ್ಸಿನಲ್ಲಿ ನಾಚಿಕೆಯುಂಟಾಯಿತು

ಅಚ್ಯುತರಾಯನು ಆಸನದಿಂದೆದ್ದು ಮಹಾಪ್ರಭುಗಳೇ ಈ ತಿಮ್ಮಣ್ಣ ದಂಡನಾಯಕನು ಮಹಾಪರಾಧ ಮಾಡಿದ್ದಾನೆ. ಈ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾಗಿದ್ದ ಬಾಲಕ ತಿರುಮಲರಾಯನನ್ನು ಕೊಲೆ ಮಾಡಿ ಸಿದ್ದಾನೆ. ಸಭೆಯಲ್ಲೆಲ್ಲಾ ಹಾಹಾಕಾರವೆದ್ದಿತು. ಮತ್ತೊಂದು ಕೊನೆ ಯಿಂದ ಸಾಕ್ಷ್ಯವೆಲ್ಲಿದೆ? ಎಂಬ ಸಣ್ಣ ದನಿಯು ಕೇಳಿಬಂದಿತು. ಅಚ್ಯುತ ರಾಯನ ಹೃದಯವು ಕಂಪಿಸಿತು. ಅವನು ಆ ದನಿಯನ್ನು ಕೇಳದವನಂತೆ ಶಾರ್ಯದಿಂದ ಮುಂದುವರಿಸಿದನು. ಈ ಸಾಲ್ವ ತಿಮ್ಮರಸರವರು ಮಹಾ ಪ್ರಭುಗಳವರಿಗೆ ವಿರೋಧವಾಗಿ ದೇಶದಲ್ಲೆಲ್ಲಾ ಗುಲ್ಲೆಬ್ಬಿಸಿದ್ದಾರೆ. ಇವರ ಅಪರಾಧಗಳಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು. ಇಲ್ಲದಿದ್ದರೆ ಸಾರ್ವಭೌಮರ ರಾಜ್ಯಭಾರವು ಸುಸೂತ್ರವಾಗಿ ನಡೆಯುವುದು ಕಷ್ಟವಾಗು ತ್ತದೆ ಎಂದು ಅರಿಕೆಮಾಡಿ ನಿಂತುಕೊಂಡನು.

ಕೃಷ್ಣದೇವರಾಯನು ಅಕ್ಕಪಕ್ಕದಲ್ಲಿದ್ದ ಆಪ್ತರಾದ ಸಾಮಂತರ ಉನ್ನತಾಧಿಕಾರಿಗಳ ಮುಖಗಳನ್ನು ಒಂದುಬಾರಿ ನೋಡಿದನು. ಒಬ್ಬ ರಾದರೂ ತುಟಿ ಪಿಟಕ್ಕೆಂದು ಮಾತನಾಡಲಿಲ್ಲ. ಕೃಷ್ಣದೇವರಾಯನು ತಿಮ್ಮಣ್ಣನಕಡೆ ತಿರುಗಿ, “ತಿಮ್ಮಣ್ಣ! ನೀನು ಹೇಳತಕ್ಕದ್ದೇನಾದರೂ ಉಂಟೋ?” ಎಂದು ಪ್ರಶ್ನೆ ಮಾಡಿದನು.

“ಉಂಟು! ಮಹಾರಾಜರವರೇ. ಹೇಳಬೇಕಾದುದನ್ನು ಈಗ ಈ ರಾಜಸಭೆಯಲ್ಲಿ ಹೇಳದಿದ್ದರೆ ಪುನಃ ಈ ಜನ್ಮದಲ್ಲಿ ಮತ್ತೊಂದು ಬಾರಿ ಹೇಳುವ ಅವಕಾಶ ದೊರೆಯುವುದಿಲ್ಲ. ಈ ಸಿಂಹಾಸನವು ಮಹಾತಪಸ್ವಿ ಗಳಾದ ವಿದ್ಯಾರಣ್ಯ ಮಹಾಮುನಿಗಳ ತಪಃ ಪ್ರಭಾವದಿಂದ ಸ್ಥಾಪಿತ ವಾದದ್ದು. ಒಂದುಕಡೆ ಸತ್ಯ ಮತ್ತೊಂದುಕಡೆ ಧರ್ಮ ಇವುಗಳ ಬಲದಿಂದ ನಿಂತಿರತಕ್ಕದ್ದು. ತಮ್ಮ ಉಭಯಪಾರ್ಶ್ವಗಳಲ್ಲಿಯೂ ಸತ್ಯ, ಧರ್ಮಗಳು

ಮುಸುಕಾಗಿಹೋಗಿದೆ. ನಮ್ಮ ತಂದೆ ತಿಮ್ಮರಸರವರು ತಮಗೆ ವಿರುದ್ಧಾ
ಚರಣೆ ಮಾಡಿದರೆಂಬುದು ಪೂರ್ಣ ಅಸತ್ಯ ಹಾಗೆ ಹೇಳುವುದು ಪರಮ
ದ್ರೋಹ. ಅವರು ಅಂದಿಗೂ ಇಂದಿಗೂ ರಾಜನಿಷ್ಠರಾಗಿದ್ದಾರೆ. ಈ ಸಭೆ
ಯಲ್ಲಿರುವ ಎಲ್ಲರ ಹೃದಯಗಳಲ್ಲಿಯೂ ತಿಮ್ಮರಸರವರ ರಾಜನಿಷ್ಠೆಯು
ಪ್ರತಿಬಿಂಬಿಸುತ್ತಿದೆ. ಈ ರಾಜ್ಯದಲ್ಲಿ ಅವರ ರಾಜನಿಷ್ಠೆಯನ್ನು ಆಬಾಲ
ಗೋಪಾಲವಾಗಿ ಹೊಗಳುತ್ತಾರೆ ಅಂಥಾ ಸದ್ಗುಣವಂತರು ಪುಣ್ಯಾತ್ಮರು
ಈ ಸಿಂಹಾಸನದ ಮುಂದೆ ಅಪರಾಧಿಗಳಾಗಿ ನಿಂತಿರುವುದು ಈ ಸಿಂಹಾ
ಸನಕ್ಕೆ ಕಳಂಕಪ್ರಾಯವಾಗಿದೆ. ಸಭೆಯಲ್ಲೆಲ್ಲಾ ಮರಮರ ಶಬ್ದವಾಯಿತು.
ಅನೇಕರು ಕಣ್ಣುಗಳನ್ನು ಒರೆಸಿಕೊಂಡರು. ತಿಮ್ಮಣ್ಣನಾಯಕನು ಅಂಥಾ
ಸಾಲ್ವ ತಿಮ್ಮರಸರಮೇಲೆ ಅಪರಾಧವನ್ನುಹೊರಿಸಿ ಸವಾಲು ಹಾಕುತ್ತಿರು
ವವನು ಈ ಅಚ್ಯುತರಾಯ ಇವನು ಶುದ್ಧ ಹೇಡಿ ಸ್ವಾರ್ಥಪರ. ಅಂತ
ರಂಗದಲ್ಲಿ ಮಹಾಪ್ರಭುಗಳಾದ ತಮಗೆ ಎಷ್ಟೋ ದ್ರೋಹಮಾಡಿದ್ದಾನೆ.
ಅವನು ನಮ್ಮಮೇಲೆ ಈ ರಾಜಸಭೆಯಲ್ಲಿ ಸವಾಲ್ ಹಾಕಲು ನಿಂತಿದ್ದಾನೆ.
ಈ ರಾಜ್ಯದಲ್ಲಿ ಮಹಾರಾಜರಿಗೆ ವಿರೋಧವಾಗಿ ನಾವು ಗುಲ್ಲೆಬ್ಬಿ
ಸಿದ್ದೇವೆಂಬುದು ಯಥಾರ್ಥವಲ್ಲ ಇತ್ತೀಚೆಗೆ ಈ ರಾಜ್ಯದಲ್ಲಿ ನಡೆದ
ವಿದ್ಯಮಾನಗಳಿಂದ ರಾಜಭಕ್ತರುಗಳೆಲ್ಲಾ ವಿಮುಖರಾಗಿದ್ದಾರೆ ಪ್ರಜಾ
ಕ್ಷೋಭೆಯುಂಟಾಗಿದೆ ಮೃತರಾದ ತಿರುಮಲರಾಯರ ವಿಚಾರದಲ್ಲಿ
ಒಂದು ಮಾತನಾಡುವುದಕ್ಕೂ ನನಗೆ ಇಷ್ಟವಿಲ್ಲ ಎಳೆಯ ಪ್ರಾಯದ
ಆ ಅಬೋಧಬಾಲಕ ತಿರುಮಲರಾಯನ ಮರಣಕ್ಕಾಗಿ ನನಗೂ ದುಃಖ
ವೆನಿಸುತ್ತದೆ. ಈ ರಾಜ್ಯದಲ್ಲಿ ಇಂಥಾ ಧರ್ಮಸಿಂಹಾಸನಕ್ಕೆ ಪಟ್ಟಕಟ್ಟ
ಬೇಕಾದರೆ ಮಂತ್ರಿಗಳು ಸೇನಾಧಿಪತಿಗಳು ವಿದ್ವಜ್ಜನರು ಸಾಮಂತರು
ಶ್ರೀಮಂತರು ಎಲ್ಲರಅನುಮತಿಯನ್ನು ಪಡೆದು ಪಟ್ಟಾಭಿಷೇಕ ಮಾಡಬೇಕು.
ಗುರುಪೀಠಗಳವರ ಆಶೀರ್ವಾದವನ್ನು ಪಡೆಯಬೇಕು. ಸ್ವಯಂ ಮಹಾ
ರಾಜಾಧಿರಾಜ ಕೃಷ್ಣದೇವರಾಯರವರ ಪಟ್ಟಾಭಿಷೇಕವು ಹಾಗೆಯೇ ನಡೆ
ಯಿತೆಂದು ಕೇಳಿದ್ದೇನೆ. ಈ ರಾಜಸಭೆಯಲ್ಲಿ ಆದಕ್ಕೆ ಪ್ರತ್ಯಕ್ಷ ಸಾಕ್ಷೀ

ಭೂತರಾದವರು ಅನೇಕರಿದ್ದಾರೆ. ಅದೊಂದೂ ಇಲ್ಲದೇ ಆ ಹುಡುಗನನ್ನು ಈ ಸಿಂಹಾಸನದಮೇಲೆ ಕೂಡಿಸಿ ಪಟ್ಟಾಭಿಷೇಕಮಾಡಿಸಿದುದು ಲೋಕಾರಾಧನೆಗೆ ವಿರೋಧವಾದುದು. ಅದರಿಂದಲೇ ಈ ರಾಜ್ಯದಲ್ಲಿ ಇಷ್ಟೊಂದು ಕ್ಷೋಭೆ. ಕಟ್ಟಕಡೆಯಲ್ಲಿ ಆ ಹುಡುಗನ ಅಕಾಲ ಮರಣಕ್ಕೆ ನಾನು ಕಾರಣ ಕರ್ತನೆಂದು ಒಪ್ಪಿಕೊಳ್ಳುತ್ತೇನೆ ಈ ರಾಜ್ಯದ ಕ್ಷೇಮಕ್ಕಾಗಿ ನಾನು ಅದನ್ನು ಮಾಡಿದ್ದೇನೆ ಈ ಸಭೆಯವರು ಆ ಅಪರಾಧಕ್ಕಾಗಿ ನನಗೆ ಯಾವ ಶಿಕ್ಷೆಯನ್ನಾದರೂ ವಿಧಿಸಬಹುದು ನಾನು ಸಂತೋಷದಿಂದ ಅನುಭವಿಸಲು ಸಿದ್ಧನಾಗಿದ್ದೇನೆ. ನನ್ನ ತಂದೆ ಸಾಳ್ವ ತಿಮ್ಮರಸರಿಗೆ ಈ ವಿಚಾರಗಳು ಲವಲೇಶವೂ ತಿಳಿಯದು. ಅಷ್ಟೇ ಅಲ್ಲ ಆ ಕಲ್ಪನೆಯೂ ಅವರ ಮನಸ್ಸಿನಲ್ಲಿ ಇದ್ದಿರಲಿಲ್ಲ ಎಂದು ಹೇಳಿದನು.

ಸಭೆಯೆಲ್ಲವೂ ನಿಸ್ತೇಜವಾಗಿ ಉಸಿರಾಡದೇ ಕುಳಿತಿದ್ದಿತು. ಮಹಾರಾಜನು ಏನಪ್ಪಣೆ ಕೊಡುವನೋ ಎಂದು ಎಲ್ಲರ ದೃಷ್ಟಿಗಳೂ ಮಹಾರಾಜನ ಕಡೆಗೆ ನೆಟ್ಟಿದ್ದವು. ಮಹಾರಾಜನು ತಿಮ್ಮಣ್ಣ ದಂಡನಾಯಕನು ತಿರುಮಲರಾಯನ ಕೊಲೆಯನ್ನು ತಾನೇ ಒಪ್ಪಿಕೊಳ್ಳುತ್ತಾನೆ. ಅದಕ್ಕೆ ಬೇರೆ ಸಾಕ್ಷ್ಯವು ಬೇಕಾಗಿಲ್ಲ. ಕಾರ್ಯಕಾರಣಗಳನ್ನು ಅಪರಾಧಿಯಿಂದ ನಾವು ಕೇಳಬೇಕಾದುದಿಲ್ಲ. ಸಾಳ್ವ ತಿಮ್ಮರಸನಿಗಾಗಿ ನಮಗೆ ಕನಿಕರವುಂಟಾಗುತ್ತದೆ ಆದರೆ ಅವನ ಪ್ರಭಾವವಿಲ್ಲದೇ ಪ್ರಚೋದನೆಯಿಲ್ಲದೇ ಈ ತಿಮ್ಮಣ್ಣನಿಗೆ ಇಷ್ಟು ಧೈರ್ಯವು ಬರುತ್ತಿರಲಿಲ್ಲ. ಅಕಾಲ ಮರಣಕ್ಕೆ ತುತ್ತಾದ ತಿರುಮಲರಾಯನ ಪಟ್ಟಾಭಿಷೇಕಕ್ಕೆ ಮೊದಲಿನಿಂದಲೂ ಪ್ರತ್ಯಕ್ಷ ವಿರೋಧಿಯಾಗಿದ್ದವನು ಸಾಳ್ವ ತಿಮ್ಮರಸ ಅದನ್ನು ಕೊನೆಗಾಣಿಸಿದವನು ಈ ಪಾಪಿ ತಿಮ್ಮಣ್ಣ ದಂಡನಾಯಕ. ಇವರು ಶಿಕ್ಷಾರ್ಹರಾಗಿದ್ದಾರೆ. ರಾಜವಧೆಗೆ ಶೂಲಕ್ಕೇರಿಸುವುದಕ್ಕಿಂತಲೂ ಬೇರೆ ಶಿಕ್ಷೆಯಿಲ್ಲ ನನಗೆ ಇವರನ್ನು ಶೂಲಕ್ಕೇರಿಸಲು ಮನ ಒಪ್ಪುವುದಿಲ್ಲ. ಇವರನ್ನು ವಧ್ಯಸ್ಥಾನಕ್ಕೆ ಕರೆದುಕೊಂಡುಹೋಗಿ ಕಣ್ಣುಗಳನ್ನು ಕಿತ್ತು ಕಾರಾಗೃಹದಲ್ಲಿಡಿಸಿರಿ. ಆಮರಣಾಂತ ಕಾರಾಗೃಹವಾಸವನ್ನು ಅನುಭವಿಸಲಿ ಎಂದು ಅಪ್ಪಣೆ ಮಾಡಿ

ಸಿಂಹಾಸನದಿಂದ ಎದ್ದು ಅಂತಃಪುರಕ್ಕೆ ಹೊರಟುಹೋದನು.

ರಾಜಭಟರು ಆ ತಂದೆ ಮಕ್ಕಳುಗಳನ್ನು ಬಂಧಿಸಿ ಸಭೆಯಿಂದ ಕರೆದೊಯ್ದರು. ಸಭಿಕರೆಲ್ಲರೂ ಈ ರಾಜ್ಯಕ್ಕೆ ಅಂಧಕಾರವು ಮುಸುಕಿದೆ ಎಂದು ಮಾತನಾಡಿಕೊಳ್ಳುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಅಚ್ಯುತರಾಯನು ಆ ಮೂವರನ್ನು ವಧ್ಯಸ್ಥಾನಕ್ಕೆ ಹಿಡಿಸಿಕೊಂಡು ಹೋಗಿ ತನ್ನ ಸಮಕ್ಷಮ ಕಟುಕರಿಂದ ಅವರ ಕಣ್ಣುಗಳನ್ನು ಕೀಳಿಸಿ ಬೇರೆ ಬೇರೆಯಾಗಿ ಅಂಧಕಾರದ ಕೋಣೆಗಳಲ್ಲಿ ಬಂಧನದಲ್ಲಿಡಿಸಿದನು.

ಈ ಸಮಾಚಾರವು ರಾಜ್ಯದಲ್ಲೆಲ್ಲಾ ಹರಡಿತು. ಕಮಲಾಪುರದಲ್ಲಿದ್ದ ಕನ್ನಾಂಬಿಕೆಯು ರಾಜಧಾನಿಗೆ ಬಂದಳು. ಅವಳು ತಿಮ್ಮಣ್ಣ ದಂಡನಾಯಕನ ನಿಮಿತ್ತವಾಗಿ ಅನೇಕ ದಿನಗಳು ದುಃಖದಲ್ಲಿ ಕೊರಗುತ್ತಾ ಬಿದ್ದಿದ್ದಳು. ಕೃಷ್ಣದೇವರಾಯನಿಗೆ ದೂತರು ಕನ್ನಾಂಬಿಕೆಯು ರಾಜಧಾನಿಗೆ ಬಂದಿದ್ದಾಳೆಂದೂ ಗೋಪ್ಯವಾದ ಸ್ಥಳದಲ್ಲಿದ್ದಾಳೆಂದೂ ಸಮಾಚಾರ ಬಂದಿತು. ಕೃಷ್ಣದೇವರಾಯನು ವೇಷವನ್ನು ಮರೆಸಿಕೊಂಡು ತನ್ನ ಅನುಚರರೊಡನೆ ಕನ್ನಾಂಬಿಕೆಯಿದ್ದಲ್ಲಿಗೆ ಹೋಗಿ ಅವಳ ಅವಸ್ಥೆಯನ್ನು ನೋಡಿದನು. ಬಹಳ ಹೊತ್ತು ಕನ್ನಾಂಬಿಕೆಯನ್ನು ಗುರುತಿಸಲಾರದೇ ಹೋದನು. ದೂತರ ಮಾತಿನ ಮೇಲಿನ ಭರವಸೆಯಿಂದ ಕನ್ನಾಂಬಿಕೆಯಿದ್ದ ಅಂತರ್ಗೃಹಕ್ಕೆ ಹೋಗಿ ಅವಳನ್ನು ಮಾತನಾಡಿಸಿದನು. ಕನ್ನಾಂಬಿಕೆಯು ಸ್ವಲ್ಪ ಹೊತ್ತಾದ ಮೇಲೆ ಸಮಾಧಾನವನ್ನು ತಂದುಕೊಂಡು ಮಹಾರಾಜನೊಂದಿಗೆ ಮಾತನಾಡಿದಳು. ಮಹಾರಾಜನು "ಕನ್ನಾಂಬಿಕೆ! ತಿಮ್ಮಣ್ಣನು ನಿನ್ನನ್ನು ಅಪಹರಿಸಿಕೊಂಡು ಹೋಗಿ ಅನ್ಯಾಯವಾಗಿ ನಿನಗೆ ಈ ದುರವಸ್ಥೆಯನ್ನುಂಟುಮಾಡಿದ. ನಮ್ಮ ರಾಣಿವಾಸದವರೆಲ್ಲರೂ ನಿನಗಾಗಿ ದುಃಖಿಸುತ್ತಾರೆ. ನಾನೂ ಅಂದಿನಿಂದಲೇ ಪರಿತಪಿಸುತ್ತಿದ್ದೇನೆ. ನೀನು ಬದುಕಿಲ್ಲವೆಂದೇ ನನ್ನ ಭಾವನೆಯಾಗಿತ್ತು" ಎಂದನು.

ಕನ್ನಾಂಬಿಕೆಯು ಮೆಲ್ಲನೆಯ ದನಿಯಿಂದ, "ತಿಮ್ಮಣ್ಣನು ನನ್ನನ್ನು ಅಪಹರಿಸಲಿಲ್ಲ. ನಾನಾಗಿ ಅವನನ್ನು ಒಲಿದು ವಿರೂಪಾಕ್ಷನ ಸಾಕ್ಷಿಯಾಗಿ

ಅವನನ್ನು ವರಿಸಿದೆ ಅವನದೇನೂ ತಪ್ಪಿಲ್ಲ. ಒಂದು ಪಕ್ಷ ನಾನು ಈ ದುರವಸ್ಥೆಗೆ ಸಿಕ್ಕಿದ್ದರೆ ಅದು ನಿಮ್ಮ ಪ್ರಭಾವದಿಂದಲೇ ಎಂದು ಹೇಳಬಹುದು. ಅದನ್ನೆಲ್ಲಾ ಮಾತನಾಡಲು ನನಗೆ ಅಧಿಕಾರವಿಲ್ಲ. ಈಗಲೂ ತಾವು ನನಗೊಂದು ಉಪಕಾರವನ್ನು ಮಾಡಬಹುದು. ನನ್ನನ್ನು ಸಾಕಿ ಸಲಹಿದ ನಿಮ್ಮ ಪಟ್ಟದರಸಿ ಚಿನ್ನಾಂಬೆಗೆ ನಾನು ಬದುಕಿದ್ದೇನೆಂದೂ ಇಂತಹ ದುರವಸ್ಥೆಯಲ್ಲಿದ್ದೇನೆಂದೂ ತಿಳಿಸದಿದ್ದರೆ ಎಷ್ಟೋ ಮಹೋಪಕಾರ ಮಾಡಿದಂತಾಗುತ್ತದೆ. ತಮ್ಮಂಥಾ ಮಹಾಪ್ರಭುಗಳು ನನ್ನನ್ನೇಕೆ ಹುಡುಕಿಸಿದಿರಿ. ಇಲ್ಲಿಗೆ ಬಂದು ನನಗೇಕೆ ದರ್ಶನವಿತ್ತಿರಿ ಎಂದು ಅಳುತ್ತಾ ಕೇಳಿದಳು.

ಕೃಷ್ಣದೇವರಾಯನು ಕನ್ನಾಂಬೆ! ನೀನು ನಮಗೆ ಪಾಲಿತ ಪುತ್ರಿ. ನಿನ್ನಮೇಲಿನ ಅಭಿಮಾನವನ್ನು ತೊರೆಯಲಾರೆವು. ನೀನು ನನ್ನೊಡನೆ ಅರಮನೆಗೆ ಬಂದುಬಿಡು. ರಾಣಿಯವರು ಪ್ರಸನ್ನರಾಗುವರು.

ಕನ್ನಾಂಬೆಯು ಆ ದುಃಖದಲ್ಲಿಯೂ ನಕ್ಕಳು. ಮಹಾಪ್ರಭುಗಳ ಬುದ್ಧಿಗೆ ಗ್ರಹಣ ಹಿಡಿದಿರುವಂತೆ ಕಾಣುತ್ತದೆ. ಅರಮನೆಯಲ್ಲಿ ತಿರುಮಲರಾಯನ ಮರಣಕ್ಕೆ ನಾನೇ ಕಾರಣಭೂತಳೆಂದು ಅನೇಕರಿಗೆ ಸಂದೇಹವಿದೆ. ದ್ವೇಷವಿದೆ. ಅದರಲ್ಲಿ ಸ್ವಲ್ಪಮಟ್ಟಿಗೆ ಸತ್ಯವೂ ಇದೆ. ಅಲ್ಲಿಗೆ ಪುನಃ ನಾನು ಬರುವುದೆಂತು ? ನಾನೇಕೆ ಬದುಕಿದ್ದೇನೆ ಬಲ್ಲಿರಾ ? ನನ್ನ ಪ್ರಾಣವು ನನ್ನ ಕೈಯ್ಯಲ್ಲಿಯೇ ಇದೆ. ಒಂದೇ ಕ್ಷಣದಲ್ಲಿ ಅದನ್ನು ಕಿತ್ತೊಗೆದು ಬಿಡಬಲ್ಲೆ. ಅಚ್ಯುತರಾಯನು ನಮ್ಮ ಪರಮದ್ವೇಷಿ. ಅವನ ಮೇಲೆ ಪ್ರತೀಕಾರವನ್ನು ತೀರಿಸಿಕೊಳ್ಳುವುದಕ್ಕೋಸ್ಕರ ನಾನು ಬದುಕಿದ್ದೇನೆ. ಅವನು ಮಹಾರಾಜರ ಸೋದರ ಮತ್ತು ದರಬಾರಿನಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿರುವವನು. ಅವನ ಮೇಲಿನ ದ್ವೇಷವನ್ನು ಹೃದಯದಲ್ಲಿ ತುಂಬಿಕೊಂಡು ನಾನು ಅರಮನೆಯಲ್ಲಿ ವಾಸಮಾಡುವುದೆಂತು ? ತಿಮ್ಮಣ್ಣ ದಂಡನಾಯಕನು ನಾನೊಲಿದ ಪತಿ. ಅವನು ನನ್ನನ್ನು ಮದುವೆಯಾಗುವಾಗಲೇ ನಾನು ಮಹಾ ಪಾತಕಿ. ಕ್ರೂರಾತ್ಮ ನನ್ನನ್ನು ಮದುವೆಯಾಗಬೇಡ.

ನಿನಗೆ ಸುಖವಾಗದು ಎಂದು ಹೇಳಿದ. ಅವನನ್ನು-ಒಲಿದು ಮದುವೆ ಯಾಗಿ ಅವನು ಅಂಧನಾಗಿ ಕಾರಾಗಾರದಲ್ಲಿ ಕೊಳೆಯುತ್ತಿರುವಾಗ ನಾನು ಅರಮನೆಯ ಭೋಗಭಾಗ್ಯಗಳಲ್ಲಿ ಭಾಗಿಯಾಗಿರುವುದು ಹೇಗೆ? ತಿಮ್ಮಣ್ಣನು ಅಪರಾಧಿಯಾದರೆ ನಾನೂ ಅಪರಾಧಿನಿ. ನನ್ನನ್ನು ನೀವಾದರೂ ಅರ ಮನೆಗೆ ಹೇಗೆ ಕರೆದೊಯ್ಯುತ್ತೀರಿ? ಅಸಂಭವ-ಅಸಂಭವ ಮಹಾರಾಜರು ನನ್ನಮೇಲೆ ಪರಮಕೃಪೆ ಮಾಡುವುದಾದರೆ ಈ ನಿರ್ಭಾಗ್ಯಳನ್ನು ಮರೆತು ಬಿಡುವುದೊಂದೇ ವರಪ್ರದಾನ ಎಂದು ಹೇಳಿದಳು.

ಕೃಷ್ಣದೇವರಾಯನ ಕಣ್ಣುಗಳಲ್ಲಿಯೂ ಒಂದೆರಡು ಹನಿಗಳು ಉದು ರಿದವು. ಕನ್ನಾಂಬಿಕೆ ನಿನ್ನ ಅಪರಾಧಗಳು ಏನಿವೆಯೋ ಅದನ್ನು ವಿರೂ ಪಾಕ್ಷನೇ ಬಲ್ಲ. ನನಗೆ ನಿನ್ನಲ್ಲಿ ಪೂರ್ಣ ಅಭಿಮಾನವಿದೆ. ನೀನು ನಮ್ಮ ರಾಜ್ಯದಲ್ಲಿ ಎಲ್ಲಿದ್ದರೂ ನನ್ನ ರಕ್ಷಣೆಯಿದೆ. ಎಂದಾದರೊಂದು ದಿನ ನನ್ನ ಅರಮನೆಗೆ ನೀನು ಬಂದೇ ಬರುವಿ. ವೃಥಾ ದುಃಖಿಸಬೇಡ ಎಂದು ಹೇಳಿ ಕನ್ನಾಂಬಿಕೆಯನ್ನು ಸಂತೈಸಿ ಹೊರಟುಹೋದನು.

ಕೃಷ್ಣದೇವರಾಯನು ತನ್ನ ರಾಣಿಯರೊಡನೆಯೂ ಕನ್ನಾಂಬಿಕೆ ಯನ್ನು ತಾನು ನೋಡಿದ ವೃತ್ತಾಂತವನ್ನು ಹೇಳಲಿಲ್ಲ

೯

ಕೃಷ್ಣದೇವರಾಯನು ಕ್ರೋಧಾವೇಶದಲ್ಲಿ ಹಿಂದುಮುಂದೆ ನೋಡದೇ ತಿಮ್ಮಣ್ಣ ದಂಡನಾಯಕನಿಗೂ ಸಾಳ್ವ ತಿಮ್ಮರಸನಿಗೂ ಕ್ರೂರವಾದ ಶಿಕ್ಷೆಯನ್ನು ವಿಧಿಸಿದನು. ಆದರೆ ಅವನ ಹೃದಯದಲ್ಲಿ ದಾರುಣವಾದ ವೇದನೆಯುಂಟಾಯಿತು. ಈ ದುಃಖವು ಪುತ್ರಶೋಕಕ್ಕಿಂತಲೂ ಅಧಿಕವಾಗಿಯೇ ಅವನ ಮನಸ್ಸನ್ನು ನೋಯಿಸುತ್ತಿದ್ದಿತು. ಅಂದಿನಿಂದ ಅವನು ಪುನಃ ದರಬಾರಿಗೆ ಬರುತ್ತಿರಲಿಲ್ಲ. ದೊಡ್ಡ ದೊಡ್ಡ ಅಧಿಕಾರಿಗಳೆಲ್ಲರೂ ಕೃಷ್ಣದೇವರಾಯನ ಸಮ್ಮುಖಕ್ಕೆ ಹೋಗಲು ಅಂಜುತ್ತಿದ್ದರು. ಯಾವ ಘಳಿಗೆಯಲ್ಲಿ ಯಾರಿಗೆ ಆಪತ್ತು ಸಂಭವಿಸುವುದೋ ಎಂದು ಎಲ್ಲರಿಗೂ ಭಯ ಹತ್ತಿತ್ತು. ಸಾಳ್ವ ತಿಮ್ಮರಸನ ಮೇಲೆ ಹೊರಿಸಿದ ದೌರ್ಜನ್ಯ ವಿಧಿಸಿದ ಶಿಕ್ಷೆಗಳು ನ್ಯಾಯವಲ್ಲವೆಂದು ತಾನೇ ಪ್ರತ್ಯಕ್ಷನಾಗಿಹೋಗಿ ಅವನಲ್ಲಿ ಕ್ಷಮೆ ಬೇಡಬೇಕೆಂದೂ ಎಷ್ಟೋ ಬಾರಿ ಕೃಷ್ಣದೇವರಾಯನ ಮನಸ್ಸಿಗೆ ಅನ್ನಿಸುತ್ತಿದ್ದಿತು. ತಿಮ್ಮಣ್ಣ ದಂಡನಾಯಕನು ಮಹಾ ಪರಾಕ್ರಮಿಯಾದರೂ ಅವನ ಅಪರಾಧವು ಅಕ್ಷಮ್ಯವಾದುದು. ಅವನಿಗೆ ವಿಧಿಸಿದ ಶಿಕ್ಷೆಯು ನ್ಯಾಯವಾದುದು. ಆದರೆ ಸಾಳ್ವ ತಿಮ್ಮರಸನು ತನ್ನ ಮಗನು ಅಂಥಾ ದುರವಸ್ಥೆಯನ್ನು ಅನುಭವಿಸುತ್ತಿರುವಾಗ ಕೃಷ್ಣದೇವರಾಯನು ಪ್ರಾರ್ಥನೆ ಮಾಡಿದರೂ ಕ್ಷಮಿಸಲಾರನೆಂದು ಅವನ ಅಂತರಾತ್ಮವು ನುಡಿಯುತ್ತಿದ್ದಿತು. ಎಷ್ಟೇ ಆದರೂ ಜಗದ್ವಿಜಯಿಯೆನ್ನಿಸಿಕೊಂಡ ಕೃಷ್ಣದೇವರಾಯನು ಭರ ದರ್ಬಾರಿನಲ್ಲಿ ಮಂತ್ರಿ ತಿಮ್ಮರಸನಿಗೆ ಶಿಕ್ಷೆಯನ್ನು ವಿಧಿಸಿ ಅಂತರಂಗದಲ್ಲಿ

ಕ್ಷಮಾಯಾಚನೆ ಮಾಡುವುದು ತನಗೆ ಅಪಮಾನವೆಂದು ಭಾವಿಸಿ ತಟಸ್ಥ ನಾಗಿದ್ದನು.

ತಿಮ್ಮಣ್ಣ ದಂಡನಾಯಕನು ಕಾರಾಗೃಹದಲ್ಲಿ ದುಃಖಪಡುತ್ತಾ ಕೂಡ ಲಿಲ್ಲ. ತನ್ನ ಮನಸ್ಸಿನ ಉದ್ವೇಗಗಳನ್ನು ಕಾರ್ಯತಃ ಮಾಡಿ ತೋರಿಸ ಲಾಗಲಿಲ್ಲವಲ್ಲಾ ಎಂದು ಚಡಪಡಿಸುತ್ತಿದ್ದನು ಅವನು ಯಾವ ಆಲೋ ಚನೆಯನ್ನು ಮಾಡಲಾರದೆ ಒಂದೇ ದಿನದಲ್ಲಿ ಹುಚ್ಚನಂತಾದನು. ಅನ್ನಾ ಹಾರಗಳನ್ನು ತೊರೆದನು. ಅನ್ನಾಹಾರಗಳನ್ನು ತೊರೆಯುವುದು ಹಾಗಿರಲಿ ಅನ್ನ ನೀರುಗಳನ್ನು ನೀಡುವ ಸೇವಕರು ತಿಮ್ಮಣ್ಣನಿರುವ ಕೋಣೆ ಯೊಳಗೆ ಪ್ರವೇಶಮಾಡಲು ಭಯಪಡುತ್ತಿದ್ದರು ಅನ್ನದ ತಡಿಗೆಯನ್ನು ಮುಂದಿಟ್ಟು ಅನ್ನ ದಮವಿಸ್ಟೇವೆ ತೆಗೆದುಕೊಳ್ಳಿರಿ ಎಂದು ಹೇಳಿದರೆ ತಡಿಗೆ ತಾಂಬಾಳಗಳನ್ನು ಎತ್ತಿ ಬಿಸುಡುತ್ತಿದ್ದನು. ಕ್ಷಣಹೊತ್ತು ನಿಂತಲ್ಲಿ ನಿಲ್ಲದೇ ಕೂತಲ್ಲಿ ಕೂಡದೇ ಕಾರಾಗೃಹದಲ್ಲಿ ನಾಲ್ಕೂ ಕಡೆಯೂ ರಭಸದಿಂದ ತಿರು ಗಾಡುತ್ತಿದ್ದನು. ಆ ರಭಸದಲ್ಲಿ ಗೋಡೆಗೆ ತಲೆ ತಗುಲಿ ಕೆಳಗೆ ಬೀಳು ತ್ತಿದ್ದನು. ಅರಣ್ಯದಲ್ಲಿ ಸ್ವೇಚ್ಛೆಯಾಗಿರುವ ಹೆಬ್ಬುಲಿಯನ್ನು ಹಿಡಿತಂದು ಪಂಜರದಲ್ಲಿಟ್ಟರೆ, ಆ ವ್ಯಾಘ್ರರಾಜನು ಯಾವ ರೂಪವನ್ನು ತಾಳುವನೋ, ಮದಗಜವನ್ನು ಸರಪಣಿಗಳಿಂದ ಕಟ್ಟಿಹಾಕಿದರೆ ಹೇಗೆ ಆರ್ಭಟಿಸುವುದೋ ಅದರಂತೆ ತಿಮ್ಮಣ್ಣ ದಂಡನಾಯಕನ ಸ್ಥಿತಿಯಾಗಿತ್ತು ದರಬಾರಿನ ದೊಡ್ಡ ದೊಡ್ಡ ಅಧಿಕಾರಿಗಳು ಗೋಪ್ಯನಾಗಿ ಬಂದು ದೂರದಿಂದ ತಿಮ್ಮಣ್ಣನನ್ನು ನೋಡಿ ಪರಿತಾಪಪಟ್ಟುಕೊಂಡು ಹೋಗುತ್ತಿದ್ದರು

ಅಚ್ಯುತರಾಯನು ಯಾರ ಕಣ್ಣಿಗೂ ಬೀಳದಂತೆ ರಹಸ್ಯವಾಗಿ ಬಂದು ನೋಡಿಕೊಂಡು ಹೋಗುತ್ತಿದ್ದನು ಈ ತಿಮ್ಮಣ್ಣನು ಯುದ್ಧದಲ್ಲಿ ಮಡಿದಿದ್ದರೆ ಚೆನ್ನಾಗಿತ್ತು ಮಹಾರಾಜರು ಇವನನ್ನು ಶೂಲಕ್ಕೇರಿಸಿದ್ದರೆ ತಂಟೆ ಹರಿದುಹೋಗುತ್ತಿತ್ತು. ಎಲ್ಲರೂ ಮರೆತುಬಿಡುತ್ತಿದ್ದರು ಎಂದು ಅನೇಕಬಾರಿ ಯೋಚಿಸುತ್ತಿದ್ದನು.

ಕನ್ನಾಂಬಿಕೆಯು ತಿಮ್ಮಣ್ಣನಾಯಕನ ಸ್ಥಿತಿಯನ್ನೆಲ್ಲಾ ಕೇಳಿದಳು. ಅವಳು ಪ್ರತ್ಯಕ್ಷವಾಗಿಹೋಗಿ ಅವನನ್ನು ನೋಡುವುದು ಅಸಾಧ್ಯವಾಗಿರಲಿಲ್ಲ. ಆದರೆ ಅಂತಹ ಸ್ಥಿತಿಯಲ್ಲಿ ಅವನನ್ನು ನೋಡುವುದು ಮಾತನಾಡಿಸುವುದು ಅತ್ಯಂತ ದುಃಖಕರವೆಂದು ಅವಳು ಭಾವಿಸಿ ಅತ್ತಕಡೆಗೆ ಸುಳಿಯದೇ ಇದ್ದಳು.

ಈ ಪರಿಸ್ಥಿತಿಯು ಬಹು ದಿನಗಳತನಕ ಮುಂದುವರೆಯಲಿಲ್ಲ. ಅನ್ನಾಹಾರಗಳನ್ನು ತೊಡೆದು ಸರ್ವದಾ ಉದ್ವಿಗ್ನಮನಸ್ಕನಾಗಿ ಹುಚ್ಚನಂತಾಗಿದ್ದ ತಿಮ್ಮಣ್ಣನು ಮೂರು ದಿನಗಳೊಳಗೆ ನಿಸ್ಸತ್ವನಾಗಿ ಭೂಮಿಯ ಮೇಲೆ ಬಿದ್ದುಬಿಟ್ಟನು ಹಾಗೆಯೇ ಪ್ರಲಪಿಸುತ್ತಾ ನಾಲ್ಕಾರು ದಿನಗಳು ನೆಲದಮೇಲೆ ಬಿದ್ದು ಹೊರಳುತ್ತಿದ್ದನು. ಹತ್ತನೆಯ ದಿನ ರಾತ್ರಿಯ ಸಮಯದಲ್ಲಿ ಅವನ ಪ್ರಾಣಗಳು ಹಾರಿಹೋದವು.

ತಿಮ್ಮಣ್ಣ ದಂಡನಾಯಕನ ಮರಣ ವೃತ್ತಾಂತವು ರಾಜಧಾನಿಯಲ್ಲೆಲ್ಲಾ ವ್ಯಾಪಿಸಿತು ಬಹುಮಂದಿ ಕಣ್ಣೀರಿಟ್ಟರು. ಕೃಷ್ಣದೇವರಾಯನಿಗೆ ಸಮಾಚಾರಗಳು ತಿಳಿದು ತಿಮ್ಮಣ್ಣ ದಂಡನಾಯಕನಿಗೆ ರಾಜ ಮರ್ಯಾದೆಗಳೊಂದಿಗೆ ಸಂಸ್ಕಾರಗಳನ್ನು ಮಾಡಿಸಬೇಕೆಂದು ಅಪ್ಪಣೆ ಮಾಡಿದನು. ಕನ್ನಾಂಬಿಕೆಯು ಶ್ಮಶಾನದಲ್ಲಿ ಚಿತೆಯ ಮುಂದೆ ನೂರಾರು ಜನಗಳು ನೆರೆದಿದ್ದಾಗ ತಿಮ್ಮಣ್ಣನಾಯಕನಿಗೆ ಪುಷ್ಪಮಾಲಿಕೆಗಳನ್ನು ಸಮರ್ಪಿಸಿದಳು. ರಾಜಭಟರು ತಿಮ್ಮಣ್ಣ ದಂಡನಾಯಕನ ಶರೀರವನ್ನು ಚಿತೆಯಮೇಲಿಟ್ಟರು. ಪುರೋಹಿತರು ಮಂತ್ರಗಳನ್ನು ಹೇಳಿ ಅಗ್ನಿಸಂಸ್ಕಾರವನ್ನು ನೆರವೇರಿಸಿದರು. ಅರಮನೆಯ ಮುತ್ಸದ್ದಿಗಳು ಬ್ರಾಹ್ಮಣರಿಗೂ ಬಡಬಗ್ಗರಿಗೂ ಭೂರಿದಕ್ಷಿಣೆಗಳನ್ನಿತ್ತು ಕಳಿಸಿದರು. ಕನ್ನಾಂಬಿಕೆಯು ಶಿಲಾ ಪ್ರತಿಮೆಯಂತೆ ನಿಂತು ಚಿತೆಯು ಪೂರ್ಣವಾಗಿ ಉರಿದು ಶಾಂತವಾಗುವವರೆಗೆ ನೋಡುತ್ತ ನಿಂತಿದ್ದಳು. ರಾತ್ರಿಯಾದಮೇಲೆ ಆ ಅಂಧಕಾರದಲ್ಲಿ ಯಾರೋ ಬಂದು ಕನ್ನಾಂಬಿಕೆಯನ್ನು ಸಂತೈಸಿ ಕರೆದುಕೊಂಡುಹೋದರು. ಸಾಲ್ವ ತಿಮ್ಮರಸನಿಗೆ ಈ ಸಮಾಚಾರಗಳೆಲ್ಲವೂ ಆದ್ಯೋಪಾಂತವಾಗಿ ವರದಿ ಮಾಡಲ್ಪಟ್ಟವು.

ಅವನು ಅದಕ್ಕಾಗಿ ಕಣ್ಣೀರಿಟ್ಟು ಅಳಲಿಲ್ಲ. ರಾಷ್ಟ್ರದ ಪಾಪವು ರಾಜರನ್ನು ಕಬಳಿಸುತ್ತದೆ ಎಂದು ಹೇಳಿ ಸಮಾಧಾನಮಾಡಿಕೊಂಡನು.

ವಿಜಯನಗರದ ದುರ್ಘಟನೆಗಳೆಲ್ಲವೂ ಬಿಜಾಪುರದಲ್ಲಿ ಹರಡಿತು. ಜನರೆಲ್ಲರೂ ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು ಗುಪ್ತ ಚಾರರು ಸುಲ್ತಾನರ ಭೇಟಿ ಮಾಡಿ ವಿಜಯನಗರದ ಪರಿಸ್ಥಿತಿಯನ್ನೆಲ್ಲಾ ವರ್ಣಿಸಿ ಹೇಳಿದರು. ಇಸ್ಮಾಯಿಲ್‌ಷಹನು ಕೃಷ್ಣದೇವರಾಯನಿಗೆ ಬಲ ಗೈಯಂತಿದ್ದ ಮಂತ್ರಿ ಸಾಳ್ವ ತಿಮ್ಮರಸನಿಗೆ ಇಂತಹ ಘೋರ ಸಂಕಟವು ಪ್ರಾಪ್ತವಾಗಿದೆ ದರಬಾರಿನಲ್ಲಿ ಅಧಿಕಾರಿಗಳೆಲ್ಲರೂ ವಿಮುಖರಾಗಿದ್ದಾರೆ. ವಿಜಯನಗರದ ರಾಜ್ಯದಲ್ಲಿ ಪ್ರಜಾಕ್ಷೋಭೆಯುಂಟಾಗಿದೆ ವಿಜಯನಗರದ ಮಹಾರಾಜನು ನಮ್ಮ ಮಿತ್ರನಾಗಿದ್ದಿದ್ದರೆ, ಇಂತಹ ದುಃಖ ಪರಂಪರೆಗಳು ಅವನಿಗೆ ಪ್ರಾಪ್ತವಾದುದಕ್ಕಾಗಿ ಪರಿತಾಪ ಪಡಬೇಕು ಅವನು ನಮ್ಮ ಶತ್ರುವಾಗಿರುವಾಗ ಇದಕ್ಕೆಲ್ಲವೂ ಸಂತೋಷಪಡಬೇಕಾಗಿದೆ. ಇದೇ ಸಮಯವನ್ನು ಸಾಧಿಸಿ ಶತ್ರುವಿಗೆ ಅಪಕಾರವನ್ನೂ ನಷ್ಟವನ್ನೂ ಉಂಟುಮಾಡಬೇಕು. ಈ ಸಮಯವನ್ನು ಬಿಟ್ಟರೆ, ಇಂತಹ ಸಂಧಿಯು ಬೇರೊಂದು ಸಿಕ್ಕಲಾರದು ಎಂದು ಸ್ಥಿರಪಡಿಸಿಕೊಂಡು ಬಿಜಾಪುರದಲ್ಲಿದ್ದ ಸೈನ್ಯವೆಲ್ಲವನ್ನು ಜೊತೆಗೊಳಿಸಿಕೊಂಡು ರಾಯಚೂರು ದುರ್ಗಕ್ಕೆಹೋಗಿ ಮುತ್ತಿಗೆ ಹಾಕಿದನು.

ಈ ಸಮಾಚಾರವು ಕೃಷ್ಣದೇವರಾಯನಿಗೆ ಬಹು ಜಾಗ್ರತೆಯಾಗಿ ತಿಳಿಯಿತು. ಅವನು ಹಿಂದೆ ಮುಂದೆ ನೋಡಲಿಲ್ಲ ದೇವರು ನನ್ನನ್ನು ಪರೀಕ್ಷೆ ಮಾಡುತ್ತಿದ್ದಾನೆ. ಕಷ್ಟಬಂದ ಕಾಲದಲ್ಲಿ ಶತ್ರುಗಳು ತಲೆಯೆತ್ತುವುದು ಸಹಜವೇ ಆಗಿದೆ ದೇವರ ಪರೀಕ್ಷೆಯೇಕೆ? ನನ್ನನ್ನು ನಾನೇ ಪರೀಕ್ಷೆ ಮಾಡಿಕೊಳ್ಳುವ ಕಾಲವು ಸನ್ನಿಹಿತವಾಗಿದೆ. ಈಗ ನಾನು ಸುಮ್ಮನೆ ಕುಳಿತರೆ, ಕುರಿಯ ಮರಿಗಳೂ ಕೂಡ ಹುಲಿಗಳಂತೆ ನನ್ನಮುಂದೆ ಬಂದು ಆರ್ಭಟಿಸುವುವು ಎಂದು ಹೇಳಿ ಯಾರೊಡನೆಯೂ ಮಾತನಾಡದೇ ಕುದುರೆಯಮೇಲೇರಿ ವಿಜಯನಗರವನ್ನು ಬಿಟ್ಟು ಏಕಾಕಿಯಾಗಿ ಹೊರಟು ಬಿಟ್ಟನು. ರಾಜಧಾನಿಯಲ್ಲೆಲ್ಲಾ ಗದ್ದಲವೆದ್ದಿತು. ಸೇನಾಧಿಪತಿಗಳು

ತಮ್ಮ ತಮ್ಮ ಸೈನ್ಯಗಳನ್ನು ಎಚ್ಚರಗೊಳಿಸಿ ವೇಗವಾಗಿ ಆ ಸೈನ್ಯಗಳನ್ನು ರಾಯಚೂರಿನ ಕಡೆಗೆ ಸಾಗಿಸಿಕೊಂಡುಹೋದರು ಮಾರ್ಗ ಮಧ್ಯದಲ್ಲಿ ಕೃಷ್ಣದೇವರಾಯನು ತನ್ನ ಸೇನಾಧಿಪತಿಗಳ ಭಕ್ತಿಯನ್ನು ಮೆಚ್ಚಿಕೊಂಡನು. ವಿಜಯನಗರದ ಸೈನ್ಯಗಳು ಇಸ್ಮಾಯಿಲ್‌ಷಹನ ಸೈನ್ಯದಮೇಲೆ ಬಿದ್ದು ಪರಾಕ್ರಮದಿಂದ ಹೋರಾಡಿದವು. ಬಿಜಾಪುರದ ಸೈನ್ಯಗಳಲ್ಲಿ ಬಹುಮಂದಿ ಸತ್ತುಬಿದ್ದರು. ಇಸ್ಮಾಯಿಲ್‌ಷಹನು ಆ ಪರಾಜಯವನ್ನು ನಿರೀಕ್ಷಿಸಿರಲಿಲ್ಲ. ಆ ರಣಕ್ಷೇತ್ರಕ್ಕೆ ಕೃಷ್ಣದೇವರಾಯನು ಬರುವನೆಂಬ ನಿರೀಕ್ಷೆಯಂತೂ ಅವನಿಗೆ ಇರಲೇಇಲ್ಲ ಇಸ್ಮಾಯಿಲ್‌ಷಹನು ಅತ್ಯಂತ ಖೇದದಿಂದ ರಾಯಚೂರಿನ ಮುತ್ತಿಗೆಯನ್ನು ತೆಗೆದು ಬಿಜಾಪುರದ ಕಡೆಗೆ ಪಲಾಯನಮಾಡಲು ಹೊರಟನು ಇಸ್ಮಾಯಿಲ್‌ಷಹನು ರಾಯಚೂರಿನ ಪರಿಸರವನ್ನು ಬಿಟ್ಟು ಹೋಗುತ್ತಿರುವಾಗ ಕೃಷ್ಣದೇವರಾಯನು ತನ್ನ ಕುದುರೆಯನ್ನು ಛಡಾಯಿಸಿ ಅವನಮುಂದೆ ನಿಲ್ಲಿಸಿ, “ಇಸ್ಮಾಯಿಲ್ ! ನೀನು ಎರಡುಬಾರಿ ಸೋತು ಓಡಿಹೋಗಿದ್ದೀಯೆ ಈ ರಣಕ್ಷೇತ್ರದಲ್ಲಿ ಸಹಸ್ರ ಸಹಸ್ರ ಸೈನಿಕರನ್ನು ಬಲಿ ಕೊಟ್ಟಿರುವೆ. ಈಗ ಮೂರನೆಯಸಾರಿ ನೀನು ಸೋತು ಓಡಿಹೋಗುತ್ತಿರುವೆ ನಿನ್ನನ್ನು ಸೆರೆಹಿಡಿದು ವಿಜಯನಗರಕ್ಕೆ ತೆಗೆದುಕೊಂಡುಹೋಗುತ್ತಿದ್ದೆ. ಬೇಟೆಗೆ ಬಂದವನು ಬೆಕ್ಕನ್ನು ಹಿಡಿದುಕೊಂಡುಹೋದಂತೆ ಆಗುವುದೆಂದು ಬಿಟ್ಟುಬಿಡುತ್ತೇನೆ ನಿನ್ನನ್ನು ಕತ್ತರಿಸಿ ಹಾಕುತ್ತಿದ್ದೆ. ಸತ್ತವನನ್ನು ಕತ್ತರಿಸುವುದು ಪೌರುಷದ ಲಕ್ಷಣವಲ್ಲ. ನೀನು ಜೀವಂತನಾಗಿದ್ದೇ ಈ ಅಪಮಾನವನ್ನು ಅನುಭವಿಸುತ್ತಾ ಸಾಯಲು ಬಿಟ್ಟುಬಿಟ್ಟದ್ದೇನೆ ಹೋಗು ಇನ್ನು ವಿಜಯನಗರದ ಕಡೆಗೆ ತಿರುಗಿ ನೋಡಬೇಡ” ಎಂದು ಹೇಳಿ ಕತ್ತಿಯನ್ನೆತ್ತಿ ಅವನಿಗೆ ದಾರಿ ತೋರಿಸಿದನು.

ಇಸ್ಮಾಯಿಲ್‌ಷಹನು ಬಾಲ ಮುದುರಿಕೊಂಡುಹೋಗುವ ಪ್ರಾಣಿಯಂತೆ ತಲೆತಗ್ಗಿಸಿಕೊಂಡು ಪಲಾಯನ ಮಾಡಿದನು. ಅವನು ಅತಿ ಪ್ರಯಾಸದಿಂದಹೋಗಿ ಬಿಜಾಪುರದ ಅರಮನೆಯನ್ನು ಸೇರಿಕೊಂಡನು. ಅವನು ಪುನಃ ಅರಮನೆಯ ಹೆಬ್ಬಾಗಿಲಿನಿಂದ ಹೊರಗೆ ಬರಲೇಇಲ್ಲ.

ಕೃಷ್ಣದೇವರಾಯನು ತನ್ನ ಸೈನಿಕರಿಗೆಲ್ಲಾ ಯಥೇಷ್ಟವಾದ ಇನಾಮುಗಳನ್ನು ಕೊಟ್ಟು ಸೇನಾಧಿಪತಿಗಳನ್ನು ಪ್ರಶಂಸೆಮಾಡಿ ಆ ಸೇನಾಸಮೇತನಾಗಿ ವಿಜಯನಗರಕ್ಕೆ ಹಿಂತಿರುಗಿದನು. ಕೃಷ್ಣದೇವರಾಯನು ವಿಜಯನಗರಕ್ಕೆ ಹಿಂತಿರುಗಿದಮೇಲೆಯೂ ಇಸ್ಮಾಯಿಲ್‌ಷಹನ ಕೃತ್ಯಗಳನ್ನು ಮರೆಯಲಿಲ್ಲ ಮತ್ತೆ ಸೈನ್ಯವನ್ನು ಕಟ್ಟಿ ಪೂರ್ತಿಯಾಗಿ ಬಿಜಾಪುರದ ಸುಲ್ತಾನೀ ಪ್ರಭುತ್ವವನ್ನು ನಿರ್ಮೂಲಮಾಡಿಬಿಡಬೇಕೆಂದು ಸಂಕಲ್ಪಿಸಿದನು ಗೋವೆಯಲ್ಲಿದ್ದ ಪೋರ್ಚುಗೀಸ್ ಅಧಿಕಾರಿಗಳಲ್ಲಿಗೆ ತನ್ನ ರಾಯಭಾರಿಗಳನ್ನು ಕಳುಹಿಸಿಕೊಟ್ಟನು. ಬೆಳಗಾಂ ಪೂರ್ವದಲ್ಲಿ ವಿಜಯನಗರಕ್ಕೆ ಸೇರಿತ್ತು ಯೂಸುಫ್‌ಖಾನನ ಕಾಲದಲ್ಲಿ ಬಿಜಾಪುರದವರು ಅದನ್ನು ಸ್ವಾಧೀನಪಡಿಸಿಕೊಂಡರು ಈಗ ಅಲ್ಲಿ ಬಿಜಾಪುರದ ಸುಲ್ತಾನನ ಮಂತ್ರಿಯಾದ ಅಸದಖಾನನು ಸ್ವತಂತ್ರನಾಗಿ ಇದ್ದಾನೆ ನಾವು ಅವನಮೇಲೆ ಯುದ್ಧಕ್ಕೆ ಸೈನ್ಯವನ್ನು ಕಳಿಸುತ್ತೇವೆ ನೀವೂ ಸಹಾಯ ಮಾಡಬೇಕು. ನಿಮ್ಮ ಸಹಾಯಕ್ಕಾಗಿ ಯುದ್ಧಾನಂತರ ಬೆಳಗಾವಿಯ ತೀರಪ್ರದೇಶಗಳನ್ನು ನಿಮಗೆ ಬಿಟ್ಟುಕೊಡುತ್ತೇನೆ ಎಂದು ಹೇಳಿಕಳಿಸಿದನು ಇಡೀ ಬಿಜಾಪುರದ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಸೈನ್ಯ ಸಿದ್ಧತೆಗಳನ್ನು ಮಾಡುವಂತೆ ಸೇನಾಧಿಪತಿಗಳಿಗೆ ಅಪ್ಪಣೆಯಿತ್ತನು

ಕೃಷ್ಣದೇವರಾಯನು ಬಿಜಾಪುರದ ಸುಲ್ತಾನನಮೇಲೆ ಮತ್ತೊಮ್ಮೆ ವಿಜಯಗಳಿಸಿಕೊಂಡು ಬಂದಿದ್ದರೆ ಅವನ ಮನಸ್ಸು ಸಂತೋಷದಿಂದಿರಲಿಲ್ಲ ಸೇನಾಧಿಪತಿಗಳೆಲ್ಲರೂ ಉತ್ಸಾಹದಿಂದ ಅವನೊಗನೆ ಯುದ್ಧಕ್ಕೆ ಹೊರಟಿದ್ದರೂ ಅವರುಗಳಿಗೆಲ್ಲಾ ಮೊದಲಿದ್ದಂತೆ ತನ್ನಲ್ಲಿ ಭಕ್ತಿ ವಿಶ್ವಾಸಗಳಿಲ್ಲವೆಂದು ಅವನಿಗೆ ತೋರುತ್ತಿತ್ತು ಸಾಳ್ವ ತಿಮ್ಮರಸನು ಕಾರಾಗೃಹದಲ್ಲಿ ಕೊಳೆಯುತ್ತಿರುವುದು ಅವನ ಮನಸ್ಸಿಗೆ ಎಷ್ಟೋಬಾರಿ ಖೇದವನ್ನುಂಟುಮಾಡುತ್ತಿತ್ತು. ಅವನು ತನ್ನ ಸೋದರನಾದ ಅಚ್ಯುತರಾಯನೊಡನೆ ಆಲೋಚನೆ ಮಾಡಿದನು. ಒಂದುಪಕ್ಷ ತಿಮ್ಮರಸನ ಅಪರಾಧವಿದ್ದರೂ ಅವನು ಅನುಭವಿಸಿರುವ ಶಿಕ್ಷೆಯು ಮಹತ್ತರವಾದದ್ದೆಂದು ಅವರನ್ನು

ಕಾರಾಗೃಹದಲ್ಲಿಟ್ಟಿರುವುದು ಧರ್ಮವಲ್ಲವೆಂದೂ ಕೃಷ್ಣದೇವರಾಯನು ಹೇಳಿದನು.

ಅಚ್ಯುತರಾಯನು ನಿಜವಾದ ಪಾತಕವನ್ನು ಮಾಡಿದವನು ತಿಮ್ಮಣ್ಣ ತಿಮ್ಮರಸನು ನಮಗೆ ವಿರೋಧಿಯಾದರೂ ಬಾಲಕನನ್ನು ಕೊಲ್ಲುವಂತಹ ದುಷ್ಕಾರ್ಯಕ್ಕೆ ಅವನು ಪ್ರೇರೇಪಣೆ ಮಾಡುವಂಥವನಲ್ಲ ನಮ್ಮ ರಾಜ್ಯಕ್ಕೆ ಅವನೆಷ್ಟೋ ಸೇವೆ ಮಾಡಿದ್ದಾನೆ. ಅವನಿಗೆ ಕ್ಷಮಾಪಣೆ ಕೊಡಬಹುದು. ಅಸಮಾಧಾನವನ್ನು ತಳೆದಿರುವ ದರಬಾರಿಗಳು ಕೂಡಾ ತಿಮ್ಮರಸನಿಗೆ ಕ್ಷಮೆ ಕೊಟ್ಟರೆ ಸಂತುಷ್ಟರಾಗುತ್ತಾರೆ ಎಂದು ಹೇಳಿದನು.

ಕೃಷ್ಣದೇವರಾಯನು ಅರಮನೆಯ ಮುತ್ಸದ್ದಿಗಳನ್ನು ಕಳುಹಿಸಿ ತಿಮ್ಮರಸನನ್ನೂ ಅವನ ಮಗನನ್ನೂ ಅರಮನೆಗೆ ಕರೆತರುವಂತೆ ಅಪ್ಪಣೆ ಮಾಡಿದನು. ಅಧಿಕಾರಿಗಳು ಸಂತೋಷದಿಂದಹೋಗಿ ತಿಮ್ಮರಸನನ್ನು ಮ್ಯಾನಾದಲ್ಲಿ ಕೂಡಿಸಿಕೊಂಡು ಮರ್ಯಾದೆಯಿಂದ ಅರಮನೆಗೆ ಕರೆತಂದು ರಾಜನ ಸಮ್ಮುಖದಲ್ಲಿ ತಂದುಬಿಟ್ಟರು ಕೃಷ್ಣದೇವರಾಯನು ಸಾಳ್ವ ತಿಮ್ಮರಸನ ಕೈಗಳನ್ನು ಹಿಡಿದು ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ಸಂತೈಸಿದನು. ತಿಮ್ಮರಸ! ನಿನ್ನ ಅಪರಾಧವು ಏನಿದೆಯೆಂಬುದು ಯಾರಿಗೂ ತಿಳಿಯದು ಆದರೆ ನನಗೂ ನಿನಗೂ ಒಂದೇ ವಿಧವಾದ ಶಿಕ್ಷೆಯನ್ನು ದೇವರು ಕೊಟ್ಟಿದ್ದಾನೆ ನಮ್ಮಿಬ್ಬರಿಗೂ ಆಮರಣಾಂತ ಪುತ್ರಶೋಕವು ತಪ್ಪದು. ಅದಕ್ಕಾಗಿ ಯಾವ ಪರಿಹಾರವನ್ನು ಕಲ್ಪಿಸಲೂ ಸಾಧ್ಯವಿಲ್ಲ. ನಾನು ಪುತ್ರಶೋಕ ಸಂತೃಪ್ತನಾಗಿ ನಿನ್ನನ್ನು ನಾನಾ ವಿಧವಾಗಿ ಅಪಮಾನಗೊಳಿಸಿದ್ದೇನೆ. ಕಷ್ಟಗಳಿಗೆ ಗುರಿಪಡಿಸಿದ್ದೇನೆ. ಎಲ್ಲವನ್ನು ಮರೆತುಬಿಡು ನೀನು ವಯಸ್ಸಿನಲ್ಲಿಯೂ ನನಗಿಂತ ಹಿರಿಯನಾಗಿದ್ದಿ, ನನ್ನನ್ನು ಆಶೀರ್ವದಿಸು ಎಂದು ಬೇಡಿಕೊಂಡನು.

ಸಾಳ್ವ ತಿಮ್ಮರಸನು ಪ್ರಭೂ ಆಗ್ರಹಕ್ಕಾಗಲೀ ಅನುಗ್ರಹಕ್ಕಾಗಲೀ ನಿಮಗೆ ಅಧಿಕಾರವುಂಟು. ನಾವು ಕ್ಷತ್ರಿಯರು. ಎಂಥಾ ಕಷ್ಟಗಳನ್ನಾದರೂ ಸಂತೋಷದಿಂದ ಅನುಭವಿಸಬೇಕು. ರಾಜಕೀಯದ ಸಂದುಕಟ್ಟುಗಳಿಂದ

ಎಂಥವರಿಗಾದರೂ ಇಂಥಾ ಕಷ್ಟಗಳು ಸಂಭವಿಸದೇ ಇರವು. ನಾನು ಎಂದೂ ನಿನ್ನನ್ನು ತಪ್ಪಿತಸ್ಥನೆಂದು ಎಣಿಸಿಲ್ಲ ಕಾರಾಗೃಹದಲ್ಲಿರುವುದು ನನಗೇನೂ ಕಷ್ಟವೆನಿಸಿಲ್ಲ ನೀವು ರಾಜವೈಭವದಲ್ಲಿದ್ದರೂ ಸುಖಿಗಳಾಗಿಲ್ಲ. ನಿಮ್ಮಂಥಾ ಪ್ರಭುಗಳನ್ನು ನಾನು ಕ್ಷಮಿಸುವುದೆಂದರೇನು? ಇದೆಲ್ಲವೂ ನಮ್ಮ ಕರ್ಮಫಲವೆಂದು ಭಾವಿಸಬೇಕು. ನಿಮಗೆ ಯಾವಾಗಲೂ ನಾನು ಶುಭ ಕೋರುತ್ತೇನೆ ಎಂದನು

ಕೃಷ್ಣದೇವರಾಯನು ತಿಮ್ಮರಸನಿಗೆ ಉಪಚಾರೋಕ್ತಿಗಳನ್ನು ಹೇಳಿ ಅವನನ್ನು ಮರ್ಯಾದೆಯಿಂದ ಮನೆಗೆ ಕಳುಹಿಸಿದನು. ಅವನ ಮಗನಾದ ಗೋವಿಂದರಾಜನನ್ನು ಬಿಡುಗಡೆ ಮಾಡಿಸಿ, ತಿಮ್ಮರಸನ ಮನೆಗೆ ಕಳುಹಿಸಿ ಕೊಟ್ಟನು. ತಿಮ್ಮರಸನು ಬಹುಕಾಲ ಬದುಕಿರಲಿಲ್ಲ. ಪುತ್ರಶೋಕದಿಂದ ಹಗಲಿರುಳೂ ಪರಿತಪಿಸಿ ಮೃತಿಯನ್ನೈದಿದನು.

ಕೃಷ್ಣದೇವರಾಯನು ಇಸ್ಮಾಯಿಲ್‌ಷಹನ ಮೇಲೆ ಯುದ್ಧಕ್ಕೆ ಹೊರಡಬೇಕೆಂದು ಅನೇಕಬಾರಿ ಸಿದ್ಧತೆಗಳನ್ನು ಮಾಡಿದನು. ಅವನು ಪದೇ ಪದೇ ವ್ಯಾಧಿಗ್ರಸ್ತನಾಗಿ ಶಯ್ಯೆಯನ್ನು ಹಿಡಿದನು. ವೈದ್ಯರುಗಳು ವಿಶೇಷ ಪ್ರಯತ್ನದಿಂದ ಚಿಕಿತ್ಸೆಗಳನ್ನು ಮಾಡುತ್ತಿದ್ದರು ಕೃಷ್ಣದೇವರಾಯನು ತನಗೆ ಪ್ರಾಪ್ತವಾಗಿರುವ ವ್ಯಾಧಿಯು ಕರ್ಮಪರಿಪಾಕದ್ದೆಂದೂ ಅದು ನಿವಾರಣೆಯಾಗತಕ್ಕದ್ದಲ್ಲವೆಂದೂ ಹೇಳುತ್ತಿದ್ದನು. ಪ್ರತಿದಿನವೂ ಅನೇಕ ದಾನಧರ್ಮಗಳನ್ನು ಮಾಡುತ್ತಿದ್ದನು. ಅವನ ರಾಣಿಯರು ಸರ್ವದಾ ಅವನನ್ನು ಉಪಚರಿಸುತ್ತಾ ದೇವತಾರಾಧನೆಗಳನ್ನು ಮಾಡುತ್ತಾ ಸೌಮಂಗಲ್ಯವನ್ನು ಪ್ರಾರ್ಥನೆ ಮಾಡಿ ಮುತ್ತೈದೆಯರಿಗೆ ಮಂಗಳದ್ರವ್ಯಗಳನ್ನೂ ದಕ್ಷಿಣೆಗಳನ್ನೂ ಪ್ರತಿದಿನವೂ ಮಾಡುತ್ತಿದ್ದರು ಕೃಷ್ಣದೇವರಾಯನು ಆಪ್ತರಾದ ಅಧಿಕಾರಿಗಳನ್ನು ಕರೆಸಿ ನಮ್ಮ ಅರಮನೆಯಲ್ಲಿಯೇ ಪಾಲಿತಳಾದ ಕನ್ನಾಂಬಿಕೆಯು ಪ್ರಚ್ಛನ್ನವಾಗಿ ವಾಸಮಾಡುತ್ತಿದ್ದಾಳೆ. ನಾನೊಂದು ಬಾರಿ ಅವಳ ದರ್ಶನ ಮಾಡಬೇಕೆಂದು ಅಪೇಕ್ಷೆಯುಳ್ಳವನಾಗಿದ್ದೇನೆ. ನನ್ನ ಕೋರಿಕೆಯನ್ನು ತಿಳಿಸಿ ಅವಳನ್ನು ಕರೆತನ್ನಿರಿ ಎಂದು ಹೇಳಿದನು. ಅ

ಅಧಿಕಾರಿಗಳು ಮಹಾರಾಜರು ಹೇಳಿಗ ಗುರುತು ಹಿಡಿದು ಆ ಕನ್ನಾಂಬಿಕೆ ಯನ್ನು ಭೇಟಿ ಮಾಡಿದರು. ಮಹಾರಾಜರು ವ್ಯಾಧಿಗ್ರಸ್ತರಾಗಿ ನರಳು ತ್ತಿದ್ದಾರೆ. ಅವರು ನಿನ್ನನ್ನು ಕಾಣಬೇಕೆಂದು ಹಂಬಲಿಸುತ್ತಾರೆ. ಅವರು ಹೆಚ್ಚು ಕಾಲ ಬದುಕಲಾರರೆಂದು ತೋರುತ್ತದೆ. ನೀನು ಅವರನ್ನು ಕಂಡು ಸಮಾಧಾನಗೊಳಿಸಿದರೆ ಅವರಿಗೆ ತಾತ್ಕಾಲಿಕ ಮನಶ್ಶಾಂತಿಯು ದೊರೆಯ ಬಹುದು. ಅರಮನೆಯಲ್ಲಿರುವ ರಾಣಿಯರೆಲ್ಲರೂ ನಿನ್ನನ್ನು ನೋಡುವ ಅಪೇಕ್ಷೆಯುಳ್ಳವರಾಗಿದ್ದಾರೆ ಎಂದು ತಿಳಿಸಿದರು.

ಕನ್ನಾಂಬಿಕೆಯು ಅವರೊಡನೆ ಅರಮನೆಗೆಹೋಗಿ ಮಹಾರಾಜರ ಭೇಟಿ ಮಾಡಿದಳು ಕೃಷ್ಣದೇವರಾಯನು, "ಕನ್ನಾಂಬೆ! ನಿನ್ನ ದುಃಖವು ಅಪರಿಹಾರ್ಯವಾದುದು. ನಿನ್ನ ಪತಿಯಾದ ತಿಮ್ಮಣ್ಣನಾಯಕನು ಸತ್ತು ಹೋದಮೇಲೆ ನಮಗೂ ಅವನಿಗೂ ವಿರೋಧ ಉಳಿದಿಲ್ಲ ಅವನ ಪಾಪ ಗಳು ಅವನೊಡನೆ ಭಸ್ಮೀಭೂತವಾಗಿಹೋಗಿವೆ. ನೀನು ಸರ್ವದಾ ದುಃಖಿ ನಿಯಾಗಿ ಏಕೆ ಅಜ್ಞಾತವಾಸವನ್ನು ಅನುಭವಿಸುತ್ತಿದ್ದಿ. ಇನ್ನು ನಾನು ಹೆಚ್ಚುಕಾಲ ಬದುಕಿರುವೆನೆಂಬ ಆಶೆಯಿಲ್ಲ ಕಡೆಯವರೆಗೂ ನೀನು ನಮ್ಮೊಡನೆ ಇದ್ದರೆ ಸಮಾಧಾನವಾಗುತ್ತದೆ' ಎಂದು ಹೇಳಿದನು.

ಕನ್ನಾಂಬಿಕೆಯು, "ಮಹಾರಾಜರವರೇ ತಿಮ್ಮಣ್ಣನೂ ನಾನೂ ಸಮಾನ ಸುಖದುಃಖಿಗಳೆಂದು ಪುಣ್ಯ ಪಾಪಗಳು ನಮ್ಮಿಬ್ಬರಿಗೂ ಸಮಾನ ವೆಂದೂ ತಮಗೆ ಅರಿಕೆ ಮಾಡಿದ್ದೇನೆ. ತಿಮ್ಮಣ್ಣನ ಪಾಪವು ಅವನೊಡನೆ ಭಸ್ಮವಾಯಿತು. ನನ್ನ ಪಾಪಶೇಷವು ನನ್ನ ತಲೆಯಮೇಲೆ ಉಳಿದಿದೆ. ಈ ಅರಮನೆಯಲ್ಲಿ ನನಗೆಷ್ಟೋ ನೆನಪುಗಳು ಬಂದು ಉದ್ವೇಗವನ್ನೂ ದುಃಖ ವನ್ನೂ ಉಂಟುಮಾಡುತ್ತವೆ ತಾವು ರುಗ್ಣಶಯ್ಯೆಯಲ್ಲಿ ಇದ್ದೀರಿ. ಈಗಲೂ ನನ್ನ ನೆನಪು ಮಾಡಿಕೊಂಡಿದ್ದರಿಂದ ನಾನು ಕೃತಾರ್ಥಳೆಂದು ಭಾವಿಸು ತ್ತೇನೆ" ಎಂದು ನಮಸ್ಕರಿಸಿದಳು.

ಆ ಸಮಯಕ್ಕೆ ಅಂತಃಪುರ ಸ್ತ್ರೀಯರೆಲ್ಲರೂ ಅಲ್ಲಿಗೆ ಬಂದು ಅವಳನ್ನು ನೋಡಿದರು. ಹಲವರು ಕಣ್ಣೀರಿಟ್ಟರು. ಮತ್ತೆ ಕೆಲವರು ಸಂತೈಸಿದರು.

ಎಲ್ಲರೂ ಅವಳಿಗೆ ಸಹಾನುಭೂತಿಯನ್ನು ತೋರಿದರು. ಅವಳು ಎಷ್ಟೇ ಕೇಳಿಕೊಂಡರೂ ಅರಮನೆಯಿಂದ ಹೋಗಲು ಬಿಟ್ಟುಕೊಡಲಿಲ್ಲ. ಕನ್ನಾಂಬಿಕೆಯು ಅಲ್ಲಿಯೇ ಉಳಿದುಕೊಳ್ಳಬೇಕಾಯಿತು. ಅವಳು ಹಗಲಿರುಳೂ ಕೃಷ್ಣದೇವರಾಯನ ಸೇವೆಯಲ್ಲಿ ನಿರತಳಾಗಿದ್ದಳು.

ದಿನದಿನಕ್ಕೆ ಕೃಷ್ಣದೇವರಾಯನ ವ್ಯಾಧಿಯು ಉಲ್ಬಣಸ್ಥಿತಿಗೆ ಬಂದಿತು. ಅವನು ಮಂತ್ರಿಗಳನ್ನೂ ಸಾಮಂತರನ್ನೂ ಸೇನಾಧಿಪತಿಗಳನ್ನೂ ತನ್ನ ಬಳಿಗೆ ಕರೆಸಿಕೊಂಡು ನಾನು ಇನ್ನು ಹೆಚ್ಚುಕಾಲ ಬದುಕಲಾರೆ. ನನ್ನ ಕಾಲದಲ್ಲಿ ನಿಮ್ಮೆಲ್ಲರ ಸಹಾಯದಿಂದಲೂ ಹಿರಿಯರ ಅನುಗ್ರಹದಿಂದಲೂ ರಾಜ್ಯವನ್ನು ವಿಸ್ತರಿಸಿದ್ದೇನೆ. ದೇವಾಲಯಗಳಿಗೂ ಬ್ರಾಹ್ಮಣರಿಗೂ ಹೇರಳವಾದ ದಾನಧರ್ಮಗಳನ್ನು ಕೊಟ್ಟಿದ್ದೇನೆ. ವಿದ್ವಜ್ಜನರಿಗೂ ಪರಾಕ್ರಮಿಗಳೆಂದು ಹೆಸರಾಂತ ರಾಜಪುರುಷರಿಗೆ ಜಹಗೀರಿಗಳನ್ನು ಕೊಟ್ಟಿದ್ದೇನೆ. ನೀವೆಲ್ಲರೂ ಸೇರಿ ಈ ದಾನಧರ್ಮಗಳನ್ನು ಪಾಲಿಸಿಕೊಂಡು ಬರಬೇಕು. ಈ ರಾಜ್ಯವನ್ನು ಹೀಗೆಯೇ ಕಾಪಾಡಬೇಕು. ನಿಮ್ಮೆಲ್ಲರಿಗೂ ಅಭಿಮತವಿದ್ದರೆ ನನ್ನ ತಮ್ಮನಾದ ಅಚ್ಯುತರಾಯನಿಗೆ ಸಾಮ್ರಾಜ್ಯ ಪಟ್ಟವನ್ನು ಕಟ್ಟಬಹುದು. ನನ್ನ ಮರಣಾನಂತರ ಯಾವ ಅಂತಃಕಲಹಗಳಿಗೂ ಎಡೆಗೊಡದಂತೆ ನೀವುಗಳು ನೋಡಿಕೊಳ್ಳಬೇಕು ಎಂದು ಹೇಳಿ ವಾಗ್ದಾನಗಳನ್ನು ತೆಗೆದುಕೊಂಡನು. ದಿನೇ ದಿನೇ ಉದರ ವ್ಯಾಧಿಯು ಉತ್ಕಟಾವಸ್ಥೆಗೆ ಬಂದು ಕೃಷ್ಣದೇವರಾಯನು ಕಾಲವಶನಾದನು.

ವಿಜಯನಗರದ ರಾಜ್ಯವೆಲ್ಲವೂ ಕೃಷ್ಣದೇವರಾಯನ ಮರಣಕ್ಕಾಗಿ ಗೋಳಿಟ್ಟಿತು. ಶತ್ರುಗಳು ಕೂಡಾ ಆ ಮಹಾಪುರುಷನ ಮರಣಕ್ಕಾಗಿ ಅನುತಾಪವನ್ನು ವ್ಯಕ್ತಪಡಿಸಿದರು.

## ೧೦

ಅಚ್ಯುತರಾಯನ ರಾಜ್ಯಭಾರವು ಆರಂಭವಾಯಿತು. ಅವನ ಭಾವ ಮೈದುನರಾದ ಸಲಕ ಮನೆತನದ ಸಹೋದರರು ಅಚ್ಯುತರಾಯನಿಗೆ ಬೆಂಬಲವಾಗಿ ಬಂದು ಸೇರಿದರು. ಪೆದ್ದ ತಿರುಮಲರಾಯ, ಚಿನ್ನ ತಿರುಮಲರಾಯ ಎಂಬಿಬ್ಬರು ವರದಾಂಬಿಕೆಯ ಸಹೋದರರು. ಅವರು ಈ ಸಹೋದರಿಯ ಸಂಬಂಧದಿಂದ ಬಂದು ಸೇರಿದವರಲ್ಲ. ದೊಡ್ಡ ರಾಜಮನೆತನದವರು ಮತ್ತು ಪರಾಕ್ರಮಶಾಲಿಗಳು. ಪೆದ್ದ ತಿರುಮಲರಾಯನು ಕೃಷ್ಣದೇವರಾಯನ ಕಾಲದಲ್ಲಿಯೇ ವಿಜಯನಗರದ ಮಂಡಲೇಶ್ವರನಾಗಿ ತೆಲಗು ರಾಜ್ಯವನ್ನು ದಕ್ಷತೆಯಿಂದ ಆಳುತ್ತಿದ್ದನು. ಚಿನ್ನ ತಿರುಮಲನು ದಕ್ಷಿಣ ದೇಶದಲ್ಲಿ ಮಂಡಲೇಶ್ವರನಾಗಿ ಪ್ರಬಲಶಾಲಿಗಳಾದ ರಾಜರನ್ನೂ ಪಾಳೆಯಗಾರರನ್ನೂ ಹತೋಟಿಯಲ್ಲಿಟ್ಟುಕೊಂಡಿದ್ದನು. ಈ ಸಲಕ ಮನೆತನದ ಸಹೋದರರು ವಿಜಯನಗರ ಸಾಮ್ರಾಜ್ಯಕ್ಕೆ ಸೇವೆಯನ್ನುಮಾಡಿ ಖ್ಯಾತಿಪಡೆದವರಾಗಿದ್ದರು. ಅಚ್ಯುತರಾಯನು ದುರ್ಬಲ ಮನಸ್ಸಿನವ. ಹೆಚ್ಚು ಪರಾಕ್ರಮಶಾಲಿಯೂ ಅಲ್ಲ. ಇವನ ರಾಜ್ಯಭಾರವು ಬಾಲ್ಬಜವಾಗಿ ಹೋಗಿ ಅಪಯಶಸ್ಸು ಬರಬಹುದೆಂಬ ಶಂಕೆಯಿಂದಲೇ ಈ ಸಹೋದರರು ಬಂದು ಸೇರಿದರು.

ಅಚ್ಯುತರಾಯನು ಸಿಂಹಾಸನವನ್ನೇರುವಾಗಲೇ ಸಾಲ್ವ ಸೆಲ್ಲಪ್ಪನೆಂಬುವನು ಪ್ರಧಾನಾಮಾತ್ಯನಾಗಿದ್ದನು. ಇವನು ಸಾಲ್ವ ನರಸಿಂಹನ ವಂಶದಲ್ಲಿ ಹುಟ್ಟಿದವನೂ ಮಹಾ ಪರಾಕ್ರಮಶಾಲಿಯೂ ಆಗಿದ್ದುದರಿಂದ ದರಬಾರಿನಲ್ಲಿ ಎಲ್ಲರೂ ಅವನನ್ನು ವಿಶೇಷ ಗೌರವದಿಂದ ಕಾಣುತ್ತಿದ್ದರು.

ಸಲಕ ತಿರುಮಲನು ಮೊದಲು ರಾಜಭಂಡಾರದ ಮುಖ್ಯಾಧಿಕಾರಿಯಾಗಿ ನೇಮಿಸಲ್ಪಟ್ಟನು. ಆ ಕಾಲದಲ್ಲಿ ವಿಜಯನಗರದ ಭಂಡಾರವೆಂದರೆ ಕುಬೇರನ ಐಶ್ವರ್ಯವನ್ನು ಮೀರುವಂತಹದಾಗಿದ್ದಿತು. ಅಪಾರ ಐಶ್ವರ್ಯ ವನ್ನು ಶೇಖರಿಸಿಟ್ಟಿದ್ದನು. ಭಂಡಾರದಲ್ಲಿ ಅಮೂಲ್ಯ ವಜ್ರಗಳು ರತ್ನಗಳು ಮುಕ್ತಾಹಾರಗಳು ಹೇರಳವಾಗಿ ಶೇಖರಿಸಲ್ಪಟ್ಟಿದ್ದವು. ಧನದ ರಾಶಿ ಯಂತೂ ತಲೆಯೆತ್ತಿ ನೋಡುವಂತೆ ಪರ್ವತಾಕಾರವಾಗಿ ಬೆಳೆದುಹೋಗಿ ದ್ದಿತು. ಸಲಕ ತಿರುಮಲನು ಎಂದೂ ಅಷ್ಟು ಐಶ್ವರ್ಯವನ್ನು ಕಂಡಿರಲಿಲ್ಲ. ಅವನು ಆ ಭಂಡಾರದ ಅಧಿಕಾರಿಯಾದನು ಸಾರ್ವಭೌಮನ ಭಾವ ಮೈದುನ ಈ ಆತ್ಮೀಯತೆಯಿಂದ ಆ ಐಶ್ವರ್ಯವೆಲ್ಲವೂ ತನ್ನದೇ ಎಂದು ಭಾವಿಸತೊಡಗಿದನು. ಅಚ್ಯುತರಾಯನಿಗೆ, ಈ ಸಲಕ ತಿರುಮಲನ ಭಾವ ನೆಗಳು ಸಂಬೀಳದಿದ್ದರೂ ಆ ಸ್ಯಾಲಕನು ಹಣವನ್ನು ರಕ್ಷಣೆ ಮಾಡುತ್ತಾನೆ, ವೆಚ್ಚಮಾಡುವನಲ್ಲ. ಇದು ಕೋಶಾಧಿಕಾರಿಗೆ ಇರಬೇಕಾದ ಮುಖ್ಯಲಕ್ಷಣವೇ ಆಗಿದೆ ಎಂದು ಭಾವಿಸಿಕೊಂಡು ತೃಪ್ತನಾಗಿರುತ್ತಿದ್ದನು.

ಕೃಷ್ಣದೇವರಾಯನು ಪರಲೋಕವನ್ನೈದಿದನಂತರ ರಾಜ್ಯಭಾರವು ಅಷ್ಟೇನೂ ಸುಸೂತ್ರವಾಗಿರಲಿಲ್ಲ. ಇಲ್ಲೊಂದುಕಡೆ ಅಲ್ಲೊಂದುಕಡೆ ಸಾಮ್ರಾಜ್ಯದ ನಾನಾ ಭಾಗಗಳಲ್ಲಿ ಪರಾಕ್ರಮಶಾಲಿಗಳಾದ ರಾಜರುಗಳು ಸ್ವತಂತ್ರರಾಗಲು ಪ್ರಯತ್ನಪಡಲಾರಂಭಿಸಿದರು ಕಪ್ಪಕಾಣಿಕೆಗಳನ್ನು ಒಪ್ಪಿಸಲು ನಿರಾಕರಿಸುತ್ತ ಬಂದರು. ಪ್ರಧಾನಿ ಸೆಲ್ಲಪ್ಪನು ಅಚ್ಯುತರಾಯ ನೊಡನೆ, ರಾಜ್ಯಗಳ ಪರಿಸ್ಥಿತಿಯನ್ನೆಲ್ಲಾ ವಿವರಿಸಿದನು. ಗಜಪತಿ ಪ್ರತಾಪ ರುದ್ರರಾಯನು ಓಢ್ರದೇಶವನ್ನೆಲ್ಲಾ ಆಕ್ರಮಣಮಾಡಲು ಪ್ರಯತ್ನ ಮಾಡುತ್ತಿದ್ದಾನೆ. ಕೃಷ್ಣದೇವರಾಯನ ಪರಾಕ್ರಮದಿಂದ ಅಣ ಗಿದ್ದ ಸುಲ್ತಾನರುಗಳು ತಲೆಯೆತ್ತುತ್ತಿದ್ದಾರೆ. ದಕ್ಷಿಣ ರಾಜ್ಯದಲ್ಲಿಯೂ ಸ್ವಲ್ಪ ಗಲಿಬಿಲಿಯಾಗಿದೆ. ಕೇರಳ ರಾಜ್ಯದವರು ಸ್ವತಂತ್ರರೇ ಆಗಿಬಿಟ್ಟಿ ದ್ದಾರೆ. ಮುಖ್ಯವಾಗಿ ದಕ್ಷಿಣದ ಕಡೆಗೂ ಪೂರ್ವದ ಕಡೆಗೂ ಸಮರ್ಥರಾದ ಸೇನಾಧಿಪತಿಗಳನ್ನು ಕಳುಹಿಸಿಕೊಡಬೇಕೆಂದು ಸಲಹೆ ಮಾಡಿದನು.

ಯಾರನ್ನು ಕಳುಹಿಸಬೇಕು ಎಂಬ ವಿಚಾರವು ಬಂದಿತು. ಮಹಾ ಪ್ರಧಾನಿ ಸೆಲ್ಲಪ್ಪನು ಸಲಕ ಸಹೋದರರುಗಳಿಗೆ ಆ ರಾಜ್ಯಗಳ ಪರಿಚಯವು ಚೆನ್ನಾಗಿದೆ ಅವರುಗಳನ್ನೇ ಕಳುಹಿಸಿಕೊಡುವುದು ಉತ್ತಮ ಎಂದು ಸೆಲ್ಲಪ್ಪನು ಸಲಹೆ ಮಾಡಿದನು ಅಚ್ಚುತರಾಯನು ತನ್ನ ಸ್ಯಾಲಕರೊಡನೆ ಈ ಸಮಾಚಾರವನ್ನು ತಿಳಿಸಿದನು ಆ ಸಹೋದರರಿಬ್ಬರೂ ಅಂತರಂಗದಲ್ಲಿ ಮಾತನಾಡಿಕೊಂಡರು. ಈ ಪ್ರಧಾನಿ ಸೆಲ್ಲಪ್ಪನು ನಮ್ಮನ್ನು ದೂರ ಕಳುಹಿಸಬೇಕೆಂದು ಯುಕ್ತಿಯನ್ನು ಹೂಡಿದ್ದಾರೆ. ಈ ಸಮಯದಲ್ಲಿ ನಾವು ರಾಜಧಾನಿಯನ್ನು ಬಿಟ್ಟು ದೂರಹೋದರೆ ಅಚ್ಚುತರಾಯನ ಸ್ಥಿತಿಯು ಹೇಗಾಗುವುದೋ. ಅಷ್ಟೇ ಅಲ್ಲ ಅವನು ಈ ಸೆಲ್ಲಪ್ಪನ ವಶವರ್ತಿಯಾಗಬಹುದು ಎಂದು ಆಲೋಚನೆ ಮಾಡಿ ಅವರಿಬ್ಬರೂ ಹೋಗಿ ಮಹಾಪ್ರಧಾನಿ ಸೆಲ್ಲಪ್ಪನ ಭೇಟಿ ಮಾಡಿದರು.

ಅಚ್ಚುತರಾಯರು ಪಟ್ಟಕ್ಕೆ ಬಂದಕೂಡಲೇ ನಾನಾ ರಾಜ್ಯಗಳಲ್ಲಿ ಗಡಿಬಿಡಿಯಾಗಿದೆಯೆಂದು ನೀವು ಮಹಾರಾಜರಲ್ಲಿ ಅರಿಕೆ ಮಾಡಿದ್ದೀರಿ. ಬಲಾಢ್ಯರಾದ ಸೇನಾಧಿಪತಿಗಳು ಶತ್ರುಗಳನ್ನಣಗಿಸಲು ಆಯಾ ಪ್ರದೇಶಗಳಿಗೆ ಸೈನ್ಯಸಮೇತವಾಗಿ ಹೋಗಬೇಕೆಂಬುದೇನೋ ಕಾಲೋಚಿತವಾದ ಸಲಹೆಯಾಗಿದೆ. ನಾವು ಈಗ ಯುದ್ಧಕ್ಕೆ ಹೊರಡಲು ಸಿದ್ಧರಾಗಿಲ್ಲ. ಆ ರಾಜ್ಯಗಳಲ್ಲಿ ನಮಗೂ ಶತ್ರುಗಳು ಮಿತ್ರರೂ ಇದ್ದಾರೆ ಈಗ ಯಾರುಯಾರು ಯಾವ ಪಕ್ಷವನ್ನು ಅವಲಂಬಿಸಿದ್ದಾರೆಂದು ಗೊತ್ತಿಗೆ ಹಚ್ಚುವುದು ಬಲು ಪ್ರಯಾಸ. ನೀವು ಸಮರ್ಥರೂ ಪರಾಕ್ರಮಶಾಲಿಗಳೂ ಆಗಿದ್ದೀರಿ. ನೀವು ಮಹಾಪ್ರಧಾನಿಗಳಾಗಿಯೂ ಇದ್ದೀರಿ. ನಿಮಗೆ ಸಮಸ್ತ ಅಧಿಕಾರಗಳೂ ಇವೆ. ಯಾವ ರಾಜನನ್ನಾದರೂ ನಿಗ್ರಹಿಸಬಹುದು ಪುನಃ ಅನುಗ್ರಹಿಸಬಹುದು. ಪೂರ್ವ ರಾಜ್ಯಗಳಲ್ಲಿ ಗದ್ದಲವೆಬ್ಬಿಸಿರುವ ಪ್ರತಾಪ ರುದ್ರರಾಯನು ಕೃಷ್ಣದೇವರಾಯರ ಬಂಧು. ಅವರು ಕಾಲವಾಗುತ್ತಲೇ ನಮ್ಮ ಮೇಲೆ ಅವನು ಕತ್ತಿ ಕಟ್ಟಿದ್ದಾನೆ. ಅಚ್ಚುತರಾಯರ ಸಮೀಪ ಬಂಧುಗಳಾದ ನಾವು ಅವನ ಮೇಲೆ ಯುದ್ಧಕ್ಕೆಹೋಗುವುದು ಸೂಕ್ತವಾಗಲಾರದು.

ನೀವೇ ಅತ್ತಕಡೆ ಯುದ್ಧಕ್ಕೆ ಹೊರಟರೆ ಅವನನ್ನು ಸೋಲಿಸಿ ಓಡಿಸಬಹುದು ಅಥವಾ ಕೃಷ್ಣದೇವರಾಯರು ಮಾಡಿದಂತೆ ಸಂಧಿಯನ್ನಾದರೂ ಮಾಡಬಹುದು ನಾವು ಅಷ್ಟು ಸ್ವತಂತ್ರಾಧಿಕಾರವನ್ನು ಕೈಗೆ ತೆಗೆದುಕೊಂಡರೆ ರಾಜಧಾನಿಯಲ್ಲಿ ದರಬಾರಿಗಳೆಲ್ಲರೂ ಆಕ್ಷೇಪಿಸಬಹುದು ಅಥವಾ ವಿಮುಖರಾಗಬಹುದು. ನೀವೇ ಯುದ್ಧಕ್ಕೆ ಹೋದರೆ, ಸಂತೋಷ ಇಲ್ಲದಿದ್ದರೆ, ರಾಜಧಾನಿಯಲ್ಲಿರುವ ನಿಮ್ಮ ಮನಸ್ಸಿಗೆ ಒಪ್ಪುವಂಥಾ ಸೇನಾಧಿಪತಿಗಳನ್ನು ಚುನಾಯಿಸಿ ಕಳುಹಿಸಿಕೊಡಬಹುದು ಎಂದು ಹೇಳಿ ಹೊರಟುಹೋದರು.

ಮಹಾಪ್ರಧಾನಿ ಸೆಲ್ಲಪ್ಪನು ಈ ಸಲಕ ಸಹೋದರರು ಹೇಳಿದ ಮಾತುಗಳನ್ನೆಲ್ಲಾ ಅಚ್ಯುತರಾಯನಿಗೆ ನಿವೇದಿಸಿದನು. ಅಚ್ಯುತರಾಯನು "ಮಹಾಪ್ರಧಾನಿಗಳೇ! ನಿಮ್ಮ ಸಲಹೆಯಂತೆ ಆ ಸಲಕ ಸಹೋದರರೇ ಸೈನ್ಯವನ್ನು ತೆಗೆದುಕೊಂಡು ಹೊರಟಿದ್ದರೆ ಚೆನ್ನಾಗಿತ್ತು. ಅವರು ಸಂತೋಷದಿಂದ ಒಪ್ಪಿಕೊಳ್ಳಲಿಲ್ಲ. ಅವರನ್ನು ಬಲಾತ್ಕರಿಸುವುದು ತರವಲ್ಲ. ಪ್ರತಾಪರುದ್ರನು ಸಾಮಾನ್ಯನಲ್ಲ ಕೃಷ್ಣದೇವರಾಯರು ಅವನನ್ನು ಪೂರ್ತಿಯಾಗಿ ಸೋಲಿಸಿ ಸಂಧಿ ಮಾಡಿಕೊಂಡರು. ಈಗಲೂ ಹಾಗೆಯೇ ಮಾಡಬೇಕು. ಅವನ ಮೇಲೆ ನೀವೇ ಯುದ್ಧಕ್ಕೆ ಹೋಗುವುದು ನನಗೆ ಸಮ್ಮತವಾಗಿದೆ. ನಾನೂ ನಿಮ್ಮೊಡನೆ ಬರಲು ಸಂತೋಷದಿಂದ ಒಪ್ಪುತ್ತೇನೆ. ಆದರೆ ಈ ರಾಜಧಾನಿಯಲ್ಲಿ ನೀವೂ ಇಲ್ಲದೇ ನಾನೂ ಇಲ್ಲದೇ ಹೋದರೆ, ಅಧಿಕಾರವನ್ನೆಲ್ಲಾ ಈ ಸಲಕ ಸಹೋದರರಿಗೆ ಒಪ್ಪಿಸಬೇಕಾಗುತ್ತದೆ. ಇದರಿಂದ ದರಬಾರಿಗಳೆಲ್ಲರೂ ವಿಮುಖರಾಗುತ್ತಾರೆ. ಸಾಮಂತರೂ ಸಮಾಧಾನ ಪಡುವುದಿಲ್ಲ ಪಟ್ಟಾಭಿಷಿಕ್ತನಾದ ತರುಣದಲ್ಲಿಯೇ ಸ್ಯಾಲಕರಿಗೆ ಅಧಿಕಾರವನ್ನು ಒಪ್ಪಿಸಿದನೆಂಬ ಅಪಖ್ಯಾತಿಯು ನನಗೆ ಬಂದರೂ ಬರಬಹುದು. ನೀವು ಚೆನ್ನಾಗಿ ಯೋಚನೆಮಾಡಿ ಸೂಕ್ತಾನುಸಾರ ನಡೆಸಬಹುದೆಂದು ಹೇಳಿದನು.

ಮಹಾಪ್ರಧಾನಿ ಸೆಲ್ಲಪ್ಪನು ಮನಸ್ಸಿನಲ್ಲಿ ಯೋಚನೆ ಮಾಡಿದನು. ಮಹಾರಾಜರ ಮಾತುಗಳು ನ್ಯಾಯವಾಗಿದೆ. ಅದರಲ್ಲಿ ಎಳ್ಳಷ್ಟೂ ಶಂಕೆಗೆ

ಅವಕಾಶವಿಲ್ಲ. ಸಲಕ ಸಹೋದರರ ಮಾತಿನಲ್ಲಿ ಕೃತ್ರಿಮವಿದೆ. ಆದರೆ ಈಗ ಅವರನ್ನು ನಿಗ್ರಹಿಸಲು ಸಾಧ್ಯವಿಲ್ಲ. ಕ್ರಮೇಣ ಈ ಸಲಕ ಸೋದರರನ್ನು ದೂರಮಾಡದಿದ್ದರೆ ಈ ರಾಜ್ಯಕ್ಕೆ ಕ್ಷೇಮವಿಲ್ಲ, ಎಂದು ನಿರ್ಧಾರ ಮಾಡಿಕೊಂಡು ಪ್ರಭುಗಳೇ! ನಾನೇ ಯುದ್ಧಕ್ಕೆ ಹೊರಡುತ್ತೇನೆ. ತಾವು ಅಪ್ಪಣೆ ಕೊಡಿರಿ ಎಂದು ಹೇಳಿ ಅಪ್ಪಣೆ ಪಡೆದು ಹೊರಟನು.

ಸೆಲ್ಲಪ್ಪನು ತನ್ನ ಆಪ್ತರಾದ ಅಧಿಕಾರಿಗಳನ್ನೆಲ್ಲಾ ಅಂತರಂಗದಲ್ಲಿ ಕರೆಸಿಕೊಂಡು ಅವರೊಡನೆ ಹೇಳಿದನು – ನಾನು ಪ್ರತಾಪರುದ್ರ ಗಜಪತಿಯ ಮೇಲೆ ಯುದ್ಧಕ್ಕೆ ಹೊರಡುತ್ತೇನೆ. ಮಹಾರಾಜರ ಸ್ಯಾಲಕರಾದ ಸಲಕ ಸಹೋದರರ ವಿಚಾರದಲ್ಲಿ ನೀವೆಲ್ಲರೂ ಬಹಳ ಜಾಗರೂಕತೆಯಿಂದಿರಬೇಕು. ನಮ್ಮ ಮಹಾರಾಜರು ತೀಕ್ಷ್ಣಬುದ್ಧಿಯವರಲ್ಲ. ರಾಜಧಾನಿಯಲ್ಲಿ ಕೃಷ್ಣ ದೇವರಾಯನ ರಾಣಿಯರು ಇದ್ದಾರೆ. ಅವರಿಗೆ ಯಾವ ತೊಂದರೆಗಳಾಗಲೀ ಅಪಮಾನವಾಗಲೀ ಸಂಭವಿಸದಂತೆ ನೋಡಿಕೊಳ್ಳಬೇಕು. ರಾಜ್ಯದ ಅಧಿಕಾರಿಗಳಮೇಲೆ ರಾಜರಿಗೆ ಆಗ್ರಹ ಬಾರದಂತೆ ಎಚ್ಚರಿಕೆಯಿಂದಿರಬೇಕು. ಅಂತೂ ಸಲಕ ಸಹೋದರರಮೇಲೆ ನೀವೆಲ್ಲರೂ ಸಾವಿರ ಕಣ್ಣುಗಳನ್ನು ತೆರೆದು ನೋಡುತ್ತಿರಬೇಕು ಎಂದು ಎಚ್ಚರಿಸಿದನು. ನಾಲ್ವರು ಸೇನಾಧಿಪತಿಗಳನ್ನು ಕರೆಸಿ ಯುದ್ಧಕ್ಕೆ ಹೊರಡುವಂತೆ ಅಪ್ಪಣೆ ಮಾಡಿದನು. ತಾನೇ ಭಂಡಾರಕ್ಕೆಹೋಗಿ ಯುದ್ಧದ ಖರ್ಚುಗಳಿಗೆ ಬೇಕಾದಷ್ಟು ಹಣವನ್ನು ತೆಗೆಸಿಕೊಂಡು ಹೊರಟನು. ಕೋಶಾಧಿಕಾರಿಯಾದ ಪೆದ್ದ ತಿರುಮಲನು ಪ್ರಧಾನಿಯ ಮಾತನ್ನು ಚಾಚೂ ತಪ್ಪದಂತೆ ನಟಿಸಿ ಹೇರಳವಾದ ಧನಕನಕಗಳನ್ನು ಕಳಿಸಿಕೊಟ್ಟನು.

ಸೆಲ್ಲಪ್ಪನು ದೊಡ್ಡ ಸೈನ್ಯದೊಡನೆ ಪೂರ್ವ ರಾಜ್ಯಗಳಕಡೆಗೆ ಹೊರಟನು. ಓಢ್ರ ರಾಜ್ಯಾಧಿಪತಿ ಪ್ರತಾಪ ರುದ್ರರಾಜನು ಆಕ್ರಮಿಸಿಕೊಂಡಿದ್ದ ಸ್ಥಳಗಳಲ್ಲೆಲ್ಲಾ ಯುದ್ಧವಾಯಿತು. ಪ್ರತಾಪರುದ್ರನು ಹೆಜ್ಜೆಹೆಜ್ಜೆಗೂ ಯುದ್ಧಮಾಡಿ ಸೋತು ಹಿಂದೆಗೆದನು. ಸೆಲ್ಲಪ್ಪನು ಗೋದಾವರಿಯಿಂದ ಆಚೆಯವರೆಗೆ ಪ್ರತಾಪರುದ್ರನನ್ನು ಓಡಿಸಿಕೊಂಡುಹೋದನು. ಕಟ್ಟ

ಕಡೆಯಲ್ಲಿ ಗೋಪೀನಾಥಪುರದಲ್ಲಿ ಪ್ರತಾಪರುದ್ರನು ಪರಾಜಯವನ್ನು ಒಪ್ಪಿಕೊಂಡನು. ಅವನು ತನ್ನ ಮಂತ್ರಿಗಳನ್ನು ಕಳುಹಿಸಿ ಮಹಾಪ್ರಧಾನಿ ಸೆಲ್ಲಪ್ಪನನ್ನು ತನ್ನ ಬಳಿಗೆ ಬರಬೇಕೆಂದು ಪ್ರಾರ್ಥನೆ ಮಾಡಿದನು. ಸೆಲ್ಲಪ್ಪನು ಪ್ರತಾಪರುದ್ರನು ವಯೋವೃದ್ಧನೆಂದೂ ವಿಜಯನಗರದ ರಾಜಬಂಧುವೆಂದೂ ಅವನ ಮಾತಿಗೆ ಗೌರವಕೊಟ್ಟು ಅವನ ಬಳಿಗೆ ಹೋಗಿ ಭೇಟಿ ಮಾಡಿದನು.

ಪ್ರತಾಪರುದ್ರರಾಜನು ವಿಜಯನಗರದ ಮಹಾಪ್ರಧಾನಿ ಸೆಲ್ಲಪ್ಪನನ್ನು ಅತ್ಯಂತ ಗೌರವದಿಂದ ಸ್ವಾಗತಿಸಿ ಅವನೊಡನೆ ಹೇಳಿದನು-ಸೆಲ್ಲಪ್ಪ, ಯುದ್ಧದಲ್ಲಿ ನೀನು ಪರಾಕ್ರಮಶಾಲಿಯೆಂದು ಒಪ್ಪಿಕೊಳ್ಳುತ್ತೇನೆ. ನಾನು ವಿಜಯನಗರದ ಮಹಾರಾಜರಿಗೂ ನಮಗೂ ಆಗಿರುವ ಸಂಧಿಯನ್ನು ಎಂದಿಗೂ ಮುರಿಯತಕ್ಕವನಲ್ಲ. ಈಗ ನಿಮ್ಮ ರಾಜನಾಗಿರುವ ಅಚ್ಯುತ ರಾಯನನ್ನು ಕೃಷ್ಣದೇವರಾಯನು ಮೊದಲು ಬಂಧನದಲ್ಲಿಟ್ಟಿದ್ದನು. ಆಮೇಲೆ ಸೋದರಪ್ರೇಮದಿಂದ ಅವನನ್ನು ರಾಜಧಾನಿಗೆ ಕರೆಸಿ ಅವನಿಗೆ ಎಲ್ಲ ಅಧಿಕಾರಗಳನ್ನು ಒಪ್ಪಿಸಿದನು ಇದು ನಮಗೆ ಆಶ್ಚರ್ಯವನ್ನು ಉಂಟುಮಾಡಿತು. ರಾಜಧಾನಿಯ ವಿದ್ಯಮಾನಗಳು ಹೊಸ ಸಾರ್ವಭೌಮರ ಪರಾಕ್ರಮಗಳು ಎಷ್ಟಿವೆಯೆಂಬುದನ್ನು ಪರೀಕ್ಷಿಸುವುದಕ್ಕಾಗಿ ನಾನು ಈ ಪೂರ್ವ ರಾಜ್ಯಗಳಮೇಲೆ ಧಾಳಿ ನಡೆಸಿದೆ. ನೀನು ಸೈನ್ಯವನ್ನು ತಂದು ಯುದ್ಧ ಮಾಡಿ ನಿಮ್ಮ ರಾಜ್ಯವನ್ನು ಪುನಃ ಗೆದ್ದುಕೊಂಡೆ. ನನಗೆ ಸಂತೋಷ. ಮಹಾ ಪರಾಕ್ರಮಶಾಲಿಯಾದ ನಿನ್ನನ್ನು ನಾನು ಸ್ನೇಹಿತನಂತೆ ಭಾವಿಸುತ್ತೇನೆ. ನನಗೆ ವಿಜಯನಗರದಮೇಲಾಗಲೀ ನಿನ್ನಮೇಲಾಗಲೀ ವೈರವಿಲ್ಲ ಎಂದು ಸ್ನೇಹಮಾಡಿಕೊಂಡನು.

ಪ್ರತಾಪರುದ್ರನ ಇಷ್ಟಾನುಸಾರ ಕೆಲವು ದಿನಗಳು ಸೆಲ್ಲಪ್ಪನು ಸೈನ್ಯ ಸಮೇತನಾಗಿ ಅಲ್ಲಿ ತಂಗಿದನು. ಅವರು ವಿಜಯನಗರಕ್ಕೆ ಹಿಂತಿರುಗಿ ಹೋಗುವ ಸಮಯದಲ್ಲಿ ಪ್ರತಾಪರುದ್ರನು ಸೇನಾಧಿಪತಿಗಳಿಗೂ ಮಹಾ ಪ್ರಧಾನಿಗೂ ರತ್ನವಿಭೂಷಣಗಳನ್ನು ಕೊಟ್ಟು ಗೌರವಿಸಿದನು. ನೂರು ಆನೆಗಳನ್ನು ಕಾಣಿಕೆಯಾಗಿ ಕೊಟ್ಟನು. ಸೆಲ್ಲಪ್ಪನಿಗೆ ಪ್ರತಾಪರುದ್ರ

ರಾಯನ ವಿಷಯದಲ್ಲಿ ಬಹಳ ಗೌರವವು ಉತ್ಪನ್ನವಾಗಿದ್ದಿತು. ಪ್ರತಾಪ ರುದ್ರನು ಹೊರಡುವ ಸಮಯದಲ್ಲಿ ಸೆಲ್ಲಪ್ಪನನ್ನು ಅಂತರಂಗದಲ್ಲಿ ಕೂಡಿಸಿ ಕೊಂಡು, "ಈಗ ನಾವಿಬ್ಬರೂ ರಾಮಸುಗ್ರೀವರಂತೆ ಸ್ನೇಹಿತರಾಗಿದ್ದೇವೆ. ನನ್ನ ಮನಬಿಚ್ಚಿ ಹೇಳುತ್ತೇನೆ. ಮಹಾರಾಜನಾದ ಅಚ್ಯುತರಾಯನಲ್ಲಿ ನನಗೆ ಗೌರವವೂ ಇಲ್ಲ ನಂಬಿಕೆಯೂ ಇಲ್ಲ ಕೃಷ್ಣದೇವರಾಯರ ಕಡೆ ಗಾಲದಲ್ಲಿ ವಿಜಯನಗರದಲ್ಲಿ ಎರಡು ಘೋರ ಕೃತ್ಯಗಳು ನಡೆದವು. ಅದನ್ನು ನೀನೂ ಬಲ್ಲೆ. ಆ ಪಾತಕಗಳ ರಹಸ್ಯವು ಅಭೇದ್ಯವಾಗಿದೆ. ಬಾಲ ಮಹಾರಾಜ ತಿರುಮಲರಾಯನ ಕೊಲೆ ವೃದ್ಧಮಂತ್ರಿ ಸಾಲ್ವ ತಿಮ್ಮರಸನ ಅಪಮಾನ ಇವೆರಡಕ್ಕೂ ಈ ಅಚ್ಯುತರಾಯನೇ ಕಾರಣನೆಂದು ನಾನು ದೇವರ ಸಾಕ್ಷಿಯಾಗಿ ಭಾವಿಸಿದ್ದೇನೆ ಇವೆರಡು ಮಹಾಪಾತಕಗಳಿದ್ದರೂ ಲಾಭವಾದದ್ದು ಅಚ್ಯುತರಾಯನಿಗೆ. ಅದು ವಿಧಿವಿಲಾಸವೆಂದು ನಾನೊ ಪ್ಪುವುದಿಲ್ಲ. ಅದರಲ್ಲಿ ಅಚ್ಯುತರಾಯನ ಘೋರ ಕೃತ್ರಿಮ ಸಂಧಾನವು ಅಡಗಿದೆಯೆಂದೇ ನನ್ನ ಭಾವನೆ ಸಾಲ್ವ ತಿಮ್ಮರಸನು ಮಹಾ ಪ್ರಭಾವ ಶಾಲಿ. ನನಗೆ ಅತ್ಯಂತ ಸ್ನೇಹಿತ. ಅವನ ವಂಶವೇ ನಾಶವಾಗಿಹೋಯಿತು. ಸಲಕ ವಂಶದವರು ಈ ಆಂಧ್ರದಲ್ಲೆಲ್ಲಾ ದುಷ್ಕೃತ್ಯಗಳಿಗೆ ಪ್ರಸಿದ್ಧರಾ ಗಿದ್ದಾರೆ. ನಿಮ್ಮ ರಾಜನ್ಯಾಲಕರೆಂದು ಅವರು ಬಂದು ನಿಮ್ಮ ರಾಜರ ದರ್ಬಾರಿನಲ್ಲಿ ಸೇರಿಕೊಂಡಿದ್ದಾರೆ. ಅವರಿಂದ ಈ ಸಾಮ್ರಾಜ್ಯಕ್ಕೆ ಅಪಾ ಯವು ಸಂಭವಿಸದೇ ಇರದು ಇಂದಲ್ಲ ನಾಳೆ, ನನ್ನ ಮಾತುಗಳನ್ನು ನೆನ ಪಿನಲ್ಲಿಟ್ಟುಕೋ ನಿನಗೂ ಅವರು ಶತ್ರುಗಳಾಗುತ್ತಾರೆ. ಅವರ ಮೇಲೆ ನಿನ್ನ ಕಣ್ಣಿರಲಿ. ಸಮಯ ಬಂದರೆ ಅವರಿಬ್ಬರನ್ನು ನಿಗ್ರಹಿಸಿದರೂ ರಾಜ್ಯಕ್ಕೆ ಕ್ಷೇಮವೇ ಎಂದು ಹೇಳಿದನು.

ಸೆಲ್ಲಪ್ಪನಿಗೆ ಅವನ ಮಾತುಗಳನ್ನು ಕೇಳಿ ಆಶ್ಚರ್ಯವಾಯ್ತು. ಸೆಲ್ಲಪ್ಪನು ಗಜಪತಿ ಮಹಾರಾಜರೇ! ನೀವು ಬಲು ದೂರದಲ್ಲಿದ್ದೀರಿ. ನಿಮಗೆ ಅಚ್ಯುತರಾಯರ ವಿಷಯ ಸರಿಯಾಗಿ ತಿಳಿಯದು. ಅವರು ಬಲು ಒಳ್ಳೆಯ ಸ್ವಭಾವದವರು. ಅದನ್ನರಿತೇ ಕೃಷ್ಣದೇವರಾಯರು ಅವರನ್ನು ಅಷ್ಟು

ಪುರಸ್ಕರಿಸಿದರು. ಕೃಷ್ಣದೇವರಾಯರ ಪೂರ್ಣ ಇಷ್ಟದಂತೆಯೇ ಅವರಿಗೆ ಪಟ್ಟಾಭಿಷೇಕವಾಯಿತು. ನಾನು ರಾಜಧಾನಿಗೆಹೋಗಿ ಮಹಾರಾಜರವರಿಂದ ನಿಮಗೆ ಆಹ್ವಾನವನ್ನು ಕಳಿಸಿಕೊಡುತ್ತೇನೆ. ನೀವು ಮಿತ್ರರಾಗಿ ನಮ್ಮ ರಾಜ್ಯಕ್ಕೆ ಬನ್ನಿರಿ ನೀವೆಂದೂ ವಿಜಯನಗರಕ್ಕೆ ಬಂದಿಲ್ಲ. ಅಲ್ಲಿಯ ವಿದ್ಯಮಾನಗಳನ್ನು ನೋಡಿದರೆ, ನೀವು ಪರಮಾನಂದಭರಿತರಾಗುತ್ತೀರಿ. ಸಲಕ ಸೋದರರ ವಿಷಯ ಇನ್ನೂ ಪರೀಕ್ಷಿಸಿ ನೋಡಬೇಕು ಅವರು ಪರಾಕ್ರಮಶಾಲಿಗಳೆಂದು ಕೇಳಿದ್ದೇನೆ ಅವರು ರಾಜಧಾನಿಗೆ ಬಂದಾಗಿನಿಂದಲೂ ನಾನವರಮೇಲೆ ದೃಷ್ಟಿ ಇಟ್ಟಿದ್ದೇನೆ ಇನ್ನು ಯಾವ ದೋಷವೂ ಉದ್ಭವಿಸಿಲ್ಲ. ನಮ್ಮ ರಾಜಧಾನಿಯಲ್ಲಿ ದಿಗ್ಗಜಗಳಂಥಾ ಸಾಮಂತರಿದ್ದಾರೆ. ಮಹಾಮಹಾ ಸೇನಾಧಿಪತಿಗಳಿದ್ದಾರೆ ಕುಬೇರನಿಗೆ ಸಮಾನರಾದ ಶ್ರೀಮಂತರಿದ್ದಾರೆ. ಅಂಥಾ ಸ್ಥಳದಲ್ಲಿ ಈ ಸಲಕ ಸಹೋದರರ ಕುಯುಕ್ತಿಗಳೇನೂ ಫಲಕಾರಿಯಾಗುವುದಿಲ್ಲ. ಆದರೂ ಹಿರಿಯರಾದ ನಿಮ್ಮ ಮಾತನ್ನು ಸೆನಪಿಟ್ಟುಕೊಳ್ಳುತ್ತೇನೆ. ಯುದ್ಧಕಾಲದಲ್ಲಿ ನನ್ನ ಅಪರಾಧಗಳೇನಾದರೂ ಇದ್ದರೆ ಮನ್ನಿಸಿರಿ. ಕೃಷ್ಣದೇವರಾಯರು ಈ ಬಹಮನಿ ಸುಲ್ತಾನರುಗಳನ್ನೆಲ್ಲಾ ಅಣಗಿಸಿಟ್ಟಿದ್ದರು. ಅವರು ಮತ್ತೊಮ್ಮೆ ನಮ್ಮ ಮೇಲೆ ಕೈಮಾಡಬಹುದು, ಆಗ ನಿಮ್ಮ ಪೂರ್ಣ ಸಹಾಯದ ಮೇಲೆ ನಾವು ಭರವಸೆ ಇಡುತ್ತೇವೆ" ಎಂದು ಹೇಳಿ ಗಜಪತಿರಾಜನ ಅಪ್ಪಣೆಯನ್ನು ಪಡೆದು ಸೇನಾಸಮೇತನಾಗಿ ಹಿಂತಿರುಗಿದನು.

ಮಹಾಪ್ರಧಾನಿ ಸೆಲ್ಲಪ್ಪನು ವಿಜಯನಗರಕ್ಕೆ ಜಯಶೀಲನಾಗಿ ಹಿಂತಿರುಗುವನೆಂಬ ಸಮಾಚಾರವನ್ನು ಕೇಳಿ ಸಲಕ ಸಹೋದರರು ಅಸಂತುಷ್ಟರಾದರು. ಈ ಸೆಲ್ಲಪ್ಪನು ಮೊದಲೇ ಪ್ರಧಾನಾಮಾತ್ಯನಾಗಿದ್ದಾನೆ. ಈಗ ಪ್ರತಾಪರುದ್ರನನ್ನು ಜಯಿಸಿ ಬಂದಿದ್ದಾನೆ. ಅವನ ಅಹಂಕಾರವು ಇಮ್ಮಡಿಯಾಗುತ್ತದೆ. ಹೀಗೆಯೇ ಇವನ ಪ್ರಭಾವವು ಬೆಳೆದರೆ ನಮ್ಮನ್ನು ಮೂಲೋತ್ಪಾಟನ ಮಾಡುತ್ತಾನೆ ಇಲ್ಲಿ ನಾನಾದರೂ ಇರಬೇಕು ಅಥವಾ ಅವನಾದರೂ ಇರಬೇಕು ಅವನ ಅಧೀನದಲ್ಲಿ ಈ ರಾಜಾಶ್ರಯದಲ್ಲಿ

ರುವುದು ನಮಗೆ ಯಶಸ್ಕರವೂ ಅಲ್ಲ, ಶ್ರೇಯಸ್ಕರವೂ ಅಲ್ಲ ಎಂದು ಆ ಸಹೋದರರಿಬ್ಬರೂ ಮಾತನಾಡಿಕೊಂಡು ನಿರ್ಧರಿಸಿದರು. ಸೆಲ್ಲಪ್ಪನು ರಾಜಧಾನಿಗೆ ಬರುವಾಗ ಸಮಸ್ತ ಅಧಿಕಾರಿಗಳೂ ಪುರದ್ವಾರದಲ್ಲಿ ಅವನನ್ನು ಎದುರುಗೊಂಡು ಕರೆತಂದರು. ಮಹಾರಾಜನಾದ ಅಚ್ಯುತರಾಯನು ಮಹಾಪ್ರಧಾನಿ ಸೆಲ್ಲಪ್ಪನನ್ನು ರಾಜಸಭೆಯಲ್ಲಿ ಗೌರವಿಸಿ ಪ್ರಶಂಸೆಮಾಡಿ ಕಳಿಸಿದನು. ಸಲಕ ಸಹೋದರರು ಸೆಲ್ಲಪ್ಪನನ್ನು ಎದುರುಗೊಳ್ಳುವುದ ಕ್ಕಾಗಲೀ ಮಹಾರಾಜರು ಸೆಲ್ಲಪ್ಪನನ್ನು ಗೌರವಿಸಿದ ರಾಜಸಭೆಗಾಗಲೀ ಹೋಗಲಿಲ್ಲ. ಸೆಲ್ಲಪ್ಪನು ಇದನ್ನು ಗಮನಿಸದೇ ಇರಲಿಲ್ಲ. ಆದರೆ ಯಾವ ವ್ಯಗ್ರಭಾವವನ್ನು ತೋರ್ಪಡಿಸಿಕೊಳ್ಳಲಿಲ್ಲ ಸೆಲ್ಲಪ್ಪನು ರಾಜಧಾನಿಗೆ ಬಂದಮೇಲೆ ಯುದ್ಧದಿಂದ ಹಿಂತಿರುಗಿ ಬಂದ ಸೈನಿಕರುಗಳಿಗೂ ಸೇನಾಧಿ ಪತಿಗಳಿಗೂ ಹೇರಳವಾದ ಇನಾಮುಗಳನ್ನು ಕೊಡಬೇಕೆಂದು ಅಪ್ಪಣೆ ಮಾಡಿದನು.

ಕೋಶಾಧ್ಯಕ್ಷನಾದ ಪೆದ್ದ ತಿರುಮಲನು ಒಂದೆರಡು ವಾರಗಳಾದರೂ ಆ ಸೈನಿಕರಿಗೆ ಇನಾಮುಗಳನ್ನು ಕೊಡಿಸಲಿಲ್ಲ. ಕಟ್ಟಕಡೆಗೆ ಮಹಾರಾಜರ ಆಜ್ಞೆಯಾಗದೇ ಒಂದುಕಾಸನ್ನೂ ಭಂಡಾರದಿಂದ ಕೊಡಲಾಗುವುದಿಲ್ಲವೆಂದು ನಿರಾಕರಿಸಿದನು. ಮಹಾಪ್ರಧಾನಿ ಸೆಲ್ಲಪ್ಪನಿಗೆ ಅಪಮಾನವಾದಂತಾಯಿತು. ಅವನು ಮಹಾರಾಜರವರ ಸಂದರ್ಶನಮಾಡಿ ಕೋಶಾಧ್ಯಕ್ಷನಾದ ಸಲಕ ತಿರುಮಲನ ಅವಿಧೇಯತೆಯನ್ನು ಅರಿಕೆಮಾಡಿದನು.

ಅಚ್ಯುತರಾಯನು ಯುದ್ಧಕ್ಕೆ ಹೋಗಿಬಂದ ಸೈನಿಕರೆಲ್ಲರಿಗೂ ಸಂಬಳ ಸಾರಿಕೆಗಳು ಸಲ್ಲುತ್ತವೆ. ಯುದ್ಧದ ರಾಜ್ಯಗಳಲ್ಲಿ ಕೊಳ್ಳೆಹೊಡೆದ ಅಪಾರ ಧನವು ಅವರ ಕೈ ಸೇರಿರುತ್ತದೆ. ಇದರಮೇಲೆ ಇನಾಮುಗಳನ್ನು ಕೊಡುವುದೆಂದರೆ, ಅಷ್ಟು ನ್ಯಾಯವಾಗಿ ತೋರಲಿಲ್ಲ. ನಾನೇ ಆ ಹಣ ವನ್ನು ಕೊಡಬಾರದೆಂದು ಸೂಚನೆ ಕೊಟ್ಟಿದ್ದೇನೆ ಎಂದು ಹೇಳಿದನು.

ಸೆಲ್ಲಪ್ಪನು ಸೈನಿಕರ ಆದಾಯಗಳನ್ನೆಲ್ಲಾ ಮಹಾಪ್ರಭುಗಳು ಲೆಕ್ಕ

ಹಾಕಬಾರದು. ಆ ಸೈನಿಕರು ಪ್ರಾಣತೆತ್ತು ಸಾಮ್ರಾಜ್ಯಕ್ಕಾಗಿ ದುಡಿ ಯುತ್ತಾರೆ. ಹಿಂದೆ ಪ್ರತಿಯೊಂದು ಯುದ್ಧಾನಂತರವೂ ಕೃಷ್ಣದೇವ ರಾಯರು ಗೆದ್ದು ಬಂದ ಸೈನಿಕರಿಗೆ ಹೇರಳವಾದ ಇನಾಮುಗಳನ್ನು ಕೊಡಿಸಿ ದ್ದಾರೆ. ಈ ವಿಚಾರದಲ್ಲಿ ಮಹಾಪ್ರಭುಗಳು ದ್ರವ್ಯಲೋಭವನ್ನು ಮಾಡು ವುದು ಸರಿಯಲ್ಲ ಮತ್ತು ಮಹಾಪ್ರಧಾನಿಯಾದ ನಾನು ಆಜ್ಞೆಮಾಡಿದ ಮೇಲೆ ಅದು ಜಾರಿಯಾಗದಿದ್ದರೆ ಆ ಸೈನಿಕರಿಗೂ ಸೇನಾಧಿಪತಿಗಳಿಗೂ ನನ್ನಲ್ಲಿ ಗೌರವವಿರುವುದಿಲ್ಲ ತಮ್ಮ ಮನೋಭಾವನೆಯು ಇಷ್ಟು ಬದ ಲಾವಣೆಯಾಗಿರುವ ಕಾರಣವನ್ನು ಊಹಿಸುವುದಕ್ಕೂ ನಾನು ಅಶಕ್ತ ನಾಗಿದ್ದೇನೆ.

ಅಚ್ಯುತರಾಯನು ನೀವು ಯಾವಾಗಲೂ ನನ್ನನ್ನು ತಪ್ಪಾಗಿ ಭಾವಿ ಸಬೇಡಿರಿ. ನಾನು ವಿಚಾರಮಾಡದೇ ಯಾವ ಕಾರ್ಯವನ್ನೂ ಮಾಡುವವನಲ್ಲ. ಪ್ರತಾಪರುದ್ರರಾಜರೊಡನೆ ನೀವು ಯುದ್ಧಕ್ಕೆ ಹೋದಿರಿ. ಹಿಂತಿರುಗಿ ಬರುವಾಗ ಅವರೊಡನೆ ಸಂಧಿಮಾಡಿಕೊಂಡು ಬಂದಿರಿ. ಕೃಷ್ಣದೇವ ರಾಯರು ಆ ರಾಜ್ಯದಮೇಲೆ ಯುದ್ಧಕ್ಕೆ ಹೋದಾಗ ಅಪಾರ ಐಶ್ವರ್ಯವನ್ನೂ ರತ್ನಾಭರಣಗಳನ್ನೂ ತಂದು ರಾಜಭಂಡಾರಕ್ಕೆ ತುಂಬಿದರು. ನೀವು ಏನು ಗಳಿಸಿಕೊಂಡು ಬಂದಿದ್ದೀರಿ. ರಾಜಭಂಡಾರದಿಂದ ಸೈನಿಕರಿಗೆ ಸೂರೆ ಮಾಡಿಕೊಡುವಂತೆ ಅಪ್ಪಣೆ ಮಾಡಿದಿರಿ ಇದನ್ನು ನಾವು ಹೇಗೆ ಭರಿಸ ಲಾದೀತು ? ಹೀಗೆ ವೆಚ್ಚಮಾಡಿದರೆ, ಭಂಡಾರವು ಬರಿದಾಗಿಹೋಗು ತ್ತದೆ. ಆಮೇಲೆ ರಾಜ್ಯಭಾರವು ನಡೆಯುವುದು ಹೇಗೆ ? ಎಂದು ಕೇಳಿದನು.

ಮಹಾಪ್ರಧಾನಿ ಸೆಲ್ಲಪ್ಪನು ಮಹಾರಾಜರವರ ಮಾತುಗಳೊಂದೂ ನನಗೆ ಅರ್ಥವಾಗುವಂತಿಲ್ಲ. ಸೈನಿಕರಿಗೆ ಇನಾಮುಗಳನ್ನು ಕೊಟ್ಟರೆ ಬರಿದಾಗಿಹೋಗುವ ಭಂಡಾರವು ಎಂತಹ ರಾಜಭಂಡಾರ. ವಿಜಯ ನಗರಕ್ಕೆ ಅಂಥಾ ದುರವಸ್ಥೆಯು ಪ್ರಾಪ್ತವಾಗಿಲ್ಲ. ನಾನು ಮಹಾರಾಜ ರೊಡನೆ ವಾದ ಮಾಡುವುದಿಲ್ಲ. ನಿಮ್ಮಿಷ್ಟದಂತೆ ರಾಜ್ಯಭಾರವನ್ನು ನಡೆಸಿ

ಕೊಳ್ಳಬಹುದು ಎಂದು ಹೇಳಿ ಉತ್ತರವನ್ನು ನಿರೀಕ್ಷಿಸದೇ ಮಹಾರಾಜರ ಸಮ್ಮುಖದಿಂದ ಹೊರಟುಹೋದನು.

ಪ್ರಧಾನಿ ಸೆಲ್ಲಪ್ಪನು ತನ್ನ ಅರಮನೆಯಲ್ಲಿ ಕುಳಿತು ಯೋಚನೆ ಮಾಡಿದನು. ಈ ರಾಜ್ಯದಲ್ಲಿ ನನ್ನ ಅಧಿಕಾರವೆಲ್ಲಿದೆ? ಏನೂ ಉಳಿದಿಲ್ಲ. ನಾನು ಇನ್ನುಮುಂದೆ ಈ ರಾಜ್ಯದಲ್ಲಿರುವುದು ಗೌರವಾಸ್ಪದವಲ್ಲ ಎಂದು ನಿರ್ಧರಿಸಿಕೊಂಡನು. ಆ ದಿನವೇ ಅವನ ಸ್ನೇಹಿತರಾದ ಇಬ್ಬರು ಶ್ರೀಮಂತ ರನ್ನು ಕರೆಸಿ ಸಾಲವಾಗಿ ಹತ್ತು ಲಕ್ಷ ವರಹಗಳನ್ನು ತರಿಸಿದನು. ತನ್ನ ಲ್ಲಿದ್ದ ಸಮಸ್ತ ಐಶ್ವರ್ಯವನ್ನು ಜೊತೆ ಮಾಡಿದನು. ತನ್ನ ಮನೆಯಲ್ಲಿದ್ದ ಆಭರಣಗಳನ್ನೆಲ್ಲಾ ಆ ಶ್ರೀಮಂತರಿಗೆ ಕೊಟ್ಟುಬಿಟ್ಟನು ಪ್ರಾತಃಕಾಲದಲ್ಲಿ ಅವನ ಮನೆಯ ಮುಂದೆ, ಯುದ್ಧಕ್ಕೆ ಹೋಗಿದ್ದ ಸೈನಿಕರೆಲ್ಲರನ್ನು ಕರೆಸಿ ಹೇರಳವಾದ ಇನಾಮುಗಳನ್ನು ಕೊಟ್ಟನು. ಆ ಸೈನಿಕರು ಸಂತೋಷದಿಂದ ಜಯಜಯಕಾರ ಮಾಡಿದರು. ಸಂಧ್ಯಾ ಕಾಲದಲ್ಲಿ ತನ್ನ ಕುಟುಂಬ ಪರಿ ವಾರಗಳೊಡನೆ ಮಹಾಪ್ರಧಾನಿ ಸೆಲ್ಲಪ್ಪನು ರಾಜಧಾನಿಯನ್ನು ಪರಿತ್ಯಜಿಸಿ ಹೊರಟನು.

ಈ ಸಮಾಚಾರಗಳೆಲ್ಲವೂ ಅಚ್ಯುತರಾಯನಿಗೆ ತಿಳಿಯಬಂದವು. ಸ್ಯಾಲಕರಾದ ತಿರುಮಲರು ರಾಜರನ್ನು ಆತುರವಾಗಿ ಭೇಟಿ ಮಾಡಿ ಸೆಲ್ಲ ಪ್ಪನು ರಾಜಧಾನಿಯನ್ನು ಬಿಟ್ಟು ಹೊರಟುಹೋಗುತ್ತಾನೆ ಅವನು ಹೊರಗೆ ಹೋದರೆ ನಮ್ಮ ರಾಜ್ಯಕ್ಕೆ ಅಪಾಯವು ತಟ್ಟದಿರದು. ಅವನನ್ನು ಕುಟುಂಬ ಸಮೇತ ಬಂಧನದಲ್ಲಿಡಬೇಕು ಎಂದು ಆ ಸಲಹೆ ಮಾಡಿದರು.

ಅಚ್ಯುತರಾಯನು ಕ್ಷಣಹೊತ್ತು ಆಲೋಚನೆ ಮಾಡಿ ಸೆಲ್ಲಪ್ಪನು ತಾನಾಗಿ ರಾಜಧಾನಿಯನ್ನು ಬಿಟ್ಟುಹೋದರೆ ಹೋಗಲಿ ಅವನಿಂದ ಏನೂ ಅಪಾಯ ಸಂಭವಿಸಲಾರದು. ಅವನು ಈಗತಾನೇ ಯುದ್ಧದಲ್ಲಿ ಗೆದ್ದು ಬಂದಿದ್ದಾನೆ ಅವನನ್ನು ಬಂಧಿಸಿದರೆ ಅವನಿಂದ ವಿಶೇಷ ಹಣಗಳನ್ನು ಪಡೆದಿರುವ ಸೈನಿಕರು ದೊಂಬಿ ಏಳುತ್ತಾರೆ. ಈಗ ಅಲಕ್ಷ್ಯದಿಂದಿರುವುದೇ

ಒಳ್ಳೆಯದು ಎಂದು ಹೇಳಿದನು. ಸಲಕ ಸಹೋದರರಿಗೆ ಸಮಾಧಾನ ವಾಗದಿದ್ದರೂ ಮರುಮಾತನಾಡದೇ ಹೊರಟುಹೋದರು. ಅವರಿಬ್ಬರೂ ರಾಜನು ಧೈರ್ಯಶಾಲಿಯಲ್ಲ. ಕೃಷ್ಣದೇವರಾಯನಿಗೆ ಯಾವುದರಲ್ಲಿಯೂ ಇವನು ಸಾಟಿಯಲ್ಲ. ಮಹಾಪ್ರಧಾನನಾಗಿದ್ದ ಸಾಲ್ವ ತಿಮ್ಮರಸನನ್ನು ಕ್ಷಣಾರ್ಧದಲ್ಲಿ ಬಂಧಿಸುವಂತೆ ಆಜ್ಞೆ ಮಾಡಿದನು. ಶಿಕ್ಷೆಯನ್ನು ವಿಧಿ ಸಿದನು. ಮಹಾರಾಜನೆಂದರೆ ಹಾಗಿರಬೇಕು ಎಂದು ಆ ಸೋದರರಿಬ್ಬರೂ ಮಾತನಾಡಿಕೊಂಡು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೧೧

ಅಚ್ಯುತರಾಯನು ಸಲಕ ಪಿನ್ನ ತಿರುಮಲರಾಯನನ್ನು ಪ್ರಧಾನಾಮಾತ್ಯನಾಗಿ ನೇಮಿಸಿದನು. ಪಿನ್ನ ತಿರುಮಲನು ಅಧಿಕಾರಕ್ಕೆ ಬರುತ್ತಲೇ ಸಾಳ್ವ ಸೆಲ್ಲಪ್ಪನ ಜೊತೆಯಲ್ಲಿ ಹೋಗಿದ್ದ ಸೈನಿಕರನ್ನೆಲ್ಲಾ ಬರ್ತರ್ಫ್ ಮಾಡಿಸಿದನು. ಅಷ್ಟೊಂದು ಸೈನ್ಯವನ್ನು ಇಟ್ಟುಕೊಂಡು ಸಂಬಳ ಸಾರಿಕೆಗಳನ್ನು ಕೊಟ್ಟು ಕಾಪಾಡುವುದು ವಿವೇಕವಲ್ಲವೆಂದು ಪಿನ್ನ ತಿರುಮಲನು ಭಾವಿಸಿದನು ಅಷ್ಟೇ ಅಲ್ಲ ಅವರೆಲ್ಲರೂ ಸಾಳ್ವ ಸೆಲ್ಲಪ್ಪನ ಕಡೆಯವರೆಂದು ಅವನಿಗೆ ಬಲವಾದ ಭ್ರಾಂತಿಯಿದ್ದಿತು ಸೆಲ್ಲಪ್ಪನಿಗೆ ಸಮಯದಲ್ಲಿ ಸಾಲ ಕೊಟ್ಟ ಶ್ರೀಮಂತರನ್ನು ಕರೆಕಳುಹಿಸಿ ವಿಚಾರಣೆ ಮಾಡಿದ. ಅವರು ಸಾಳ್ವ ಸೆಲ್ಲಪ್ಪನವರು ಅವರ ವಸತಿನದ ರತ್ನಭೂಷಣಗಳನ್ನು ತಮಗೆ ಮಾರಾಟ ಮಾಡಿದರೆಂದೂ ತಾವು ಅದೇ ಜವಾಹಿರಿಗಳ ವ್ಯಾಪಾರದವರಾದುದರಿಂದ ಕೊಂಡುಕೊಂಡೆವೆಂದೂ ತಿಳಿಸಿದರು ಪಿನ್ನ ತಿರುಮಲನು ಅವರಿಬ್ಬರನ್ನು ರಾಜಧಾನಿಯಿಂದ ಗಡಿಪಾರು ಮಾಡುವಂತೆ ಆಜ್ಞೆಮಾಡಿದನು.

ಸೈನ್ಯದಿಂದ ವಜಾ ಮಾಡಲ್ಪಟ್ಟ ಸೈನಿಕರೆಲ್ಲರೂ ಹೋಗಿ ಸಾಳ್ವ ಸೆಲ್ಲಪ್ಪನೊಡನೆ ಸೇರಿಕೊಂಡರು ಗಡೀಪಾರಾದ ವರ್ತಕರು ಸೆಲ್ಲಪ್ಪನಡಿಗೆ ಹೋಗಿ ಸೇರಿದರು. ಸೆಲ್ಲಪ್ಪನು ಈ ಸಲಕ ಸೋದರರಿಗೆ, ತಕ್ಕ ಪ್ರತೀಕಾರ ಮಾಡಬೇಕೆಂದು ಸ್ಥಿರಸಂಕಲ್ಪಮಾಡಿ ಆ ಸೈನ್ಯವನ್ನೆಲ್ಲಾ ತೆಗೆದುಕೊಂಡು ಪಶ್ಚಿಮತೀರಕ್ಕೆ ಹೋಗಿ ಸೇರಿದನು ಹೊನ್ನಾವರದಲ್ಲಿದ್ದ ಅಧಿಕಾರಿಯನ್ನು ಓಡಿಸಿ ಹೊನ್ನಾವರವನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ನೆಲೆಸಿದರು. ಅಲ್ಲಿ

ತೀರಪ್ರದೇಶದಲ್ಲಿ ಕೋಠಿಗಳನ್ನು ನಿರ್ಮಾಣಮಾಡಿಸಿ ವ್ಯಾಪಾರಸ್ಥರಿಗೆ ಸಹಾಯ ಮಾಡಿದನು.

ಪೆದ್ದ ತಿರುಮಲನು ಈ ಸೆಲ್ಲಪ್ಪನನ್ನು ಸೆರೆಹಿಡಿದು ತರಬೇಕೆಂದು ತಾನೇ ಸೈನ್ಯಸಮೇತನಾಗಿ ಹೊರಟನು. ಸೆಲ್ಲಪ್ಪನು ಹೊನ್ನಾವರದಲ್ಲಿ ಪೆದ್ದ ತಿರುಮಲನೊಡನೆ ಯುದ್ಧಮಾಡಿ ಸೋತನು. ಆ ಸಮಯದಲ್ಲಿ ತನ್ನಲ್ಲಿದ್ದ ಐಶ್ವರ್ಯವನ್ನೆಲ್ಲಾ ತೆಗೆದುಕೊಂಡು ಸೆಲ್ಲಪ್ಪನು ಮಾಯವಾಗಿ ಹೋದನು. ಪೆದ್ದ ತಿರುಮಲನು ಆ ಯುದ್ಧದಿಂದ ಹಿಂತಿರುಗಿ ವಿಜಯ ನಗರಕ್ಕೆ ಬಂದು ಸೇರಿದನು. ಸೆಲ್ಲಪ್ಪನಲ್ಲಿ ಅಭಿಮಾನಿಶಾಲಿಗಳಾಗಿದ್ದ ಸಾಮಂತರು ಅಧಿಕಾರಿಗಳು ಪೆದ್ದ ತಿರುಮಲನನ್ನು ಪರಿಹಾಸ್ಯ ಮಾಡಿ ಕೊಳ್ಳುತ್ತಿದ್ದರು. ಪೆದ್ದ ತಿರುಮಲನು ಆಟಾಟೋಪಮಾಡಿಕೊಂಡು ಸೆಲ್ಲ ಪ್ಪನನ್ನು ಹಿಡಿದು ತರುವುದಾಗಿ ಹೋಗಿ ಬರಿಗೈಯ್ಯಲ್ಲಿ ಹಿಂತಿರುಗಿದ. ಸೆಲ್ಲ ಪ್ಪನೂ ಸಿಕ್ಕಲಿಲ್ಲ. ಅವನ ಸಂಪತ್ತೂ ಇವನ ವಶವಾಗಲಿಲ್ಲ ಎಂದು ರಾಜ ಧಾನಿಯ ಜನರೆಲ್ಲರೂ ಮಾತನಾಡಿಕೊಳ್ಳುತ್ತಿದ್ದರು.

ಅಷ್ಟರಲ್ಲಿ ಸೆಲ್ಲಪ್ಪನು ತಿರುವಾಡಿಯಲ್ಲಿಹೋಗಿ ಸೇರಿದ್ದಾನೆಂದೂ ವಿಜ ಯನಗರದ ರಾಜರಿಗೆ ಬರುವ ಕಪ್ಪಕಾಣಿಕೆಗಳನ್ನೆಲ್ಲಾ ವಸೂಲ್ಮಾಡುತ್ತಿದ್ದಾ ನೆಂದೂ ರಾಜಧಾನಿಗೆ ಸಮಾಚಾರ ಬಂದಿತು. ಪೆದ್ದ ತಿರುಮಲರಾಯನು ಕ್ರೋಧಾವೇಶದಿಂದ ಸೈನ್ಯವನ್ನು ತೆಗೆದುಕೊಂಡು ತಿರುವಾಡಿಗೆ ಹೋಗಿ ಸೆಲ್ಲಪ್ಪನೊಡನೆ ಮತ್ತೆ ಯುದ್ಧ ಮಾಡಿದನು ಸೆಲ್ಲಪ್ಪನು ಅಲ್ಲಿಯೂ ಚಮತ್ಕಾರದಿಂದ ತಪ್ಪಿಸಿಕೊಂಡು ಮಲಯಾಳ ರಾಜ್ಯಕ್ಕೆ ಹೋಗಿ ತಿರುವಾಂಕೂರು ಮಹಾರಾಜರ ಆಶ್ರಯವನ್ನು ಪಡೆದನು. ಪೆದ್ದ ತಿರುಮಲನು ತಿರುವಾಂಕೂರಿಗೆ ಹೋಗುವ ಸಾಹಸವನ್ನು ಮಾಡದೇ ಆ ತಿರುವಾಡಿ ಪ್ರಾಂತ್ಯದಲ್ಲಿ ತನ್ನಕಡೆಯ ಅಧಿಕಾರಿಗಳನ್ನು ನೇಮಿಸಿ ವಿಜಯ ನಗರಕ್ಕೆ ಹಿಂತಿರುಗಿದನು.

ವಿಜಯನಗರದ ರಾಜ್ಯದಲ್ಲಿ ಎಲ್ಲೆಲ್ಲಿಯೂ ಹೀಗೆಯೇ ಆಗಲಾರಂಭ ವಾಯಿತು. ಅಲ್ಲಲ್ಲಿಯ ಸಾಮಂತರಾಜರು ಅಧಿಕಾರಿಗಳು ತಾವು ತಾವೇ

ಸ್ವತಂತ್ರರಾಗಲಾರಂಭಿಸಿದರು. ರಾಜಧಾನಿಯಲ್ಲಿದ್ದ ಅಧಿಕಾರಿಗಳಿಗೂ ಸಾಮಂತರಿಗೂ ಈ ಸಲಕ ಸಹೋದರರ ಮೇಲೆ ಜಿಗುಪ್ಸೆಯುಂಟಾಯಿತು.

ಇದೇ ಸಮಯವನ್ನು ಕಾದಿದ್ದ ಬಿಜಾಪುರದ ಸುಲ್ತಾನ ಇಸ್ಮಾಯಿಲ್ ಷಹನು ಮೂವತ್ತು ಸಾವಿರ ದಂಡನ್ನು ಕಟ್ಟಿಕೊಂಡು ಬಂದು ರಾಯಚೂರು ಮುದ್ಗಲ್‌ಗಳನ್ನು ವಶಪಡಿಸಿಕೊಂಡನು. ಸುಲ್ತಾನನು ಅಲ್ಲಿಂದ ಮುಂದು ವರಿದು ವಿಜಯನಗರದಕಡೆಗೆ ಹೊರಟನು. ಸುಲ್ತಾನನು ಮೊದಲು ನಾಗಲಾಪುರವನ್ನು ವಶಪಡಿಸಿಕೊಂಡು ವಿಜಯನಗರವನ್ನು ಮುತ್ತುವ ಸನ್ನಾಹಮಾಡುತ್ತಿದ್ದನು. ಅಚ್ಯುತರಾಯನು ಬಿಜಾಪುರದ ಸುಲ್ತಾನ ನೊಡನೆ ಯುದ್ಧಕ್ಕೆ ಹೋಗಲು ಹೆದರಿ ಹಿಂತೆಗೆದನು. ಸಲಕ ಸಹೋದರರು ಯುದ್ಧಕ್ಕೆ ಹೊರಡಲು ಸಾಹಸ ಮಾಡಲಿಲ್ಲ.

ಆ ಸಮಯದಲ್ಲಿ ರಾಜಧಾನಿಯಲ್ಲಿದ್ದ ಸಾಮಂತರೂ ಸೈನ್ಯಾಧಿಕಾರಿಗಳೂ ಒಟ್ಟುಗೂಡಿ ಬಂದು ಅಚ್ಯುತರಾಯನೊಡನೆ ಹೇಳಿದರು— ರಾಜಧಾನಿಯಲ್ಲಿ ಬೇಕಾದಷ್ಟು ಸೈನ್ಯವಿದೆ ಯುದ್ಧ ಸಾಮಗ್ರಿಗಳಿವೆ. ಈ ಯುದ್ಧಕ್ಕೆ ನೀವು ಬರುವ ಅಗತ್ಯವಿಲ್ಲ. ನಾವೇ ಹೋಗಿ ಆದಿಲ್ ಷಹನನ್ನು ಓಡಿಸಿಬರುತ್ತೇವೆ ಅಪ್ಪಣೆ ಕೊಡಿ ಎಂದು ಕೇಳಿದರು.

ಅಚ್ಯುತರಾಯನಿಗೆ ಧೈರ್ಯ ಬರಲಿಲ್ಲ. ಅವರ ಮಾತುಗಳನ್ನು ಅವನು ನಂಬಲಾರದೇಹೋದನು ಇವರೆಲ್ಲರೂ ನನ್ನ ಭಾವಮೈದುನರಾದ ಸಲಕ ಸೋದರರ ವಿರೋಧಿಗಳು. ಇವರನ್ನು ಯುದ್ಧಕ್ಕೆ ಕಳಿಸಿದರೆ ಏನು ಮಾಡುತ್ತಾರೋ ನಿಶ್ಚಯವಿಲ್ಲ ಒಂದು ಪಕ್ಷ ಈ ಯುದ್ಧದಲ್ಲಿ ಜಯವನ್ನು ಗಳಿಸಿದರೂ ಇವರುಗಳು ಈ ಸಲಕ ಸಹೋದರರನ್ನು ರಾಜಧಾನಿಯಿಂದ ಓಡಿಸಿಬಿಡುತ್ತಾರೆ. ನಾನು ಇವರ ಅಧೀನದಲ್ಲಿ ಇರಬೇಕಾಗುತ್ತದೆ. ಹಿಂದಿನ ಕಾಲದಲ್ಲಿ ನಮ್ಮ ಪೂರ್ವೀಕರು ಇಂತಹ ಸಂದರ್ಭಗಳು ಒದಗಿಬಂದಾಗ ಈ ಬಿಜಾಪುರದ ಸುಲ್ತಾನರುಗಳೊಡನೆ ಸಂಧಿಮಾಡಿಕೊಂಡಿದ್ದಾರೆ ಈಗಲೂ ಇವನೊಡನೆ ಸಂಧಿಮಾಡಿಕೊಂಡು ಹಿಂದಕ್ಕೆ ಕಳಿಸುವುದು

ಒಳ್ಳೆಯದು ಎಂದು ತೀರ್ಮಾನ ಮಾಡಿಕೊಂಡನು. ಸಲಕ ಸಹೋದರರುಗಳು ಇದೇ ಅಭಿಪ್ರಾಯವನ್ನು ಪುಷ್ಟೀಕರಿಸಿದರು.

ಅಚ್ಯುತರಾಯನು ಪಿನ್ನ ತಿರುಮಲನನ್ನು ನಾಗಲಾಪುರಕ್ಕೆ ಕಳುಹಿಸಿ ಇಸ್ಮಾಯಿಲ್‌ಷಹನೊಡನೆ ಸಂಧಿಗೆ ಪ್ರಾರ್ಥನೆ ಮಾಡಿದನು. ಇಸ್ಮಾಯಿಲ್ ಷಹನನ್ನು ಗೌರವದಿಂದ ವಿಜಯನಗರಕ್ಕೆ ಕರೆತಂದು ಅವನಿಗೆ ಅನರ್ಘ ರತ್ನಾಭರಣಗಳನ್ನೂ ಹೇರಳವಾದ ಸುವರ್ಣ ನಿಧಿಯನ್ನೂ ಒಪ್ಪಿಸಿ ರಾಜಿ ಮಾಡಿಕೊಂಡನು. ಬಿಜಾಪುರದ ಸುಲ್ತಾನರೂ ವಿಜಯನಗರದವರೂ ಶಾಶ್ವತವಾದ ಸ್ನೇಹಿತರಾಗಿರಬೇಕೆಂದು ಕರಾರು ಮಾಡಿಕೊಂಡರು. ಸುಲ್ತಾನನು ತನಗೆ ದೊರೆತ ಕಪ್ಪಕಾಣಿಕೆಗಳಿಂದ ಸಂತುಷ್ಟನಾಗಿ ರಾಯಚೂರು ಮುದ್ಗಲ್‌ಗಳ ತಂಟೆಗೆ ವಿಜಯನಗರದವರು ಯಾವಾಗಲೂ ಬರಕೂಡದೆಂದು ಕರಾರು ಮಾಡಿದನು. ಅಚ್ಯುತರಾಯನೂ ಅವನ ಭಾವಮೈದುನರೂ ಆದಿಲ್‌ಷಹನ ಸಂತೋಷಾರ್ಥವಾಗಿ ಅನೇಕ ಔತಣಗಳನ್ನೂ ಉತ್ಸವಗಳನ್ನೂ ನಡೆಸಿದರು. ಇದರಿಂದ ಆದಿಲ್‌ಷಹನು ಸಂತುಷ್ಟನಾದನು. ವಿಜಯನಗರದ ರಾಜಧಾನಿಯಲ್ಲಿ ಸುಲ್ತಾನನು ತನಗೆ ನಡೆದ ಉತ್ಸವಗಳೂ ತನಗೆ ದೊರೆತ ಕಪ್ಪಕಾಣಿಕೆಗಳೂ ಮತ್ತಾರಿಗೂ ದೊರೆಯಲಿಲ್ಲವೆಂದು ಅಚ್ಯುತರಾಯನು ಮತ್ತು ಮಹಾಪ್ರಧಾನಿ ಸಲಕ ತಿರುಮಲರಾಯರೂ ತನ್ನ ಅನುಚರರಂತೆ ನಡೆದುಕೊಂಡರೆಂದು ಹೆಮ್ಮೆ ಕೊಚ್ಚಿಕೊಳ್ಳುತ್ತಾ ವೈಭವದಿಂದ ಬಿಜಾಪುರಕ್ಕೆ ಹಿಂತಿರುಗಿದನು.

ಈ ಸುಲ್ತಾನನ ಉತ್ಸವ ಸಮಾರಂಭಗಳೂ ಅಚ್ಯುತರಾಯನ ಹೀನ ವೃತ್ತಿಯೂ ರಾಜಧಾನಿಯಲ್ಲಿ ಯಾರಿಗೂ ಸರಿಬೀಳಲಿಲ್ಲ. ದರ್ಬಾರಿಗಳೆಲ್ಲರೂ ಅತ್ಯಂತ ಖಿನ್ನರಾದರು. ಕೃಷ್ಣದೇವರಾಯನು ಕಾಲವಾದ ಅತ್ಯಲ್ಪ ಕಾಲದಲ್ಲಿ ಅಚ್ಯುತರಾಯನು ಸಾಮ್ರಾಜ್ಯದ ಖ್ಯಾತಿಯನ್ನೆಲ್ಲಾ ಹಾಳುಮಾಡಿಬಿಟ್ಟನೆಂದು ದೂಷಣೆ ಮಾಡತೊಡಗಿದರು. ಮಹಾರಾಜನನ್ನೂ ಮಹಾಪ್ರಧಾನಿಯನ್ನೂ ಎಲ್ಲರೂ ಅಲಕ್ಷ್ಯದಿಂದ ಕಾಣತೊಡಗಿದರು. ಯಾರೂ ದರ್ಬಾರಿಗೆ ಬರುತ್ತಲೇ ಇರಲಿಲ್ಲ.

ಈ ಅಸಮಾಧಾನವು ವಿರೋಧರೂಪವನ್ನು ತಳೆಯಿತು. ಈ ರಾಜನನ್ನೇ ಸಿಂಹಾಸನದಿಂದ ಉರುಳಿಸಿಬಿಡಬೇಕೆಂದು ಸಾಮಂತರೆಲ್ಲರೂ ಒಟ್ಟುಗೂಡಿದರು. ಅಚ್ಯುತರಾಯನು ರಾಜಧಾನಿಯನ್ನು ಬಿಟ್ಟು ಓಡಿಹೋಗುವಂಥಾ ಪ್ರಸಂಗವು ಪ್ರಾಪ್ತವಾಯಿತು. ಉನ್ನತಾಧಿಕಾರಿಗಳು ಒಟ್ಟುಗೂಡಿ ಕೃಷ್ಣದೇವರಾಯನ ಮಡದಿಯಾದ ಅನ್ನಪೂರ್ಣಾದೇವಿಯ ಉದರದಲ್ಲಿ ಜನಿಸಿದ್ದಂಥಾ ಎಳೆಕೂಸಿಗೆ ಪಟ್ಟಕಟ್ಟಬೇಕೆಂದು ನಿರ್ಧಾರ ಮಾಡಿಕೊಂಡರು. ಅನ್ನಪೂರ್ಣಾದೇವಿಯ ಸಹೋದರನಾದ ಹೋಜೇ ತಿರುಮಲನೆಂಬುವನು ಈ ರಾಜವಿರೋಧಿಗಳ ಗುಂಪಿಗೆ ಮುಖಂಡನಾಗಿ ನಿಂತನು.

ಅಚ್ಯುತರಾಯನು ವಿಜಯನಗರವೆಲ್ಲವೂ ತನಗೆ ವಿರೋಧವಾಗಿರುವುದನ್ನು ತಿಳಿದುಕೊಂಡು ಕೃಷ್ಣದೇವರಾಯನ ಪಟ್ಟಮಹಿಷಿಯಾದ ತಿರುಮಲಾಂಬೆಯನ್ನೂ ಚಿನ್ನಾಂಬೆಯನ್ನೂ ಮರೆಹೊಕ್ಕನು. ಮಹಾರಾಜಾ ಕೃಷ್ಣದೇವರಾಯನು ಎಲ್ಲರ ಸಮ್ಮತಿಯಿಂದ ನನಗೆ ಈ ಸಾಮ್ರಾಜ್ಯ ಪಟ್ಟವನ್ನು ಕಟ್ಟಿಸಿರುತ್ತಾನೆ. ಅನ್ನಪೂರ್ಣಾದೇವಿಯು ಮಹಾರಾಜರ ಪಟ್ಟಮಹಿಷಿಯಲ್ಲ. ಆ ರಾಣಿಯ ಎಳೆ ಮಗುವಿಗೆ ಪಟ್ಟಕಟ್ಟಿಸಿ ಈ ಸಾಮ್ರಾಜ್ಯವನ್ನೇ ಅಪಹರಿಸಬೇಕೆಂದು ಹೋಜೇ ತಿರುಮಲರಾಯನು ಗುಂಪುಕಟ್ಟಿದ್ದಾನೆ. ದುರ್ದೈವವಶಾತ್ ದರಬಾರಿಗಳೆಲ್ಲರೂ ಅವನ ಪಕ್ಷವನ್ನು ಹಿಡಿದಿದ್ದಾರೆ. ಈ ಪ್ರಭುತ್ವವು ನಮ್ಮ ವಂಶಕ್ಕೇ ಇಲ್ಲದಂತಾಗಿ ಹೋಜೇ ತಿರುಮಲನ ಕೈಸೇರುವಂಥಾ ಕಾಲವು ಸನ್ನಿಹಿತವಾಗಿದೆ. ನೀವು ಕಾಪಾಡಬೇಕು. ಇಲ್ಲದಿದ್ದರೆ ನಾನು ದೇಶತ್ಯಾಗಮಾಡಿ ಹೋಗುತ್ತೇನೆ ಎಂದು ಹೇಳಿಕೊಂಡನು.

ಚಿನ್ನಾಂಬೆ ತಿರುಮಲಾಂಬೆಯವರಿಗೆ ಅನ್ನಪೂರ್ಣಾದೇವಿಯ ಎಳೆ ಮಗನಿಗೆ ಪಟ್ಟಕಟ್ಟುವುದು ಸರ್ವಥಾ ಸಮ್ಮತವಾಗಿರಲಿಲ್ಲ. ಅವರು ಅಚ್ಯುತರಾಯನಿಗೆ ಅಭಯಪ್ರದಾನಮಾಡಿದರು. ಚಂದ್ರಗಿರಿಯಲ್ಲಿದ್ದ ತಮ್ಮ ಅಳಿಯಂದಿರಾದ ರಾಮರಾಯನಿಗೂ ಅವರ ತಮ್ಮ ತಿರುಮಲ

ರಾಯನಿಗೂ ಪತ್ರವನ್ನು ಬರೆದು ದೂತರ ಮುಖೇನ ಕಳುಹಿಸಿಕೊಟ್ಟರು. ಅವರಿಬ್ಬರೂ ಕೃಷ್ಣದೇವರಾಯನ ಅಳಿಯಂದಿರು. ರಾಮರಾಯನೂ ತಿರುಮಲರಾಯನೂ ಈ ಸಂದರ್ಭದಲ್ಲಿ ಏನು ಮಾಡಬೇಕೆಂದು ಯೋಚನೆ ಮಾಡಿದರು. ಅನ್ನಪೂರ್ಣಾದೇವಿಯ ಎಳೆ ಮಗನಿಗೆ ಸಾಮ್ರಾಜ್ಯಪಟ್ಟವನ್ನು ಕಟ್ಟುವುದಂತೂ ಅವರಿಬ್ಬರಿಗೂ ಸರ್ವಥಾ ಸಮಾಧಾನವಿರಲಿಲ್ಲ ರಾಣಿಯವರ ಆಹ್ವಾನದಂತೆ ಇಬ್ಬರು ಅಳಿಯಂದಿರೂ ರಾಜಧಾನಿಗೆ ಬಂದು ಸೇರಿದರು. ರಾಜಧಾನಿಯಲ್ಲಿ ಬಹುಮಂದಿ ಉನ್ನತಾಧಿಕಾರಿಗಳಿಗೆ ಅವರ ವಿಷಯದಲ್ಲಿ ವಿಶ್ವಾಸವಿದ್ದಿತು. ರಾಮರಾಯನು ಅಚ್ಯುತರಾಯನೊಡನೆ ಕಲೆತು ಮಾತ ನಾಡಿದರು. ರಾಣಿ ತಿರುಮಲಾಂಬೆಯವರೂ ಚಿನ್ನಾಂಬೆಯವರೂ ಅಚ್ಯುತ ರಾಯನನ್ನು ಕರೆಸಿ ಈ ಸಂದರ್ಭದಲ್ಲಿ ರಾಮರಾಯನಿಗೂ ತಿರುಮಲರಾಯನಿಗೂ ಅಧಿಕಾರವನ್ನು ಒಪ್ಪಿಸಿ ಕಾರ್ಯಸಾಧನೆ ಮಾಡಿಕೊಳ್ಳುವುದು ಒಳ್ಳೆಯದೆಂದು ಸಲಹೆ ಮಾಡಿದರು. ಅಚ್ಯುತರಾಯನು ರಾಮರಾಯನನ್ನು ಮಹಾ ಪ್ರಧಾನಿಯಾಗಿ ನೇಮಿಸಿದನು. ರಾಮರಾಯನು ಅಧಿಕಾರಿಗಳನ್ನೆಲ್ಲಾ ಒಬ್ಬೊಬ್ಬರನ್ನಾಗಿ ವಶಪಡಿಸಿಕೊಂಡನು. ಹೋಜೇ ತಿರುಮಲನನ್ನು ಕರೆಕಳುಹಿಸಿ ಮಾತನಾಡಿದನು. ಕೃಷ್ಣದೇವರಾಯರ ಎಳೆಯ ಮಗನಿಗೆ ಪಟ್ಟಕಟ್ಟಿಸಬೇಕೆಂದು ನೀವು ಮಹಾ ಪ್ರಯತ್ನ ಮಾಡುತ್ತಿದ್ದೀರೆಂದು ಕೇಳಿದ್ದೇನೆ. ಆ ಎಳೆಯ ಕೂಸಿಗೆ ಪಟ್ಟ ಕಟ್ಟುವುದು ಶ್ರೇಯಸ್ಕರವೆಂದು ತಿಳಿದಿದ್ದರೆ ಕೃಷ್ಣದೇವರಾಯರು ಆ ಹುಡುಗನಿಗೇ ಪಟ್ಟಕಟ್ಟಿಸುತ್ತಿದ್ದರು. ರಾಜಮಹಿಷಿ ತಿರುಮಲಾಂಬೆಯವರ ಹೊಟ್ಟೆಯಲ್ಲಿ ಹುಟ್ಟಿದ ತಿರುಮಲ ರಾಯನಿಗೆ ಪಟ್ಟಕಟ್ಟಿಸಿ ಕೃಷ್ಣದೇವರಾಯರು ಮಹಾ ದುಃಖಕ್ಕೆ ಗುರಿಯಾ ದರು. ಈ ಸಮಯದಲ್ಲಿ ಇಂಥಾ ಎಳೆಯ ಹುಡುಗರಿಗೆ ಪಟ್ಟಕಟ್ಟಬಾರದು. ಮುಂದೆ ಅಚ್ಯುತರಾಯರ ಅನಂತರ ಈ ಎಳೆಯ ಹುಡುಗನು ಪ್ರವೃದ್ಧ ಮಾನಕ್ಕೆ ಬಂದಮೇಲೆ ನೋಡಿಕೊಳ್ಳೋಣ ನೀವು ದುರಾಸೆಪಡಬೇಡಿರಿ. ಒಂದು ದಿನವೂ ಈ ಸಾಮ್ರಾಜ್ಯವನ್ನು ನೀವು ಉಳಿಸಿಕೊಳ್ಳಲಾರಿರಿ. ನಿಮಗೆ ಐಶ್ವರ್ಯದ ಆಸೆಯಿದ್ದರೆ, ಬೇಕಾದಷ್ಟು ಐಶ್ವರ್ಯವನ್ನು ಕೊಡಿಸುತ್ತೇನೆ.

ಈ ಪ್ರಯತ್ನಕ್ಕೆ ಕೈಹಚ್ಚಬೇಡಿರಿ. ದೈವವಿಲಾಸವು ಹೇಗಿದೆಯೆಂಬುದನ್ನು ಯಾರೂ ಅರಿಯರು. ಈ ಎಳೆಯ ಮಗುವನ್ನು ಯಾರಾದರೂ ಕೊಲೆ ಮಾಡಿಬಿಟ್ಟರೆ ಕೃಷ್ಣದೇವರಾಯರ ಅಂಕುರವೇ ನಾಶವಾದಂತಾಗುತ್ತದೆ. ಅದಕ್ಕೆ ನೀವೇ ಕಾರಣಭೂತರಾದಂತಾಗುತ್ತದೆ ಎಂದು ಹೇಳಿದನು.

ಹೋಜೇ ತಿರುಮಲರಾಯನು ನನಗೆ ರಾಜ್ಯದಾಹವೂ ಇಲ್ಲ. ಐಶ್ವರ್ಯದ ಆಸೆಯೂ ಇಲ್ಲ. ಈ ಅಚ್ಯುತರಾಯನು ಸಾರ್ವಭೌಮ ಸಿಂಹಾಸನಕ್ಕೆ ಅರ್ಹನೆಂದು ಯಾರೂ ಒಪ್ಪುವುದಿಲ್ಲ. ನೀವಾದರೂ ಇದನ್ನು ಹೇಗೆ ಒಪ್ಪುತ್ತೀರಿ. ಆದಿಲ್‌ಷಹನನ್ನು ರಾಜಧಾನಿಗೆ ಬರಮಾಡಿಕೊಂಡು ಸಾರ್ವಭೌಮರ ಮಾನಮನ್ನಣೆಗಳನ್ನೆಲ್ಲಾ ಅವನಿಗೆ ಸಲ್ಲಿಸಿ ಸಿಂಹಾಸನದ ಗೌರವವನ್ನು ಹಾಳುಮಾಡಿದ್ದಾರೆ. ಈ ರಾಜ್ಯಕ್ಕೆ ನಿಮ್ಮಂತೆಯೇ ನಾನು ಅಭಿಮಾನಶಾಲಿ. ಕೃಷ್ಣದೇವರಾಯರ ಭಾವಮೈದುನ ನಾನು. ಅವರ ಅಳಿಯಂದಿರು ನೀವು. ನಾವಿಬ್ಬರೂ ಸಮಾನರು. ಈ ಅಚ್ಯುತರಾಯನಿಗೂ ನಮಗೂ ಏನು ಸಂಬಂಧ? ಈ ರಾಜ್ಯದಲ್ಲಿ ಯಾರಾದರೂ ಸಂಪ್ರತಿಪನ್ನರು ಈ ಅಚ್ಯುತರಾಯನ ಹೀನಕೃತ್ಯಗಳನ್ನು ಒಪ್ಪುವರೇ? ನೀವೇ ಮಾತನಾಡಿ ನೋಡಿರಿ. ಅಚ್ಯುತರಾಯನ ಭಾವಮೈದುನರಂತೂ ವಿಚಿತ್ರ ವ್ಯಕ್ತಿಗಳು. ಉತ್ತರನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಾರೆ. ಅವರಿಗಿರುವಷ್ಟು ಧನದಾಹವು ಮತ್ತಾರಿಗೂ ಇಲ್ಲ. ಅಂಥವರ ಕೈಲಿ ಈ ಅಚ್ಯುತರಾಯನು ಆಟದ ಬೊಂಬೆಯಾಗಿದ್ದಾನೆ. ಈ ಸಾಮ್ರಾಜ್ಯದಲ್ಲಿ ಯಾರಾದರೂ ಈ ಸಲಕ ತಿರುಮಲರನ್ನು ಗೌರವಿಸುವರೇ? ನೀವೇ ಹೇಳಿರಿ."

ರಾಮರಾಯನು ಹೋಜೇ ತಿರುಮಲರಾಯರೇ! ಆದಿಲ್‌ಷಹನನ್ನು ರಾಜಧಾನಿಗೆ ಬರಮಾಡಿದ್ದು ನನಗೂ ಸರ್ವಥಾ ಸಮ್ಮತವಿಲ್ಲ. ಈ ಸಾಮ್ರಾಜ್ಯದ ಸಹಕಾರವೆಲ್ಲಾ ದೊರೆತರೆ ಆ ಆದಿಲ್‌ಷಹನನ್ನು ಮೂಲೆಯಲ್ಲಿ ಕೂಡಿಸಿ ವಿಜಯನಗರ ಮತ್ತೆ ಬೆಳಗುವಂತೆ ಮಾಡುತ್ತೇನೆ. ಸಲಕ ಸಹೋದರರನ್ನು ರಾಜಧಾನಿಯಿಂದ ಓಡಿಸುತ್ತೇನೆ ಎಂದು ಹೇಳಿದನು.

ಹೋಜೆ ತಿರುಮಲನು ರಾಮರಾಯರೇ ನಿಮ್ಮ ಸಿಹಿಮಾತುಗಳಿಗೆಲ್ಲಾ ನಾನು ಮರುಳಾಗುವವನಲ್ಲ. ನಾನೊಬ್ಬನೇ ಉಳಿದರೂ ಕಡೆಯತನಕ ನಾನು ಅಚ್ಯುತರಾಯನ ವಿರೋಧಿಯೇ. ನೀವು ಹೇಳಿದ ಕಾರ್ಯಗಳನ್ನೆಲ್ಲಾ ಮಾಡಿತೋರಿಸಿ. ಅದುವರೆಗೆ ನನ್ನನ್ನು ಮಾತನಾಡಿಸಬೇಡಿ ಎಂದು ಹೇಳಿ ಹೊರಟುಹೋದನು.

ರಾಮರಾಯನು ಅಧಿಕಾರವನ್ನು ಕೈಗೆ ತೆಗೆದುಕೊಳ್ಳುತ್ತಲೇ ಸಾಮಂತರೂ ಉನ್ನತಾಧಿಕಾರಿಗಳೂ ಒಬ್ಬೊಬ್ಬರಾಗಿ ರಾಮರಾಯನ ಪಕ್ಷಕ್ಕೆ ಬಂದು ಸೇರಿದರು. ಹೋಜೇ ತಿರುಮಲನ ಕಡೆಗೆ ಇಲ್ಲದಂತಾಯಿತು. ಆದರೂ ಅವನು ನಿರ್ಭಯವಾಗಿ ಅಚ್ಯುತರಾಯನನ್ನೂ ಸಲಕ ಸಹೋದರರನ್ನೂ ದೂಷಣೆ ಮಾಡುತ್ತಾ ಅಚ್ಯುತರಾಯನ ರಾಜ್ಯಭಾರವನ್ನು ಕೊನೆಮುಟ್ಟಿ ಸುತ್ತೇನೆ ಎಂದು ಹೇಳುತ್ತಾ ಓಡಿಯಾಡುತ್ತಿದ್ದನು. ರಾಮರಾಯನು ಅವನೊಬ್ಬ ಹುಚ್ಚು ಮನುಷ್ಯ. ಅವನನ್ನು ಯಾರೂ ಕೆಣಕಬೇಡಿರಿ ಎಂದು ಸಮಾಧಾನ ಹೇಳುತ್ತಿದ್ದನು. ದರಬಾರಿಗಳೆಲ್ಲರೂ ಆ ಹೋಜೆ ತಿರುಮಲ ರಾಯನನ್ನು ಹುಚ್ಚು ತಿರುಮಲ ಹುಚ್ಚು ತಿಮ್ಮಣ್ಣ ಎಂದು ವ್ಯಂಗ್ಯನಾಮ ದಿಂದ ಕರೆಯುತ್ತಿದ್ದರು. ರಾಜಧಾನಿಯಲ್ಲಿ ಎಲ್ಲವೂ ಸಮಾಧಾನ ವಾಗುತ್ತಲೇ ರಾಮರಾಯನೂ ಅವನ ತಮ್ಮ ತಿರುಮಲರಾಯನೂ ಚಂದ್ರಗಿರಿಗೆ ಹಿಂತಿರುಗಿ ಹೋಗುತ್ತೇವೆಂದು ನಿಶ್ಚಯಮಾಡಿದರು. ರಾಣಿಯರನ್ನು ಕಂಡು ತಮ್ಮ ಊರಿಗೆ ಹಿಂತಿರುಗಲು ಅಪ್ಪಣೆಯನ್ನು ಬೇಡಿದನು. ಹೋಜೆ ತಿರುಮಲರಾಯನಿಗೆ ಈಗ ಯಾವ ಬೆಂಬಲವೂ ಇಲ್ಲ. ಅವರ ಕಡೆಗೆ ಸೇರಿದವರೆಲ್ಲಾ ನಮ್ಮ ಕಡೆಗೆ ಬಂದುಬಿಟ್ಟಿದ್ದಾರೆ. ಅಚ್ಯುತರಾಯರು ನಿರಾತಂಕವಾಗಿ ರಾಜ್ಯಭಾರ ನಡೆಸಬಹುದು ಎಂದು ಹೇಳಿ ಅಪ್ಪಣೆಯನ್ನು ಪಡೆದರು. ಅಚ್ಯುತರಾಯನು ಅವರಿಬ್ಬರನ್ನು ರಾಜಧಾನಿಯಲ್ಲಿರಬೇಕೆಂದು ಎಷ್ಟೋ ವಿಧವಾಗಿ ಕೇಳಿಕೊಂಡನು. ಅವರು ನಾವು ಇಲ್ಲಿರುವುದು ಅಷ್ಟು ಹಿತಕರವಲ್ಲ. ರಾಜರ ಅಳಿಯಂದಿರ ಪ್ರಾಬಲ್ಯವು ಹೆಚ್ಚಾಗಿದೆಯೆಂದು ಜನರಲ್ಲಿ ಅಸಮಾಧಾನವು ಮೂಡುತ್ತದೆ. ನಿಮ್ಮ

ಭಾವಮೈದುನರುಗಳಾದ ಸಲಕ ಸಹೋದರರುಗಳ ಪ್ರಭಾವವು ಹೆಚ್ಚಾದುದ ರಿಂದಲೇ ಈ ರಾಜ್ಯದಲ್ಲಿ ಇಷ್ಟು ಅನರ್ಥಗಳಿಗೆ ಕಾರಣವಾಯಿತು. ಇಂಥಾ ರಾಜಬಂಧುಗಳು ಉನ್ನತಾಧಿಕಾರಗಳಲ್ಲಿ ಇರಬಾರದು. ಈಗ ನಿಮಗಾರೂ ವಿರೋಧಿಗಳಿಲ್ಲ. ಹೋಜೇ ತಿರುಮಲನ ಮಾತಿಗೆ ಯಾರೂ ಬೆಲೆ ಕೊಡುವರಿಲ್ಲ. ಆದಿಲ್‌ಷಹರ ವಿಷಯದಲ್ಲಿ ಮಾತ್ರಾ ಜಾಗರೂಕರಾಗಿರಬೇಕು. ಈ ಸುಲ್ತಾನರುಗಳು ವಿಜಯನಗರಕ್ಕೆ ಯಾವಾಗಲೂ ಶತ್ರುಗಳು. ಪುನಃ ಅವರಿಂದ ಆತಂಕ ಒದಗಿದರೆ ನಾವು ಬಂದು ಯುದ್ಧಕ್ಕೆ ನಿಲ್ಲುತ್ತೇವೆ ಎಂದು ಹೇಳಿ ಅಚ್ಯುತರಾಯನನ್ನು ಒಪ್ಪಿಸಿ ಚಂದ್ರಗಿರಿಗೆ ಹೊರಡಲು ಸಿದ್ಧರಾದರು. ಅಚ್ಯುತರಾಯನು ರಾಮರಾಯರು ತನಗೆ ಮಾಡಿದ ಉಪಕಾರಕ್ಕಾಗಿ ಇನ್ನು ಮೇಲೆ ಚಂದ್ರಗಿರಿಯು ಸ್ವತಂತ್ರವಾಗಿ ರಾಮರಾಯರ ರಾಜ್ಯವೇ ಆಗಿರ ತಕ್ಕದ್ದೆಂದು ರಾಮರಾಯರು ವಿಜಯನಗರಕ್ಕೆ ಕಪ್ಪಕಾಣಿಕೆಗಳನ್ನು ಸಲ್ಲಿಸ ತಕ್ಕದ್ದಿಲ್ಲವೆಂದೂ ವಿಜಯನಗರದಿಂದಲೇ ಅಳಿಯಂದಿರಿಬ್ಬರಿಗೂ ವಾರ್ಷಿಕ ಸಂಭಾವನೆಯು ಸಲ್ಲತಕ್ಕದ್ದೆಂದೂ ರಾಯಸವನ್ನು ಬರೆಸಿ ಸಾರ್ವಭೌಮ ಮುದ್ರೆಯನ್ನು ಒತ್ತಿಸಿ ರಾಮರಾಯನಿಗೆ ಕೊಟ್ಟನು. ಅಮೂಲ್ಯವಾದ ಧನಕನಕಗಳನ್ನೂ ಐಶ್ವರ್ಯವನ್ನೂ ಅವರಿಗೆ ಪುರಸ್ಕಾರವಾಗಿ ಕೊಟ್ಟು ಕಳಿಸಿದನು.

ಇಬ್ಬರು ಸಹೋದರರೂ ಚಂದ್ರಗಿರಿಗೆ ಹಿಂತಿರುಗಿ ಹೋದರು.

# ೧೨

ರಾಮರಾಯನು ರಾಜಧಾನಿಯನ್ನು ಬಿಟ್ಟುಹೋದಮೇಲೆ ರಾಜ್ಯಾಡಳಿತದ ಬಿಗಿಯು ಸಡಿಲವಾಗುತ್ತ ಬಂದಿತು. ರಾಮರಾಯನು ರಾಜಧಾನಿಯನ್ನು ಬಿಟ್ಟುಹೋಗಲು ಅನೇಕ ಕಾರಣಗಳಿದ್ದವು. ಅವನ ಪತ್ನಿಯಾದ ತಿರುಮಲಾಂಬೆಯು ತನ್ನ ತಾಯಿಯ ಸಮೀಪದಲ್ಲಿಯೇ ಇರಲು ವಿಶೇಷ ಆಸಕ್ತಳಾಗಿದ್ದಳು ಅದಕ್ಕೆ ಕಾರಣವು ಇಷ್ಟೆ. ತಿರುಮಲಾಂಬಿಕೆ ಚಿನ್ನಾಂಬಿಕೆಯರು ಒಂದಾಗಿದ್ದರು ಚಂಚಲಮನಸ್ಸಿನವನಾದ ಅಚ್ಯುತರಾಯನು ಒಂದು ಬಾರಿ ಅವರನ್ನು ವಿಶೇಷ ಗೌರವದಿಂದ ಕಾಣುತ್ತಿದ್ದನು. ಮತ್ತೊಂದು ಬಾರಿ ಅಲಕ್ಷ್ಯವಾಗಿ ನೋಡುತ್ತಿದ್ದನು. ಸಲಕ ಸಹೋದರರುಗಳ ಸ್ವಾರ್ಥಪರತೆ ಧನದಾಹ, ದರಬಾರಿನ ಅಧಿಕಾರಿಗಳಲ್ಲಿ ಪಕ್ಷಪಾತ ಇವೆಲ್ಲವೂ ರಾಣಿಯರಿಗೆ ಸರಿಬೀಳುತ್ತಿರಲಿಲ್ಲ. ತನ್ನ ಸ್ವಂತ ಚಾಂಚಲ್ಯದಿಂದಲೋ ಅಥವಾ ಶತ್ರುಗಳ ಭಯದಿಂದಲೋ ಅಚ್ಯುತರಾಯನು ಈ ರಾಣಿಯರ ಮರೆಹೊಕ್ಕು ರಾಮರಾಯನನ್ನೂ ತಿರುಮಲರಾಯನನ್ನೂ ಕರೆಸಿಕೊಂಡು ಅಧಿಕಾರ ಕೊಟ್ಟಿದ್ದನು. ಇದರಿಂದ ಇಬ್ಬರು ರಾಣಿಯರ ಪ್ರಭಾವವು ಹೆಚ್ಚಾಗಿದ್ದಿತು. ರಾಮರಾಯನು ರಾಜಧಾನಿಯಿಂದ ಹೊರಟುಹೋದರೆ ರಾಣಿಯರ ಪ್ರಭಾವವು ಕುಂದಿಹೋಗುವುದೆಂದು ತಿರುಮಲಾಂಬೆಗೆ ಅಂತರಂಗ ಭೀತಿ ಇತ್ತು. ಅವಳು ತನ್ನ ಪತಿಯಾದ ರಾಮರಾಯನೊಡನೆ ಸ್ಪಷ್ಟವಾಗಿ ತನ್ನ ಮನೋಗತವನ್ನು ತಿಳಿಯಪಡಿಸಿ ಮಾತೃವರ್ಗದವರ ಅಭಿಮತವು ಹಾಗೆಯೇ ಇರುವುದೆಂದು ತಿಳಿಸಿದಳು. ರಾಮರಾಯನ ಸಹೋದರನಾದ ತಿರುಮಲರಾಯನ ಅಂತರಂಗದಲ್ಲಿಯೂ ತಾವು ರಾಜಧಾನಿಯನ್ನು ಬಿಟ್ಟು

ಹೋಗಬಾರದೆಂದೇ ಅಭಿಪ್ರಾಯವಿತ್ತು. ಆವನು ಅಣ್ಣನೊಡನೆ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿಯೇ ಅರುಹಿದನು. ಈ ರಾಜ್ಯದಲ್ಲಿ ಉಲ್ಬಣ ವಾದ ಕ್ಷೋಭೆ ಎದ್ದಿತ್ತು. ನಾವು ಇಲ್ಲಿಗೆ ಬಂದ ಮೇಲೆ ಶಾಂತಿಯಾಗಿದೆ. ಸಲಕ ಸಹೋದರರು ನಮಗೆ ಅಂಜಿ ಯಾವ ದುಷ್ಕೃತ್ಯಗಳಿಗೂ ದುಡುಕದೇ ಮರೆಯಲ್ಲಿದ್ದಾರೆ. ಅನ್ನಪೂರ್ಣಾದೇವಿಯರ ಮಹತ್ವಾಕಾಂಕ್ಷೆಯು ಬುಡವಿಲ್ಲ ದ್ದೇನೂ ಅಲ್ಲ. ಹೋಜೇ ತಿರುಮಲನ ಕ್ರೋಧ ದ್ವೇಷ ಪ್ರಲಾಪಗಳನ್ನು ನೀವು ಅಸಡ್ಡೆ ಮಾಡಬಹುದು. ಆದರೆ ಅನ್ನಪೂರ್ಣಾದೇವಿಯ ಮಹತ್ವಾ ಕಾಂಕ್ಷೆಯು ಬೂದಿಮುಚ್ಚಿದ ಕೆಂಡದಂತೆ ಒಳಗೊಳಗೆ ಜ್ವಲಿಸುತ್ತಲೇ ಇದೆ. ನಾವು ಸಾಮ್ರಾಜ್ಯದ ನೆಮ್ಮದಿಯನ್ನು ರಕ್ಷಣೆ ಮಾಡುವುದಕ್ಕೆ ಬಂದು ಮಧ್ಯದಲ್ಲಿ ಕೈಬಿಟ್ಟುಹೋದರೆ ತಪ್ಪಾರದು? ಈಗ ನಾವು ರಾಜಧಾನಿಯನ್ನು ಪರಿತ್ಯಜಿಸಿ ಹೋಗುವಂಥಾ ಕಾರಣವೇನು ಬಂದಿದೆ ಎಂದು ತಿರುಮಲ ರಾಯನು ಪ್ರತಿಭಟಿಸಿದನು.

ರಾಮರಾಯನು ತನ್ನ ಸಹೋದರನನ್ನು ಕರೆದುಕೊಂಡುಹೋಗಿ ರಾಣಿಯರ ಸಂದರ್ಶನ ಮಾಡಿದನು. "ಮಾತೋಶ್ರೀಯವರುಗಳೇ ನಾನು ಈ ರಾಜಧಾನಿಯಿಂದ ಚಂದ್ರಗಿರಿಗೆ ಪ್ರಯಾಣಮಾಡಲು ತಮ್ಮ ಅನುಮತಿ ಬೇಡುವುದಕ್ಕಾಗಿ ಬಂದಿದ್ದೇನೆ" ಎಂದನು.

ರಾಣಿಯವರು "ಅಂಥಾ ಪ್ರಸಂಗ ಏನು ಬಂದಿದೆ. ಅಳಿಯಂದಿರ ಮನಸ್ಸಿಗೆ ಖೇದವನ್ನುಂಟುಮಾಡುವ ಯಾವುದಾದರೂ ಪ್ರಸಂಗ ಒದಗಿ ದೆಯೋ? ನಮ್ಮೆಲ್ಲರ ಧೈರ್ಯಕ್ಕೆ ನೀವೇ ಆಧಾರವಾಗಿದ್ದೀರಿ" ಎಂದು ನಮ್ರತೆಯಿಂದ ಹೇಳಿದರು.

ರಾಮರಾಯನು ಅರಮನೆಯಲ್ಲಾಗಲೀ ರಾಜಧಾನಿಯಲ್ಲಾಗಲೀ ರಾಜ್ಯದಲ್ಲಾಗಲೀ ನಮಗೆ ಖೇದವನ್ನುಂಟುಮಾಡುವ ಅಥವಾ ಅಪಮಾನ ಕರವಾದ ಯಾವ ಪ್ರಸಂಗವೂ ಒದಗಿಲ್ಲ. ಈ ರಾಜಧಾನಿಯಲ್ಲಿ ಹುಟ್ಟಿದ್ದ ಅಸಮಾಧಾನವೆಲ್ಲವೂ ಶಾಂತವಾಗಿದೆ. ಆದರೆ ಈ ರಾಜ್ಯದ ಶುಭೋದಯವು ನನ್ನ ಕಣ್ಣಿಗೆ ಗೋಚರವಾಗುತ್ತಿಲ್ಲ. ಈ ಅಚ್ಯುತರಾಯನು ದಿನದಿನಕ್ಕೆ

ನಿಸ್ಸತ್ವನಾಗುತ್ತಿದ್ದಾನೆ. ಇನ್ನುಮುಂದೆ ಚಕ್ರವರ್ತಿ ಪದವಿಗೆ ಇವನು ಅನರ್ಹನೆಂದೇ ಹೇಳಬೇಕಾಗುತ್ತದೆ. ಕೃಷ್ಣದೇವರಾಯರ ಪ್ರಭಾವದಿಂದ ಮಂಡಲೇಶ್ವರರೂ ದಂಡನಾಯಕರೂ ಎಲ್ಲರೂ ಅಧೀನರಾಗಿದ್ದರು. ಅವರು ಗಳೆಲ್ಲಾ ಸತ್ಯಶಾಲಿಗಳಾಗಿದ್ದಾರೆ. ಪ್ರಭಾವಯುತರಾಗಿದ್ದಾರೆ ಅವರು ಪ್ರತ್ಯಕ್ಷವಾಗಿ ಬಂದು ಅಚ್ಯುತರಾಯನ ವಿಚಾರವನ್ನು ಮಾತನಾಡಿದರೆ ಆತ್ಮಸಾಕ್ಷಿಯಾಗಿ ನಾನೇನು ಉತ್ತರ ಕೊಡಬಲ್ಲೆ. ಅಷ್ಟೇ ಅಲ್ಲ–ಈಗಾಗಲೇ ಈ ಸಿಂಹಾಸನಕ್ಕೆ ಮುಂದಿನ ಅಧಿಕಾರಿಗಳಾರೂ ಎಂಬ ವಿಚಾರವು ಎಲ್ಲರ ಮನಸ್ಸಿನಲ್ಲಿಯೂ ಬಂದುಹೋಗಿದೆ. ಈ ವಿಚಾರವು ಉತ್ಪನ್ನವಾಗುವುದೇ ಅಶುಭ ಸೂಚನೆಯೆಂದು ನನಗನಿಸುತ್ತದೆ. ಮುಂದಿನ ರಾಜರಾರು? ಅನ್ನಪೂರ್ಣಾದೇವಿಯರ ಎಳೆಯ ಮಗನೇ? ಅಥವಾ ಅಚ್ಯುತರಾಯರ ಮಗನೇ? ಅಥವಾ ಕೃಷ್ಣದೇವರಾಯರ ಮತ್ತೊಬ್ಬ ತಮ್ಮ ರಂಗರಾಯರ ಮಗ ಸದಾಶಿವರಾಯನೇ? ಅವನು ಪ್ರೌಢವಯಸ್ಕನಾಗಿದ್ದಾನೆ. ಈ ಜಿಜ್ಞಾಸೆಯು ಆರಂಭವಾಗುವುದೇ ನನ್ನ ಮನಸ್ಸಿಗೆ ಹಿತವೆನಿಸುವುದಿಲ್ಲ. ಎಷ್ಟು ದಿನ ಈ ವಿಚಾರಗಳಲ್ಲಿ ನಾನು ಕಣ್ಣುಮುಚ್ಚಿಕೊಂಡು ಎಷ್ಟು ದಿನ ಕುಳಿತಿದ್ದರಾದೀತು? ಕಣ್ಣುಮುಚ್ಚಿಕೊಂಡು ಕುಳಿತಿದ್ದರೂ ಈ ಪ್ರವಾಹವು ಹರಿದೇ ಹರಿಯುತ್ತದೆ. ಆಗ ನಾನೂ ಅಚ್ಯುತರಾಯನಂತೆ ನಿಸ್ಸತ್ವ ನಾಗುತ್ತೇನೆ. ಇಲ್ಲದಿದ್ದರೆ ಯಾವುದಾದರೊಂದು ಪಕ್ಷವನ್ನು ನಾನು ಅವಲಂಬಿಸಬೇಕು ಯಾವುದೂ ನನ್ನ ಮನಸ್ಸಿಗೆ ಸರಿತೋರದಾಗಿದೆ. ವಿರೂಪಾಕ್ಷನೇ ದಿಕ್ಕು ತೋರಿಸಬೇಕು. ನಿಮ್ಮ ಮಗಳು ತಿರುಮಲಾಂಬೆಯು ರಾಣಿವಾಸದವರ ಆತಂಕವನ್ನು ನನ್ನೊಡನೆ ಹೇಳಿದ್ದಾಳೆ. ನೀವುಗಳು ಹೀಗೆಯೇ ಮಾಡಬೇಕೆಂದು ಹೇಳುವ ಅಧಿಕಾರ ನನಗಿಲ್ಲ. ಅದನ್ನು ವಿಚಾರ ಮಾಡುವ ಸಮಯವು ಇನ್ನೂ ಪ್ರಾಪ್ತವಾಗಿಲ್ಲ. ಅಚ್ಯುತರಾಯನು ಮಾನವತೆಯಿಂದ ಉತ್ತಮನಾದ ಮನುಷ್ಯನೇ. ಅವನು ನಿಮ್ಮಗಳ ವಿಷಯದಲ್ಲಿ ಇಟ್ಟಿರುವ ಗೌರವವನ್ನು ತನ್ನ ಆಜೀವಪರ್ಯಂತ ನಡೆಸಿ ಕೊಂಡು ಬರುತ್ತಾನೆ ನಿಮ್ಮ ಸಾನ್ನಿಧ್ಯದಿಂದ ಅವನಿಗೆ ವಿಶೇಷ

ಪ್ರಯೋಜನವೂ ಇದೆ. ನೀವಿಲ್ಲಿರುವುದು ಅವನ ಗೌರವವನ್ನು ಹೆಚ್ಚಿಸುತ್ತ ದೆಂಬುದು ಮಾತ್ರವಲ್ಲ. ನಿಮ್ಮ ಸನ್ನಿಧಾನವು ಅವನಿಗೆ ರಕ್ಷಾಕವಚ ವಿದ್ದಂತೆ ರಾಜಧಾನಿಯಲ್ಲಿ ಪ್ರತಿಯೊಬ್ಬ ದೊಡ್ಡಮನುಷ್ಯನಿಗೂ ಸಣ್ಣ ಮನುಷ್ಯನಿಗೂ ಕೃಷ್ಣದೇವರಾಯರಲ್ಲಿ ಅಪಾರ ಭಕ್ತಿಯಿತ್ತು. ಆ ಭಕ್ತಿಯು ನಿಮ್ಮ ಕಡೆಗೆ ಕೇಂದ್ರೀಕೃತವಾಗಿದೆ. ಹೆಚ್ಚೇಕೆ ಹುಚ್ಚು ತಿರುಮಲನು ಕೂಡಾ ನಿಮ್ಮಗಳ ವಿಷಯದಲ್ಲಿ ಪೂಜ್ಯಭಾವದಿಂದ ಮಾತ ನಾಡುತ್ತಾನೆ. ದುರದೃಷ್ಣವಶಾತ್ ನಿಮ್ಮ ಮನಸ್ಸಿಗೆ ಖೇದ ಉಂಟಾದರೆ ಆಯಾಸವಾದರೆ ನೀವು ತಿರುಪತಿ ಕ್ಷೇತ್ರಕ್ಕೆ ಹೊರಟು ಬರಬಹುದು. ಕೃಷ್ಣದೇವರಾಯರು ದೇವಾಂಶ ಸಂಭೂತರೆಂಬುದಕ್ಕೆ ಅದೂ ಒಂದು ಮುಖ್ಯ ನಿದರ್ಶನ. ಅವರು ನಿಮ್ಮಗಳೊಡಗೂಡಿ ತಿರುಪತಿ ಕ್ಷೇತ್ರಕ್ಕೆ ಬಂದು ನೆಲೆಸಿದ ಜ್ಞಾಪಕವು ನಿಮಗಿರಬಹುದು. ಅವರು ಆಮರಣಾಂತ ಅಲ್ಲಿಯೇ ಇದ್ದು ಭಗವತ್ಸೇವೆಯಲ್ಲಿ ಕಾಲ ಕಳೆಯಬೇಕೆಂದು ನಿಶ್ಚಯಿಸಿದ್ದರು. ಹಾಗೆ ದೇವರ ಆಜ್ಞೆಯಾಗಿದೆಯೆಂದು ಅವರು ಬಾಯಿಬಿಟ್ಟು ಹೇಳುತ್ತಿದ್ದರು. ಆ ಸಮಯದಲ್ಲಿ ವಿಜಯನಗರದ ಸಾಮ್ರಾಜ್ಯವೈಭವವು ಮೇರು ಪರ್ವತ ದಂತೆ ಅತ್ಯುನ್ನತವಾಗಿದ್ದಿತು ಆ ಪಾಪಿ ಆದಿಲ್‌ಷಹನು ಅದನ್ನು ಕಲಕಿದ. ದುರದೃಷ್ಟಶಾಲಿ. ಸಾಲ್ವ ತಿಮ್ಮರಸನು ಬಲಾತ್ಕರಿಸಿ ಮಹಾರಾಜರನ್ನು ಹಿಂದಕ್ಕೆ ಕರೆತಂದ. ಭಗವಂತನ ಆಜ್ಞೆಯಾಗಿದೆಯೆಂದು ಮಹಾರಾಜರು ಹೇಳಿದ್ದು ಈಗ ಸತ್ಯವೆಂದು ನನಗೆ ತೋರುತ್ತದೆ. ಆ ಆಜ್ಞೆಗೆ ವಿರೋಧ ವಾಗಿ ಮಹಾರಾಜರು ಆ ಕ್ಷೇತ್ರವನ್ನು ಬಿಟ್ಟು ಹಿಂತಿರುಗಿ ಬಂದುದ ರಿಂದಲೇ ಅನರ್ಥ ಪರಂಪರೆಗಳು ಸಂಭವಿಸಿದವು. ಅಂಥಾ ದುಷ್ಕಾಲವು ಪ್ರಾಪ್ತವಾದರೆ ಆ ಭಗವದಾಜ್ಞೆಯನ್ನು ನೀವು ಪಾಲಿಸಬಹುದು ಎಂದು ಹೇಳಿದನು.

ಮೊಟ್ಟಮೊದಲು ಸಹೋದರ ತಿರುಮಲರಾಯನು ಅಣ್ಣನ ಮಾತು ಗಳು ದೈವವಾಣಿಯೆಂದು ತಲೆಬಾಗಿದನು ಅವನ ಮನಸ್ಸು ಈ ಸಾಮ್ರಾಜ್ಯ ವನ್ನೇ ತನಗೆ ಕೊಟ್ಟರೂ ಬೇಡವೆನ್ನುವಷ್ಟು ದೃಢವಾಯಿತು. ರಾಣಿಯರು

ಮೌನದಿಂದ ರಾಮರಾಯನ ಮಾತುಗಳನ್ನು ಒಪ್ಪಿಕೊಂಡರು. ರಾಮರಾಯನು ರಾಣಿಯರಿಗೆ ನಮಸ್ಕರಿಸಿ ಹೊರಟನು.

ರಾಜಧಾನಿಯ ವೃದ್ಧ ಮಂತ್ರಿಗಳೂ ಸಾಮಂತರೂ ರಾಮರಾಯನು ರಾಜಧಾನಿಯನ್ನು ಬಿಟ್ಟು ಹೋಗುವುದನ್ನು ಮನಃಪೂರ್ವಕವಾಗಿ ನಿರೋಧಿಸಿದರು. ರಾಮರಾಯನು ಸಂದಿಗ್ಧಸಮಯವು ಪ್ರಾಪ್ತವಾದರೆ ಹಿರಿಯರಾದ ನೀವೆಲ್ಲರೂ ಅಪೇಕ್ಷಿಸಿದರೆ ನಾನು ಮತ್ತೆ ಬರುತ್ತೇನೆ ಚಂದ್ರಗಿರಿಯೇನು ದೂರವೇ ಅದೂ ನಿಮ್ಮದೇ–ನೀವು ಕೂಗು ಹಾಕಿದರೆ ಅಲ್ಲಿಗೆ ಆ ಧ್ವನಿಯು ಕೇಳಿಸುತ್ತದೆ ಎಂದು ಅವರನ್ನು ಸಮಾಧಾನಗೊಳಿಸಿದನು. ಕಟ್ಟಕಡೆಯಲ್ಲಿ ಅಚ್ಯುತರಾಯನ ದರ್ಶನಮಾಡಿ ಮಹಾರಾಜರು ಕರೆದಾಗ ಸೇವೆಗೆ ಸಿದ್ಧನಾಗಿ ಬರುತ್ತೇನೆಂದು ವಚನವಿತ್ತನು. ಅಚ್ಯುತರಾಯನು ಬಲು ಪ್ರಯಾಸದಿಂದ ಒಪ್ಪಿಕೊಂಡನು. ಸಲಕ ಸಹೋದರರು ರಾಮರಾಯನನ್ನು ಬಹಳವಾಗಿ ಗೌರವಿಸಿ ಆತ್ಮೀಯತೆಯನ್ನು ವ್ಯಕ್ತಪಡಿಸಿ ಸಾಗುಗಳಿಸಿದರು. ರಾಮರಾಯನೂ ತಿರುಮಲರಾಯನೂ ತಮ್ಮ ಪತ್ನಿಯರೊಡಗೂಡಿ ರಾಜಧಾನಿಯಿಂದ ಹೊರಟರು ನಗರಕ್ಕೆ ನಗರವೇ ಅವರನ್ನು ಕಳುಹಿಸಿ ಕೊಡಲು ಹಿಂಬಾಲಿಸಿಬಂದಿತು.

ಮಾರ್ಗಮಧ್ಯದಲ್ಲಿ ಹೋಜೇ ತಿರುಮಲನು ಬಂದು ರಾಮರಾಯರ ಭೇಟಿ ಮಾಡಿದನು. ರಾಮರಾಯರೇ ಚಂದ್ರಗಿರಿಗೆ ಹಿಂತಿರುಗಿ ಹೊರಟಿರಾ? ಕಬ್ಬಿಣವನ್ನು ಚಿನ್ನವಾಗಿ ಮಾಡಲು ನೀವು ಸಾಹಸ ಮಾಡಿದಿರಲ್ಲವೇ. ನಿಮ್ಮ ಮನಸ್ಸಿಗೆ ತಾರ್ಕಣೆಗೆ ಬಂದಿತಲ್ಲವೇ? ಅಚ್ಯುತರಾಯನು ಸಭ್ಯನೆಂದು ನೀವು ಆತ್ಮಸಾಕ್ಷಿಯಾಗಿ ಹೇಳಬಲ್ಲಿರಾ? ಆ ಸಲಕ ಸಹೋದರರು ದೊಡ್ಡ ಘಾತುಕರೆಂದೂ ದರೋಡೆಕೋರರೆಂದೂ ನಿಮಗೆ ಗೊತ್ತಾಯಿತಲ್ಲವೇ. ಇಲ್ಲಿಗೆ ಬಂದು ನನ್ನ ಪ್ರಯತ್ನಗಳನ್ನು ಮುರಿದುಹಾಕಿ ನನಗೆ 'ಹುಚ್ಚ'ನೆಂಬ ಬಿರುದು ಕೊಟ್ಟಿರಿ. ಅಂತರಂಗದಲ್ಲಿ ನೀವು ಹುಚ್ಚರಾದಿರಿ ಬಹಿರಂಗದಲ್ಲಿ ನಾನು ಹುಚ್ಚ ಹೋಗಲಿ. ಈಗಲಾದರೂ ಬುದ್ಧಿಬಂದು ನೀವು ಹಿಂತಿರುಗಿ ಹೋಗುತ್ತಿರುವುದು ನನಗೆ ಬಲು ಸಂತೋಷ ಮತ್ತೆ ಈ ಅಚ್ಯುತರಾಯನು

ಬದುಕಿರುವವರೆಗೆ ವಿಜಯನಗರಕ್ಕೆ ಬರಬೇಡಿರಿ. ಈ ಪ್ರಭುತ್ವಕ್ಕೆ ಅಸ್ತಮಾನ ಬಂದಿದೆ. ಇದನ್ನು ಬೆಳಗಿಸುವ ಸಾಮರ್ಥ್ಯವು ನಿಮಗಿಲ್ಲ ಎಂದು ಹೇಳಿದನು

ರಾಮರಾಯನಿಗೆ ಕೋಪ ಬರಲಿಲ್ಲ ಹೋಜೇ ತಿರುಮಲರಾಯರೇ ನಿಮ್ಮನ್ನು ನಾನು ಹುಚ್ಚನೆಂದು ಕರೆದುದುಂಟು. ಅದು ವಿರೋಧದಿಂದಲ್ಲ. ನಿಮ್ಮ ಸಾಚಾ ಸ್ವಭಾವವನ್ನು ನೋಡಿಯೇ ನಾನು ಹುಚ್ಚನೆಂದು ಕರೆದುದು ಈ ಪ್ರಪಂಚದಲ್ಲಿ ಇದ್ದುದನ್ನು ಇದ್ದಂತೆಯೇ ನೋಡುವುದು ಕಷ್ಟ. ನೋಡಲೂ ಬಾರದು ಹಾಗೆ ನೋಡುವವರು ಮಹಾತಪಸ್ವಿಗಳು ಅಥವಾ ಹುಚ್ಚರು. ಆ ಹುಚ್ಚಿನಲ್ಲಿ ನೀವು ಅಪಾಯಕರವಾದ ಕಾರ್ಯಗಳಿಗೆ ಕೈಹಾಕುತ್ತೀರಿ. ಆ ಎಳೆಯ ಪ್ರಾಯದ ಕೂಸಿಗೆ ಪಟ್ಟಕಟ್ಟಿದರೆ ಒಂದಕ್ಕೆ ಸಾವಿರಪಾಲು ವಿರೋಧವು ಹೆಚ್ಚುತ್ತದೆ ಆಗ ನೀವು ಸಾವಿರಪಾಲು ಹುಚ್ಚರಾಗುತ್ತೀರಿ. ಇದು ನಿಮಗೆ ನಾನು ಸ್ನೇಹದಿಂದ ಕೊಡುವ ಎಚ್ಚರಿಕೆ. ಹೋಗಿ ತಿರುಮಲರಾಯರೇ ನನ್ನನ್ನು ಮರೆತುಬಿಡಿ ಎಂದು ಹೇಳಿಕಳುಹಿಸಿದನು.

ರಾಮರಾಯನು ಪರಿವಾರ ಸಮೇತನಾಗಿ ಸುಖವಾಗಿಹೋಗಿ ಚಂದ್ರಗಿರಿಯನ್ನು ಸೇರಿದನು.

ಅಚ್ಯುತರಾಯನ ಮನಸ್ಸು ಯಾವಾಗಲೂ ಶಾಂತವಾಗಿರಲೇ ಇಲ್ಲ. ಅವನು ಎಲ್ಲ ಕಾರ್ಯಗಳಲ್ಲಿಯೂ ಔದಾಸೀನ್ಯದಿಂದಲೇ ಇರುತ್ತಿದ್ದನು. ಅವನು ಅತ್ಯಂತ ಬುದ್ಧಿವಂತನೂ ಹೌದು. ಅವನ ಬುದ್ಧಿಗೆ ಅನುಕೂಲ ಪ್ರತಿಕೂಲ ಪರಿಸ್ಥಿತಿಗಳೆಲ್ಲವೂ ಸ್ಪಷ್ಟವಾಗಿ ಗೋಚರವಾಗುತ್ತಿದ್ದಿತು. ಅದಕ್ಕೆ ಪ್ರತಿಕ್ರಿಯೆಯನ್ನು ಮಾಡುವ ಮನೋದಾರ್ಢ್ಯವು ಅವನಿಗಿರಲಿಲ್ಲ. ತನಗೆ ಸಾಮ್ರಾಜ್ಯಪದವಿಯು ಲಭಿಸಿದ್ದು ಕೂಡಾ ದೇವರ ಕೃಪೆಯಿಂದಲೇ. ಆ ಭಗವಂತನಲ್ಲಿ ಪ್ರತ್ಯಕ್ಷವಾಗಿ ತಾನು ಏನೂ ಅಪಚಾರ ಮಾಡಿಲ್ಲ. ಮುಂದಿನ ಶುಭಾಶುಭಗಳನ್ನು ಅವನೇ ನೋಡಿಕೊಳ್ಳುತ್ತಾನೆ ಎಂಬ ಭಾವನೆಯು ಅವನಲ್ಲಿ ದೃಢವಾಗಿ ನೆಲೆಸಿತ್ತು. ಸಾಮ್ರಾಜ್ಯದಲ್ಲಿ ಎಲ್ಲೆಲ್ಲಿ

ದೇವತಾ ಸಾನ್ನಿಧ್ಯವಿದೆಯೋ ಅಲ್ಲೆಲ್ಲಾ ಅವನ ಉದಾರ ದಾನಗಳು ಅವನ ದೈವಭಕ್ತಿಗೆ ಪ್ರತ್ಯಕ್ಷನಿದರ್ಶನವಾಗಿತ್ತು. ರಾಜ್ಯಭಾರದ ಹೊರೆಯಲ್ಲವೂ ಬೇರೊಬ್ಬರ ಮೇಲಿದ್ದು ಆ ಸೌಭಾಗ್ಯ ಐಶ್ವರ್ಯಗಳು ಮಾತ್ರಾ ಅವನಿಗಿದ್ದಿದ್ದರೆ ಅವನೊಬ್ಬ ಮಹಾರಾಜರ್ಷಿ ಎನಿಸಿಕೊಳ್ಳುತ್ತಿದ್ದನು. ಆದರೆ ದೈವ ಸಂಕಲ್ಪವು ಮಾತ್ರ ಅವನಿಗೆ ಪ್ರತಿಕೂಲವಾಗಿತ್ತೆಂಬುದು ಅವನ ಗೋಚರಕ್ಕೆ ಬಾರದೇಹೋಗಿದ್ದಿತು. ರಾಜ್ಯಭಾರವು ಹೆಜ್ಜೆಹೆಜ್ಜೆಗೂ ಅವನಿಗೆ ಪ್ರತಿಕೂಲ ವಾಗಿಯೆ ಇತ್ತು ಅವನು ಖೇದದಿಂದ ಸರ್ವದಾ ಖಿನ್ನಮನಸ್ಕನಾಗಿ ಇರುತ್ತಿದ್ದನು ಯಾರಾದರೂ ಎದುರಿಗೆ ಬಂದು ಮಾತನಾಡಿದರೆ ಅವರಿಗೆ ಪ್ರಿಯವಾಗಿ ಮಾತನಾಡುತ್ತಿದ್ದನು ಹಾಗೆ ನೆಲೆಯಿಲ್ಲದ ಸ್ಥಿರವಲ್ಲದ ಒಳ್ಳೆಯತನವೂ ಕೂಡಾ ಪ್ರತಿಕೂಲ ಪರಿಣಾಮವನ್ನೇ ಉಂಟುಮಾಡು ತ್ತಿದ್ದಿತು ಶಕ್ತಿಯಿಲ್ಲದಿದ್ದರೂ ರಾಜ್ಯದಲ್ಲಿ ಅವನ ವಿರೋಧಿಯೆಂದರೆ ಹೋಜೆ ತಿರುಮಲ ಅವನು ಹೋಜೆ ತಿರುಮಲನ ವಿಚಾರದಲ್ಲಿ ಆಲೋಚನೆ ಮಾಡುವಾಗ ದ್ವೇಷದಿಂದ ಆಲೋಚನೆ ಮಾಡುತ್ತಿರಲಿಲ್ಲ. ಈ ಪ್ರಭುತ್ವವು ಕೃಷ್ಣದೇವರಾಯನದು. ಅವನಿಗೊಬ್ಬ ಪ್ರವೃದ್ಧಮಾನಕ್ಕೆ ಬಂದ ಮಗನಿದ್ದಿದ್ದರೆ ಸಿಂಹಾಸನವು ಅವನಿಗೆ ಸೇರುತ್ತಿದ್ದಿತು. ಅವನ ಅಂಕುರವು ಉಳಿದುಕೊಂಡಿರುವುದು ಆ ಅನ್ನಪೂರ್ಣಾದೇವಿಯ ತೊಡೆಯ ಮೇಲೆ. ಆ ಕುಮಾರನಿಗೆ ಪಟ್ಟಕಟ್ಟಬೇಕೆಂದು ಹೋಜೆ ತಿರುಮಲನು ಆಶಿಪಡುವುದರಲ್ಲೇನೂ ದೋಷವಿಲ್ಲ ಆದರೆ ಆ ಹುಚ್ಚು ತಿರುಮಲನು ಒಂದು ದಿನವಾದರೂ ಈ ರಾಜ್ಯವನ್ನು ಉಳಿಸಿಕೊಳ್ಳಬಲ್ಲನೇ ? ಕೃಷ್ಣದೇವ ರಾಯನು ನನ್ನ ಕೈಗೆ ಕೊಟ್ಟುಹೋದ ರಾಜ್ಯವನ್ನು ನಾನು ಆ ಹುಚ್ಚನಿಗೆ ಕೊಡುವುದೆಂತು? ಈ ರಾಜ್ಯಕ್ಕೆ ಮುಂದಾರು ದಿಕ್ಕು. ನನಗಿರುವಷ್ಟೇ ಅಧಿಕಾರವು ನನ್ನ ಸೋದರ ರಂಗರಾಯನಿಗೂ ಇದೆ ಈ ಸಲಕ ಸಹೋದರರಿಂದ ಇಷ್ಟು ಅನರ್ಥಗಳಾಗಿವೆಯೆಂದು ಜನರಾಡಿಕೊಳ್ಳುವುದು ನನ್ನ ಕಿವಿಗೂ ಬೀಳುತ್ತದೆ. ಅವರನ್ನು ನಿಗ್ರಹಿಸುವುದೆಂತು? ನಿಗ್ರಹಿ ಸಿದರೂ ಪ್ರಮಾದವೇ ಇವತ್ತು ಸ್ನೇಹಿತರೆಂದುಕೊಳ್ಳುವವರು ನಾಳೆ

ಶತ್ರುಗಳಾಗಿ ನಿಲ್ಲುತ್ತಾರೆ. ಇಂಥಾ ವಿಚಿತ್ರ ಪರಿಸ್ಥಿತಿಯಲ್ಲಿ ತಾನಿದ್ದೇನೆ ಎಂದುಕೊಳ್ಳುತ್ತಿದ್ದನು. ಹೀಗೆ ಸರ್ವದಾ ಖಿನ್ನಮನಸ್ಕನಾದ ಅಚ್ಯುತ ರಾಯನು ತನ್ನ ಮನಃಚಾಂಚಲ್ಯವನ್ನು ಸಮಾಧಾನಪಡಿಸಿಕೊಳ್ಳಲು ಮದ್ಯಪಾನದಲ್ಲಿ ಆಸಕ್ತನಾಗಿದ್ದನು. ಹಾಗೆಯೇ ದಿನದಿನಕ್ಕೆ ಆ ಅಭ್ಯಾಸವು ಬೆಳೆದು ಮಿತಿಮೀರುತ್ತ ಬಂದಿತು. ಸ್ತ್ರೀ ವ್ಯಾಮೋಹವು ಹೆಚ್ಚಾಯಿತು. ಈ ಮದಿರಾಮಾನಿನಿಗಳ ಆಕಾಂಕ್ಷೆಯನ್ನು ಶಮನಮಾಡಿಕೊಳ್ಳಲು ಅವನು ತನ್ನವರಿಂದ ದೂರವಿರುತ್ತಿದ್ದನು. ಕೊನೆಗೆ ಅಲಂಕಾರರಹಿತವಾಗಿ ಹೋಗಿದ್ದ ನಾಗಲಾಪುರಕ್ಕೆಹೋಗಿ ಏಕಾಂತವಾಸ ಮಾಡಲಾರಂಭಿಸಿದನು. ಸಲಕ ಸಹೋದರರೂ ರಾಜಧಾನಿಯಲ್ಲಿ ತಾವೇ ತಾವಾಗಿ ವಿಜೃಂಭಿಸ ತೊಡಗಿದರು. ಅಚ್ಚುತರಾಯನ ಆಮೋದ ಪ್ರಮೋದಗಳಿಗೆ ಬೇಕಾದ ಸಿದ್ಧತೆ ಗಳನ್ನು ಮಾಡಿಕೊಟ್ಟು ಪ್ರೋತ್ಸಾಹಿಸುತ್ತಿದ್ದರು.

ಅಚ್ಚುತರಾಯನ ಈ ವ್ಯಾಪಾರವು ರಾಜಧಾನಿಯ ಸಾಮಂತರಿಗೆಲ್ಲಾ ಅಸಮಾಧಾನವನ್ನುಂಟುಮಾಡಿತ್ತು. ಮಹಾರಾಜರುಗಳೆಲ್ಲಾ ಪುಣ್ಯಮೂರ್ತಿ ಗಳಾಗಿರಬೇಕೆಂದು ಆ ರಾಜಪುರುಷರುಗಳು ಭಾವಿಸುವಂಥವರಲ್ಲದಿದ್ದರೂ ಸಾರ್ವಭೌಮನು ರಾಜಕಾರ್ಯಗಳನ್ನು ತೊರೆದು ಸರ್ವದಾ ಭೋಗಾಸಕ್ತ ನಾಗಿರುವುದು ಯಾರಿಗೂ ಸಮಾಧಾನಕರವಾಗಿರಲಿಲ್ಲ.

ಹೋಜೆ ತಿರುಮಲನು ತನ್ನ ಹಠವನ್ನು ತಾನು ಬಿಡಲೇಇಲ್ಲ. ಮತ್ತೆ ರಾಜಧಾನಿಯಲ್ಲೆಲ್ಲಾ ತನ್ನ ಕೂಟವನ್ನು ಕಟ್ಟಲು ಹಗಲಿರುಳೂ ಪ್ರಯತ್ನಪಡುತ್ತಿದ್ದನು. ಅವನ ಕಾರ್ಯವು ಮುಂದೆ ಸಾಗುತ್ತಲೇಇದ್ದಿತು. ಅವನು ತನ್ನ ಕೈಗೆ ಯಥೇಚ್ಛ ಹಣ ಸಿಕ್ಕಿದರೆ ಒಂದೇ ದಿನದಲ್ಲಿ ಈ ಅಚ್ಚುತ ರಾಯನನ್ನು ಪಂಜರದಲ್ಲಿಟ್ಟುಬಿಟ್ಟೇನು. ಸಲಕ ಸಹೋದರರನ್ನು ಭೂಗತ ಮಾಡಿಬಿಟ್ಟೇನು. ಈ ಕಾಲದಲ್ಲಿ ನ್ಯಾಯಧರ್ಮಗಳೊಂದೂ ಇಲ್ಲ. ಹಣವೇ ಪ್ರಧಾನ ಅದರಿಂದಲೇ ವಿದ್ಯಾರಣ್ಯ ಮಹಾಮುನಿಗಳು ಮೊದಲು ಚಿನ್ನದ ಮಳೆಯನ್ನು ಕರೆಸಿದರು ಎಂದು ಹೇಳುತ್ತಿದ್ದನು. ಸಾಮಾನ್ಯ ಜನರು ಇವನ ಮಾತಿಗೆ ಕಿವಿಗೊಡುತ್ತಿರಲಿಲ್ಲ. ಬುದ್ಧಿವಂತರು ಇವನ

ಮಾತಿನಲ್ಲಿಯೂ ಅರ್ಥವಿದೆಯೆಂದು ಗ್ರಹಿಸುತ್ತಿದ್ದರು. ಆದರೆ ಅವನ ಮಾತುಗಳಿಂದ ಅಚ್ಯುತರಾಯನ ಹೆಸರು ಎಷ್ಟು ಕೆಡಬಹುದೋ ಅಷ್ಟೂ ಕೆಡುತ್ತಿದ್ದಿತು.

ಸಲಕ ಸಹೋದರರು ಕಣ್ಣುಮುಚ್ಚಿಕೊಂಡಿರಲಿಲ್ಲ. ಯಾವುದಾದರೂ ರೀತಿಯಿಂದ ಈ ಹೋಜೆ ತಿರುಮಲನನ್ನು ಮುಗಿಸಿಬಿಡಬೇಕೆಂದು ನಾನಾ ವಿಧವಾದ ಪ್ರಯತ್ನಗಳನ್ನು ಅಂತರಂಗದಲ್ಲಿಯೇ ಮಾಡುತ್ತಿದ್ದರು. ಆದರೆ ಯಾವುದೋ ಕಾರಣಗಳಿಂದ ಅವರ ಪ್ರಯತ್ನಗಳು ವಿಫಲವಾಗುತ್ತಿದ್ದವು.

ರಾಣಿಯರ ಮನಸ್ಸಿಗೂ ಅಚ್ಯುತರಾಯನ ನಡವಳಿಕೆಗಳು ಅವನ ವಿಚಾರದಲ್ಲಿ ಜನರಾಡಿಕೊಳ್ಳುತ್ತಿದ್ದ ಮಾತುಗಳೂ ಖೇದವನ್ನುಂಟುಮಾಡುತ್ತಿದ್ದವು. ಅವರೇನು ಮಾಡಬಲ್ಲರು? ಅಚ್ಯುತರಾಯನಿಗೆ ಬುದ್ಧಿ ಹೇಳುವುದು ವ್ಯರ್ಥ ರಾಮರಾಯನು ಹೇಳಿದಂತೆ ತಾವು ರಾಜಧಾನಿಯನ್ನು ಬಿಟ್ಟುಹೋಗಬಹುದು. ಹಾಗೆ ಮಾಡಿದರೆ ಸಲಕ ಸಹೋದರರಿಗೆ ಇರುವ ಭಯವೂ ತಪ್ಪಿಹೋಗುತ್ತದೆ ನಿಶ್ಚಯವಾಗಿಯೂ ರಾಜ್ಯವು ಅನಾಯಕವಾಗುತ್ತದೆ ಎಂದು ಬಗೆದು ಚಿನ್ನಾಂಬಿಕೆಯೂ ತಿರುಮಲಾಂಬಿಕೆಯೂ ಮಾತನಾಡಿಕೊಳ್ಳುತ್ತಾ ವಿರೂಪಾಕ್ಷನ ಕೃಪೆಯಿದ್ದಂತಾಗಲಿ ಎಂದು ದೇವರ ಮೇಲೆ ಭಾರಹಾಕಿ ಕಾಲಕಳೆಯುತ್ತಿದ್ದರು.

ಅಚ್ಯುತರಾಯನ ರಾಣಿಯಾದ ವರದಾಂಬಿಕೆಯೂ ಕೂಡಾ ವಿರಕ್ತಳಾಗಿ ರಾಜನ ಕ್ಷೇಮಕ್ಕೆ ದೇವತಾರಾಧನೆಯೊಂದೇ ಮಾರ್ಗವೆಂದು ನಂಬಿ ಸರ್ವದಾ ಪೂಜಾದಿಗಳನ್ನು ಮಾಡುತ್ತಾ ಬ್ರಾಹ್ಮಣರಿಗೆ ದಾನಧರ್ಮಗಳನ್ನು ನೀಡುತ್ತಾ ಪ್ರತಿದಿನವೂ ವಿರೂಪಾಕ್ಷನ ದರ್ಶನಮಾಡಿ ರಾಜನಿಗೂ ರಾಜ್ಯಕ್ಕೂ ಕ್ಷೇಮವನ್ನು ಪ್ರಾರ್ಥಿಸುತ್ತಾ ದಿನಗಳನ್ನು ಕಳೆಯುತ್ತಿದ್ದಳು.

## ೧೩

ಅಚ್ಯುತರಾಯನು ಉಗಾದಿಯ ದಿನ ಪದ್ಧತಿಯ ಮೇರೆಗೆ ದೇವಾಲಯಗಳಲ್ಲಿ ದೇವತಾ ಸಂದರ್ಶನಗಳನ್ನು ಮಾಡಿಕೊಂಡು ಅರಮನೆಯಲ್ಲಿ ಸಿಂಹಾಸನಾರೋಹಣ ಮಾಡಿದನು. ಪದ್ಧತಿಯಂತೆ ಅಂದಿನ ಉತ್ಸವಾದಿಗಳು ರಾಜಸಭೆ ರಾಜಸಭೆಯಲ್ಲಿ ಪಂಡಿತರುಗಳಿಗೂ ಅಧಿಕಾರಿಗಳಿಗೂ ಬಹುಮಾನಗಳು ಕೊಡಲ್ಪಟ್ಟವು. ಅಚ್ಯುತರಾಯನು ಸಿಂಹಾಸನದ ಮೇಲೆ ಕುಳಿತುಕೊಂಡು ಸಭಾಮಂದಿರವನ್ನೆಲ್ಲಾ ದಿಟ್ಟಿಸಿ ನೋಡಿದನು. ಎಲ್ಲವೂ ನವೀನವಾಗಿದ್ದಂತೆ ಅವನ ಕಣ್ಣಿಗೆ ಭಾಸವಾಯಿತು. ವಂದಿಮಾಗಧರು ಬಿರುದುಗಳನ್ನು ಹೊಗಳುತ್ತಿದ್ದರು. ಆ ಬಿರುದುಗಳನ್ನೆಲ್ಲಾ ಕಿವಿಗೊಟ್ಟು ಕೇಳಿದರು. ಇದೆಲ್ಲಾ ಪೂರ್ವೀಕರ ಬಿರುದುಗಳು ನನಗೆ ಅನ್ವಯಿಸತಕ್ಕಂಥವುಗಳಲ್ಲ ಎಂದುಕೊಂಡು ಖಿನ್ನನಾದನು. ದರಬಾರು ಪೂರೈಸಿದನಂತರ ಸಿಂಹಾಸನದಿಂದೆದ್ದು ಸಿಂಹಾಸನವನ್ನು ವಂದಿಸಿ, ಅಂತಃಪುರಕ್ಕೆ ತೆರಳಿದನು.

ಮೊದಲು ವರದಾಂಬಿಕೆಯ ಅಂತಃಪುರಕ್ಕೆ ಹೋಗಿ ದರ್ಶನವಿತ್ತನು. ವರದಾಂಬಿಕೆಯು ಭುವನೇಶ್ವರಿಯ ಪೂಜೆಯನ್ನು ಮುಗಿಸಿ ಮುತ್ತೈದೆಯರಿಗೆ ಮಂಗಳ ದ್ರವ್ಯಗಳನ್ನು ಕೊಡುತ್ತಿದ್ದಳು. ಮಹಾರಾಜರ ಆಗಮನವನ್ನು ವರದಾಂಬಿಕೆಯು ನಿರೀಕ್ಷಿಸಿರಲಿಲ್ಲ. ತನ್ನ ಅಂತಃಪುರದಲ್ಲಿ ಅಪರೂಪವಾಗಿ ದರ್ಶನವಿತ್ತ ಮಹಾರಾಜರವರನ್ನು ಆದರದಿಂದ ಕರೆದೊಯ್ದು ಪೀಠದಮೇಲೆ ಕುಳ್ಳಿರಿಸಿ ನಮಸ್ಕರಿಸಿದಳು. ಅಚ್ಯುತರಾಯನು ಸಂತೋಷದಿಂದ ಮಹಾರಾಣಿಯವರ ಪೂಜೆಗಳನ್ನು ದಾನಧರ್ಮಗಳನ್ನು

ಭುವನೇಶ್ವರಿದೇವಿಯು ಮೆಚ್ಚಿದ್ದಾಳೆ ಎಂದು ಹೇಳಿ ಆಶೀರ್ವದಿಸಿದನು. ವರದಾಂಬಿಕೆಯ ಉಪಚಾರಗಳನ್ನು ಕೈಗೊಂಡು ಅವಳನ್ನು ಜೊತೆಯಲ್ಲಿ ಕರೆದುಕೊಂಡು ಮಹಾರಾಣಿ ಚಿನ್ನಾಂಬಿಕೆ ಮತ್ತು ತಿರುಮಲಾಂಬೆಯರ ಅಂತಃಪುರಕ್ಕೆ ಹೋಗಿ ಅವರಿಬ್ಬರಿಗೂ ವಂದಿಸಿದನು ರಾಣಿಯರು ಆ ರಾಜದಂಪತಿಗಳನ್ನು ಆಶೀರ್ವದಿಸಿ ಆದರ ಪೂರ್ವಕವಾಗಿ ಆಸನಗಳ ಮೇಲೆ ಕುಳ್ಳಿರಿಸಿದರು. ಅಚ್ಚುತರಾಯನು ಯುಗಾದಿಯ ದಿನ ಮಾತೋಶ್ರೀ ಯುವರ ಆಶೀರ್ವಾದವನ್ನು ಪಡೆಯಲು ಬಂದಿದ್ದೇವೆ ಮತ್ತು ಒಂದು ವಿಶೇಷ ಉಂಟು ನಾನು ರಾಜಪರಿತ್ಯಾಗಮಾಡುವ ನಿರ್ಧಾರಮಾಡಿದ್ದೇನೆ. ಅನೇಕ ದಿನಗಳು ಯೋಚನೆಮಾಡಿ ತೀರ್ಮಾನಮಾಡಿಕೊಂಡಿದ್ದೇನೆ. ಈ ರಾಜ್ಯಕ್ಕೆ ನನ್ನ ಮಗನಾದ ಪಿನ್ನ ವೆಂಕಟಾದ್ರಿರಾಯನಿಗೆ ಪಟ್ಟಕಟ್ಟಸ ಬೇಕೆಂದು ಸಂಕಲ್ಪಮಾಡಿದ್ದೇನೆ. ವಿದ್ವಜ್ಜನರೂ ಹಿರಿಯರಾದ ಮಂತ್ರಿಗಳೂ ಸಾಮಂತರೂ ಎಲ್ಲರೂ ಅನುಮತಿಯಿತ್ತರೆ ಆ ಕಾರ್ಯವನ್ನು ಮುಂದುವರಿಸು ತ್ತೇನೆ ಮೊದಲು ಮಾತೃವರ್ಗದವರ ಅನುಮತಿಯನ್ನು ಪಡೆಯಲು ಬಂದಿದ್ದೇನೆ ಎಂದು ಹೇಳಿದನು. ಆ ರಾಣಿಯರು ವರದಾಂಬಿಕೆಯ ಪುಣ್ಯವು ಹೇಗಿದೆಯೋ ಎಂದುಕೊಂಡು ವಿರೂಪಾಕ್ಷನ ಅನುಗ್ರಹವಿದ್ದರೆ ಮನೋರಥಗಳೆಲ್ಲವೂ ಸಫಲವಾಗುತ್ತವೆ. ನಮ್ಮ ಆಶೀರ್ವಾದವು ಇದ್ದೇಇದೆ. ರಾಜ್ಯದಲ್ಲಿ ಸಾಮಂತರು ಮಂಡಲಾಧೀಶರು ಇವರೆಲ್ಲರೊಡನೆಯೂ ಆಲೋ ಚನೆಮಾಡಿರಿ. ಅಳಿಯಂದಿರಾದ ರಾಮರಾಯರವರ ಸಮ್ಮತಿಯನ್ನು ಪಡೆದರೆ ಒಳ್ಳೆಯದಾಗುವುದು ನೀವು ಚೆನ್ನಾಗಿ ಆಲೋಚನೆ ಮಾಡಿರಿ. ನಿಮಗೆ ಇನ್ನು ಅಂಥಾ ವಯಸ್ಸೇನೂ ಆಗಿಲ್ಲ. ರಾಜ್ಯಭಾರ ನಿರ್ವಹಣಕ್ಕೆ ಸಮರ್ಥರಾಗಿದ್ದೀರಿ. ರಾಜ್ಯದ ಆಧಾರ ಸ್ಥಂಭಗಳಂತಿರುವ ಮಂತ್ರಿ ಪುರೋಹಿತರುಗಳು ಹೇಗೆ ಹೇಳುತ್ತಾರೋ ಹಾಗೆ ನಡೆಯಿರಿ ಎಂದು ಹೇಳಿ ಆ ರಾಜದಂಪತಿಗಳಿಗೆ ಹಬ್ಬದ ಉಡುಗರೆಗಳನ್ನು ಮಂಗಳ ದ್ರವ್ಯಗಳನ್ನು ಕೊಡಿಸಿ ಗೌರವದಿಂದ ಕಳುಹಿಸಿಕೊಟ್ಟರು.

ಅಚ್ಚುತರಾಯನು ವರದಾಂಬಿಕೆಯನ್ನು ಅವಳ ಅಂತಃಪುರದಲ್ಲಿ

ಬಿಟ್ಟು ನಾಗಲಾಪುರಕ್ಕೆ ತೆರಳಿದನು. ದೂತರನ್ನು ಕಳುಹಿಸಿ ಸಲಕ ಸಹೋದರರನ್ನು ತನ್ನ ಬಳಿಗೆ ಕರೆಸಿಕೊಂಡನು ಅವರೊಡನೆ "ಪಿನ್ನ ವೆಂಕಟಾದ್ರಿರಾಯನಿಗೆ ಪಟ್ಟಕಟ್ಟಬೇಕೆಂದು ತಾನು ಸಂಕಲ್ಪಿಸಿರುವ ವಿಚಾರವನ್ನು ತಿಳಿಸಿದನು ನೀವು ಈ ಸಮಾಚಾರವನ್ನು ನಮ್ಮ ಮಂಡಲೇಶ್ವರರಿಗೂ ಸಾಮಂತರಾಜರಿಗೂ ವೃದ್ಧರಾದ ಮಂತ್ರಿವರ್ಗದವರಿಗೂ ದಂಡನಾಯಕರುಗಳಿಗೂ ತಿಳಿಯಪಡಿಸಿರಿ. ಅವರ ಅಭಿಪ್ರಾಯಗಳನ್ನು ತೆಗೆದುಕೊಂಡು ಬಂದು ನನಗೆ ತಿಳಿಸಿರಿ. ನನ್ನ ಅಧಿಕಾರದೊಂದಿಗೆ ನಿಮ್ಮ ಅಧಿಕಾರಗಳು ಸಮಾಪ್ತವಾದರೂ ಆಗಬಹುದು. ಆದಕ್ಕೆ ನೀವು ಸಂತೋಷದಿಂದ ಸಿದ್ಧರಾಗಿರಬೇಕು." ಸಲಕ ಸಹೋದರರು, "ಮಹಾ ಪ್ರಭುವೇ! ನಮ್ಮ ವಿಷಯದಲ್ಲಿ ಅನೇಕರು ಸಂದೇಹಪಡುವಂತೆ ನೀವೂ ಸಂದೇಹಪಡಬಾರದು. ನಾವು ಅಧಿಕಾರದ ಆಸೆಯಿಂದ ಇಲ್ಲಿಗೆ ಬಂದಿಲ್ಲ ನಿಮ್ಮ ಹಿತಕಾಂಕ್ಷಿಗಳಾಗಿ ನಾವು ಬಂದೆವು. ತಮ್ಮ ಆಜ್ಞೆಯನ್ನು ಸಂತೋಷವಾಗಿ ಸಾಂಗಗೊಳಿಸಿ ನಾವು ಹೊರಟುಹೋಗುತ್ತೇವೆ ನಿಮ್ಮ ಸಂಕಲ್ಪವು ನ್ಯಾಯವಾಗಿಯೇ ಇದೆ. ವೆಂಕಟಾದ್ರಿಯು ರಾಜಲಕ್ಷಣ ಸಂಪನ್ನನಾಗಿಯೂ ವಿದ್ಯಾ ಪಾರಂಗತನಾಗಿಯೂ ಇದ್ದಾನೆ. ದರಬಾರಿಗಳೆಲ್ಲರೂ ಸಂತೋಷದಿಂದ ಅವನನ್ನು ಒಪ್ಪಿಕೊಳ್ಳಬಹುದು. ಆದರೆ ಶತ್ರುಗಳೂ ಇದ್ದಾರೆ. ಇದಕ್ಕೆ ವಿರೋಧಿಗಳೇ ಇಲ್ಲವೆಂದು ನಾವು ಭಾವಿಸಬಾರದು. ಹೋಜೇ ತಿರುಮಲನ ಅವಾಂತರವಂತೂ ರಾಜ್ಯದಲ್ಲೆಲ್ಲಾ ಗೊಂದಲವನ್ನುಂಟುಮಾಡಿದೆ. ಈ ಪ್ರಯತ್ನಕ್ಕೆ ನಾವು ತೊಡಗಲೇಬಾರದು. ತೊಡಗಿದಮೇಲೆ ಎಂಥಾ ಕಷ್ಟಗಳು ಪ್ರಾಪ್ತವಾದರೂ ಸಾಧಿಸಲೇಬೇಕು. ಅದು ನಮ್ಮ ಸಲಕ ಮನೆತನದವರ ಹುಟ್ಟುಗುಣ. ಆದಕ್ಕೆ ಯಾರು ಅಡ್ಡಿ ಬಂದರೂ ನಾವು ಸಹಿಸುವರಲ್ಲ. ಈಗಲೇ ತಾವು ನಮ್ಮನ್ನು ನಮ್ಮ ರಾಜ್ಯಕ್ಕೆ ಕಳಿಸಿಬಿಟ್ಟರೂ ಸಂತೋಷದಿಂದ ಹೊರಟುಹೋಗುತ್ತೇವೆ. ಈ ಮಹತ್ಕಾರ್ಯವನ್ನು ನಮಗೊಪ್ಪಿಸಿದನಂತರ ನಮ್ಮನ್ನು ಹಿಂದಕ್ಕೆಳೆಯಬೇಡಿರಿ. ನಮ್ಮನ್ನು ಅಪಮಾನಕ್ಕೆ ಗುರಿಮಾಡಬೇಡಿರಿ" ಎಂದು ಪ್ರಾರ್ಥನೆ ಮಾಡಿದರು.

ಅಚ್ಯುತರಾಯನು ಈ ಕಾರ್ಯವನ್ನು ಅಳಿಯ ರಾಮರಾಯರೂ ತಿರುಮಲ ರಾಯರೂ ಒಪ್ಪಿಕೊಂಡು ನಿರ್ವಹಿಸಿದ್ದರೆ ಬಹಳ ಚೆನ್ನಾಗಿತ್ತು. ಅವರಿಗೂ ನಿಮಗೂ ಅಷ್ಟು ಸೌಹಾರ್ದವಿಲ್ಲ ಆ ಅಣ್ಣತಮ್ಮಂದಿರು ಬಹಳ ಗುಣ ವಂತರು. ತಾವಾಗಿಯೇ ಅಧಿಕಾರವನ್ನು ನಿಮಗೊಪ್ಪಿಸಿ ಸಂತೋಷದಿಂದ ಹೊರಟುಹೋದರು. ಅವರು ಪುನಃ ನಾವು ಪ್ರಾರ್ಥನೆ ಮಾಡಿದರೂ ಅಧಿಕಾರ ದಂಡವನ್ನು ಸ್ವೀಕರಿಸುವುದಿಲ್ಲ ಆದುದರಿಂದ ಇದು ನಿಮ್ಮ ಕರ್ತವ್ಯವಾಗಿ ಪರಿ ಣಮಿಸಿದೆ ರಾಣಿಯವರಿಬ್ಬರೂ ಈ ಅಭಿಪ್ರಾಯಕ್ಕೆ ಒಪ್ಪಿಗೆಯನ್ನಿತ್ತಿದ್ದಾರೆ. ಅಳಿಯ ರಾಮರಾಯರವರಿಗೆ ನೀವೇ ಪತ್ರವನ್ನು ಬರೆದು ಕಳುಹಿಸಿರಿ ಹೋಗಲಿ ತಿರುಮಲರಾಯನ ವಿಷಯದಲ್ಲಿ ನಾವು ಆರಂಭದಲ್ಲಿಯೇ ವಿರೋಧವನ್ನು ಮಾಡುವುದು ಸರಿಯಲ್ಲ ಅವನಿಂದ ಯಾವ ಅಪಾಯಗಳೂ ಸಂಭವಿಸದಂತೆ ಜಾಗರೂಕತೆಯಿಂದ ನೋಡಿಕೊಂಡರಾಯಿತು ದುರ್ಜನರನ್ನು ದೂರ ವಿಡು ವುದೇ ರಾಜನೀತಿ ಎಂದು ಹೇಳಿದನು.

ಸಲಕ ಸಹೋದರರು ಅಚ್ಯುತರಾಯನ ಅಭಿಪ್ರಾಯಕ್ಕೆ ಮನ್ನಣೆ ಸೂಚಿಸಿ ಮಹಾರಾಜರ ಸಮ್ಮುಖದಿಂದ ರಾಜಧಾನಿಗೆ ತೆರಳಿದರು. ಮೊದಲು ರಾಮರಾಯರವರಿಗೆ ಮಹಾರಾಜರ ಅಭಿಪ್ರಾಯವನ್ನು ಸೂಚಿಸಿ ಪತ್ರ ಬರೆದು ದೂತರ ಮುಖೇನ ಚಂದ್ರಗಿರಿಗೆ ಕಳುಹಿಸಿಕೊಟ್ಟರು ಸಲಕ ಸಹೋದರರು ಮಂತ್ರಿಗಳ ಮನೆಗೆ ತಾವೇ ಹೋಗಿ ಮಹಾರಾಜರ ಅಪ್ಪಣೆಯನ್ನು ತಿಳಿ ಸಿದರು ಮಂತ್ರಿಗಳು ಎಂದೂ ಬಾರದ ಈ ಸಲಕ ಸಹೋದರರು ಇಂದು ನಮ್ರತೆಯಿಂದ ನಮ್ಮಲ್ಲಿಗೆ ಬಂದು ಈ ಪ್ರಸ್ತಾಪವನ್ನು ಎತ್ತಿದ್ದಾರೆ. ಇದು ಈ ಸಲಕ ಸಹೋದರರ ಆಲೋತ್ತರವೋ ಮಹಾರಾಜರ ಸ್ವಂತ ಅಭಿ ಪ್ರಾಯವೋ ಅದನ್ನು ತಿಳಿದುಕೊಳ್ಳಬೇಕು ಎಂದುಕೊಂಡು, "ಮಹಾ ಪ್ರಧಾನಿಗಳೇ! ಮಹಾರಾಜರವರ ಆಜ್ಞೆಯಾಗಿದ್ದರೆ ಅದನ್ನು ಅಲ್ಲಗಳೆಯಲು ಯಾರಿಗೆ ತಾನೇ ಸಾಧ್ಯ. ಆದರೆ ಈ ವಿಚಾರವನ್ನು ಚೆನ್ನಾಗಿ ಪರಿಶೀಲಿಸ ಬೇಕು. ಅನುಕೂಲಪ್ರತಿಕೂಲಗಳನ್ನು ಆಲೋಚಿಸಬೇಕು. ನಮಗೆ ಸ್ವಲ್ಪ ಅವಕಾಶಕೊಡಿರಿ. ಆಲೋಚನೆಮಾಡಿ, ಏಕವಾಕ್ಯತೆಯಿಂದ ನಿಮಗೆ ಉತ್ತರ

ಕೊಡುತ್ತೇವೆ ಎಂದು ಹೇಳಿ ಕಳಿಸಿದರು

ಸಾಮ್ರಾಜ್ಯದ ಒಂಭತ್ತು ಮಂದಿ ಮಂತ್ರಿಗಳು ವೃದ್ಧಮಂತ್ರಿಯಾದ ಮುದ್ದಣ್ಣನ ಮನೆಯಲ್ಲಿ ಸೇರಿ ಸಮಾಲೋಚನೆ ಮಾಡಿದರು. ಯಾರೂ ಅಚ್ಚುತರಾಯರೇಕೆ ರಾಜ್ಯಪರಿತ್ಯಾಗಮಾಡಬೇಕು ಎಂಬ ವಿಚಾರವನ್ನೇ ಎತ್ತಲಿಲ್ಲ. ಅವರೆಲ್ಲರೂ ವೃದ್ಧಮಂತ್ರಿ ಮುದ್ದಣ್ಣನವರನ್ನು ಮುಂದಿಟ್ಟು ಕೊಂಡು ಮಹಾರಾಜ ಅಚ್ಚುತರಾಯನನ್ನು ದರ್ಶನಮಾಡಿದರು ಅಚ್ಯುತ ರಾಯನು ಆ ಮಂತ್ರಿಗಳನ್ನೆಲ್ಲಾ ಮರ್ಯಾದೆಯಿಂದ ಬರಮಾಡಿಕೊಂಡು ಅವರುಗಳಿಗೆ ಆಸನಗಳನ್ನು ಕೊಟ್ಟು ಕುಳ್ಳಿರಿಸಿ ಅವರೆಲ್ಲರೂ ಏಕೀಭವಿಸಿ ಬಂದಿರುವ ಸಮಾಚಾರವೇನೆಂದು ವಿಚಾರಿಸಿದನು.

ವೃದ್ಧಮಂತ್ರಿ ಮುದ್ದಣ್ಣನು ಮಹಾಪ್ರಭುಗಳೇ ಪೆದ್ದ ತಿರುಮಲರಾಯರು ಮಹಾರಾಜರ ಆಜ್ಞೆಯನ್ನು ನಮ್ಮೆಲ್ಲರಿಗೂ ತಿಳಿಯಪಡಿಸಿದರು. ಮಹಾ ಪ್ರಭುಗಳವರು ರಾಜ್ಯಪರಿತ್ಯಾಗ ಮಾಡಿ ಯುವರಾಜ ವೆಂಕಟಾದ್ರಿಯವರಿಗೆ ಪಟ್ಟಕಟ್ಟಸಬೇಕೆಂದು ಅಭಿಪ್ರಾಯಪಟ್ಟಿರುವಂತೆ ತಿಳಿಸಿದರು. ಇದು ಬಲು ದೊಡ್ಡ ವಿಚಾರ. ಇಂಥಾ ವಿಷಯಗಳಲ್ಲಿ ನಮ್ಮ ಒಬ್ಬೊಬ್ಬರ ಅಭಿಪ್ರಾಯ ಗಳು ಕಾರ್ಯಕಾರಿಯಾಗುವುದಿಲ್ಲ. ನಾವೆಲ್ಲರೂ ಒಗ್ಗಟ್ಟಾಗಿ ಏಕಾಭಿಪ್ರಾಯ ವನ್ನು ಸೂಚಿಸುವುದಕ್ಕೋಸ್ಕರ ಸನ್ನಿಧಾನಕ್ಕೆ ಬಂದಿದ್ದೇವೆ

ಮುದ್ದಣ್ಣನವರೇ! ನೀವು ಬಲು ದೊಡ್ಡವರು. ಮೂರು ತಲೆಗಳಿಂದ ಎಲ್ಲವನ್ನು ಬಲ್ಲವರು. ನಿಮ್ಮ ಅಭಿಪ್ರಾಯಕ್ಕೆ ಎಲ್ಲರೂ ಒಪ್ಪುತ್ತಾರೆ. ನೀವು ಈ ಮಂತ್ರಿಗಳೆಲ್ಲರೊಡನೆ ಆಲೋಚನೆಮಾಡಿರಬಹುದಷ್ಟೆ. ನಿಮ್ಮೆಲ್ಲರ ಏಕಾಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿರಿ. ಸಂಕೋಚಪಡಬೇಡಿರಿ. ಶಂಕೆಗೆ ಆಸ್ಪದವಿರಬಾರದು, ಎಂದು ಹೇಳಿದನು.

ಮಂತ್ರಿ ಮುದ್ದಣ್ಣನು ಮಹಾಪ್ರಭುಗಳೇ! ಇಂತಹ ದೊಡ್ಡ ಪ್ರಮೇಯ ಗಳಲ್ಲಿ ನಾವೂ ಕೆಲವಂಶಗಳನ್ನು ಸ್ಪಷ್ಟವಾಗಿ ಕೇಳಿ ತಿಳಿದುಕೊಳ್ಳಬೇಕಾಗು ತ್ತದೆ. ಆದರಿಂದ ಮನಸ್ಸಿಗೆ ಆಯಾಸಪಡಬಾರದು. ಮಹಾಪ್ರಭುಗಳವರು ಈಗ ರಾಜ್ಯಪರಿತ್ಯಾಗಮಾಡುವಂಥಾ ಪ್ರಸಂಗವೇನುಬಂದಿದೆ? ಯುವರಾಜ

ರವರು ವಿದ್ಯಾವಿನಯಸಂಪನ್ನರಾಗಿ ಪ್ರವೃದ್ಧಮಾನಕ್ಕೆ ಬರುತ್ತಿರುವುದು ನಮ್ಮೆಲ್ಲರಿಗೂ ಹರ್ಷದಾಯಕವಾಗಿದೆ. ಅವರು ಮಹಾಪ್ರಭುಗಳ ಜೊತೆಯಲ್ಲಿಯೇ ಕೆಲವು ವರ್ಷಗಳ ಕಾಲ ರಾಜ್ಯಭಾರ ಮಾಡುತ್ತಿದ್ದರೆ ಈ ಸಾಮ್ರಾಜ್ಯದ ವಿಶ್ವಾಸಗೌರವಗಳಿಗೆ ಅವರು ಪಾತ್ರರಾಗಲು ಅವಕಾಶವಾಗುತ್ತದೆ. ಇದು ನಮ್ಮ ಅರಮನೆಯಲ್ಲಿ ಬಹು ಪೂರ್ವಕಾಲದಿಂದಲೂ ನಡೆದುಬಂದಿರುವ ಸಂಪ್ರದಾಯವೆಂದು ಕೇಳಿದ್ದೇನೆ. ಮಹಾಪ್ರಭುಗಳು ಇದಕ್ಕೆ ಸ್ಪಷ್ಟವಾದ ಉತ್ತರವನ್ನು ಕೊಡೋಣವಾಗಲಿ

ಅಚ್ಯುತರಾಯನು ವೃದ್ಧಮಂತ್ರಿಗಳ ಮಾತು ಸರಿಯಾಗಿದೆ. ಇದು ನಮಗೆ ಉಪದೇಶಮಾಡುತ್ತಿರುವ ಮಾತಿನಂತಿದೆ ರಾಜ್ಯಪರಿತ್ಯಾಗಮಾಡುವ ನಿಶ್ಚಯವನ್ನು ಮಾಡಿಬಿಟ್ಟಿದ್ದೇನೆ. ಅದಕ್ಕೆ ಕಾರಣಗಳೂ ಉಂಟು. ಕೃಷ್ಣದೇವರಾಯರ ಅಂತ್ಯಕಾಲದಲ್ಲಿ ನನಗೆ ಪಟ್ಟಾಭಿಷೇಕಕ್ಕೆ ಅಪ್ಪಣೆಯಿತ್ತರು. ನನ್ನ ಅಧಿಕಾರವು ಎಷ್ಟೋ ಜನಗಳಿಗೆ ಇಷ್ಟವಾಗಿರಲಿಲ್ಲ. ಈ ಸಲಕ ಸಹೋದರರ ಔನ್ನತ್ಯವು ಬಹುಜನಗಳಿಗೆ ಪ್ರಿಯಕರವಾಗಲಿಲ್ಲ. ರಾಜ್ಯದಲ್ಲೆಲ್ಲಾ ಗಲಭೆಯೆದ್ದಿತು. ಇಸ್ಮಾಯಿಲ್‌ಷಹನು ನಮ್ಮ ಮೇಲೆ ದಂಡೆತ್ತಿಬಂದನು. ಆ ಸಮಯದಲ್ಲಿ ರಾಜ್ಯದಲ್ಲಿಯೂ ರಾಜಧಾನಿಯಲ್ಲಿಯೂ ಅನೇಕ ಭಿನ್ನಭೇದಗಳಿದ್ದವು. ಯಾರು ಯಾರಲ್ಲಿಯೂ ನಂಬಿಕೆಯಿಡುವಂತಿರಲಿಲ್ಲ. ಮಂತ್ರಿಗಳೇ, ನಮಗೆ ಅದೂ ಒಂದು ಪಾಠವೆಂದುಕೊಳ್ಳಿರಿ. ನಮ್ಮನಮ್ಮಲ್ಲಿ ಪೂರ್ಣ ಐಕಮತ್ಯವಿಲ್ಲದಿದ್ದರೆ ಶತ್ರುಗಳ ಪ್ರಾಬಲ್ಯವು ಹೆಚ್ಚುತ್ತದೆ. ಆ ಸಮಯದಲ್ಲಿ ನನಗಾರೂ ಸಹಾಯಕರಿಲ್ಲ ಏಕಾಕಿಯಾಗಿದ್ದೇನೆ ಎಂಬ ಭೀತಿಯಿಂದ ಆ ಸುಲ್ತಾನನಿಗೆ ಹೇರಳವಾದ ಪ್ರೊಗದಿಯನ್ನು ಕೊಟ್ಟು ಕಳಿಸಬೇಕಾಯಿತು. ನಮ್ಮ ಶತ್ರುವಿಗೆ ತಲೆಬಾಗಿಸಿ ಹೇರಳವಾದ ಕಪ್ಪಕಾಣಿಕೆಗಳನ್ನು ಕೊಟ್ಟು ಕಳಿಸುವುದು ನನಗಾದರೂ ಸಂತೋಷಪ್ರದವಾಗಿದ್ದಿತೇ? ಅದಕ್ಕಾಗಿ ನನ್ನಷ್ಟು ಪರಿತಪಿಸಿದವರು ಈ ರಾಜ್ಯದಲ್ಲಿ ಮತ್ತಾರು ಇರಲಾರರು. ಅದೇ ಕಾರಣವನ್ನು ಮುಂದಿಟ್ಟುಕೊಂಡು ಪುನಃ ರಾಜ್ಯದಲ್ಲಿಯೂ ರಾಜಧಾನಿಯಲ್ಲಿಯೂ ಆಂದೋಳನವೆದ್ದಿತು. ಅಳಿಯ ರಾಮ

ರಾಯರನ್ನು ಕರೆಸಿ ಪ್ರಾರ್ಥಿಸಿಕೊಂಡು ಆ ಉಲ್ಬಣಸ್ಥಿತಿಯನ್ನು ಶಮನ ಗೊಳಿಸಬೇಕಾಯಿತು. ಈಗಲೂ ಸಾಮ್ರಾಜ್ಯದ ಬಹುಮಂದಿ ಮಂಡಲೇಶ್ವರರು ಭಿನ್ನೈಸುತ್ತಿದ್ದಾರೆ. ಎಲ್ಲರಿಗಿಂತಲೂ ನಾನು ಅದನ್ನು ಹೆಚ್ಚಾಗಿ ಗಮನಿಸುತ್ತಿದ್ದೇನೆ. ಇದಲ್ಲವನ್ನು ನೋಡಿ, ಈ ರಾಜ್ಯವಿಡಂಬನದ ದುಃಖದಿಂದ ದೂರವಾಗಬೇಕೆಂದು ನಿಶ್ಚಯಮಾಡಿದ್ದೇನೆ. ಸ್ಪಷ್ಟವಾಗಿ ಹೇಳುವುದೆಂದರೆ ನನ್ನ ರಾಜ್ಯಭಾರವು ಜನಪ್ರಿಯವಾಗಿಲ್ಲ. ಪ್ರತಾಪದಿಂದ ಕೂಡಿಲ್ಲ. ಸಿಂಹಾಸನವನ್ನು ದಿನದಿನಕ್ಕೆ ಅಧೋಗತಿಗೆ ತರುವುದು ಮಹಾ ಪಾಪ. ಮುಂದಾದರೂ ಪೂರ್ವಜರ ಅನುಗ್ರಹದಿಂದ ಸಿಂಹಾಸನವು ಬೆಳಗಲಿ. ಸಾಮ್ರಾಜ್ಯವು ಬೆಳೆಯಲಿ ಎಂಬ ಆಸಕ್ತಿಯಿಂದ ಈ ಆಲೋಚನೆಯನ್ನು ಮಾಡಿದ್ದೇನೆ. ನಾನು ರಾಜ್ಯಪರಿತ್ಯಾಗಮಾಡಿ ಯುವರಾಜನಿಗೆ ಪಟ್ಟಕಟ್ಟಿಸಿ ಸಲಕ ಸಹೋದರರನ್ನು ಗೌರವದಿಂದ ಅವರ ದೇಶಗಳಿಗೆ ಕಳುಹಿಸಿ ಸಮಸ್ತ ರಾಜ್ಯಭಾರವನ್ನು ನಿಮ್ಮಗಳಿಗೊಪ್ಪಿಸಿ ಕೃತಾರ್ಥನಾಗಬೇಕೆಂದು ನಿರ್ಧರಿಸಿದ್ದೇನೆ. ಈ ಅಭಿಪ್ರಾಯವು ಸರ್ವಸಮ್ಮತವಲ್ಲದಿದ್ದರೆ ನೀವು ಬೇರೆ ಮಾರ್ಗವನ್ನು ತೋರಬಹುದು. ಮತ್ತಾರಿಗಾದರೂ ಪಟ್ಟ ಕಟ್ಟಸಬಹುದು. ನಾನು ವಿರೂಪಾಕ್ಷನ ಮೇಲೆ ಆಣೆಯಿಟ್ಟು ಹೇಳುತ್ತೇನೆ ನೀವೆಲ್ಲರೂ ಯಾರನ್ನು ಒಪ್ಪುವಿರೋ ರಾಜ್ಯವೆಲ್ಲವೂ ಯಾವ ಅಭಿಪ್ರಾಯಕ್ಕೆ ಸಮ್ಮತಿ ಈಯುವುದೋ ಅದನ್ನು ಶಿರಸಾವಹಿಸಿ ನಾನೇ ಮುಂದೆ ನಿಂತು ನನ್ನ ಕೈಯಿಂದಲೇ ಪಟ್ಟ ಕಟ್ಟಸುತ್ತೇನೆ ಪಿತೃಪಿತಾಮಹರ ಕಾಲದಿಂದಲೂ ಈ ಹೊಣೆಗಾರಿಕೆಯು ನಿಮ್ಮದಾಗಿದೆ. ಒಂದು ಬಾರಿ ಕೃಷ್ಣದೇವರಾಯರ ಎಳೆಮಗನಿಗೆ ಪಟ್ಟಕಟ್ಟಬೇಕೆಂದು ಬಹುಮಂದಿ ದರ್ಬಾರಿಗಳ ಅಭಿಮತವಿತ್ತು. ನಿಜವಾಗಿಯೂ ಕೃಷ್ಣದೇವರಾಯರ ವಂಶಕ್ಕೆ ಸಲ್ಲಬೇಕಾದ ಸಿಂಹಾಸನವಿದು. ನೀವೆಲ್ಲರೂ ಅದನ್ನೇ ಮುಂದುವರಿಸಿದರೆ ನಾನು ಮನಃಪೂರ್ವಕವಾಗಿ ಆ ಬಾಲಕನಿಗೆ ಆಶೀರ್ವದಿಸುತ್ತೇನೆ.

ಮಂತ್ರಿಗಳು ಈ ಕರುಣಾಜನಕವಾದ ರಾಜನ ಮಾತುಗಳನ್ನು ಕೇಳಿ ಅವಾಕ್ಕಾದರು. ಅವರ ಕಣ್ಣುಗಳಲ್ಲಿ ಹನಿಗೂಡಿತು. ವೃದ್ಧಮಂತ್ರಿಯು

ಎದ್ದು ನಿಂತು ಮಹಾಪ್ರಭುವೇ ನನಗೆ ಯಾರ ಅಂಜಿಕೆಯೂ ಇಲ್ಲ. ನಿಮ್ಮ ಮಾತುಗಳು ಕೆಟ್ಟ ಹಳೆಯ ನೆನಪುಗಳನ್ನು ತರುತ್ತಿವೆ. ಕೃಷ್ಣದೇವರಾಯರು ಬಲು ದೊಡ್ಡವರು ಅವರು ದೇವತಾಂಶ ಸಂಭೂತರೆಂದು ಜನರು ಇಂದಿಗೂ ಹೊಗಳುತ್ತಾರೆ. ಆತುರದಿಂದಲೋ ಮತ್ತಾವ ಕಾರಣದಿಂದಲೋ ಕೃಷ್ಣದೇವರಾಯರು ಅಬೋಧ ಬಾಲಕನಾದ ತಿರುಮಲರಾಯನಿಗೆ ಪಟ್ಟ ಕಟ್ಟಿಸಿದ್ದು ನಮ್ಮ ರಾಜ್ಯದಲ್ಲಿ ಅಶುಭಪರಂಪರೆಗಳಿಗೆ ಕಾರಣವಾಯಿತು. ಅನ್ನಪೂರ್ಣಾದೇವಿಯರ ಎಳೆಯಮಗನು ಚಿರಂಜೀವಿಯಾಗಿ ಎಲ್ಲಿಯಾದರೂ ಬದುಕಿಕೊಳ್ಳಲಿ ಅವನ ಹೆಸರೆತ್ತಿ ನಾವು ಅವನ ಪ್ರಾಣಕ್ಕೇ ಸಂಚಕಾರ ತರುತ್ತೇವೇನೋ ಎಂದು ನನಗೆ ದಿಗಿಲಾಗುತ್ತದೆ. ಆ ಹೋಜೇ ತಿರುಮಲನು ವಿವೇಕಶಾಲಿಯಾಗಿದ್ದರೆ ಅವನಿಗೆ ರಾಜ್ಯಪರಿಸ್ಥಿತಿಯನ್ನು ತಿಳಿಸಬಹುದಾಗಿತ್ತು ಮತ್ತೆ ಆ ಮಾತನ್ನು ಎತ್ತಬೇಡಿರಿ. ನಿಮ್ಮ ಮಾತನ್ನು ನಾವು ಅಂಗೀಕರಿಸಿದರೂ ಅದನ್ನು ನಿರ್ವಹಿಸಿ ಸಾರ್ಥಕಗೊಳಿಸುವ ಸಾಮರ್ಥ್ಯವು ನಮ್ಮಗಳಿಗಿದೆಯೇ ಎಂದು ನನಗೆ ಸಂದೇಹವಾಗಿದೆ. ಯುವರಾಜರ ಪಟ್ಟಾಭಿಷೇಕವನ್ನು ತಮ್ಮ ಆಜ್ಞಾನುಸಾರ ನಾವೆಲ್ಲರೂ ಸಂತೋಷದಿಂದ ಒಪ್ಪಿಕೊಳ್ಳುತ್ತೇವೆ. ಈಗ ನಮ್ಮ ಚಕ್ರಾಧಿಪತ್ಯದಲ್ಲಿ ಅದನ್ನು ನಿರ್ವಹಿಸಿ ಸಾರ್ಥಕಗೊಳಿಸಬಲ್ಲ ಮಹಾನುಭಾವರೆಂದರ ರಾಮರಾಯರವರೊಬ್ಬರೇ ಅವರನ್ನು ಕರೆಸಿ ಮೊದಲು ಮಹಾಪ್ರಧಾನಿ ಪಟ್ಟವನ್ನು ಅವರಿಗೊಪ್ಪಿಸಿ ಯುವರಾಜರ ಪಟ್ಟಾಭಿಷೇಕವನ್ನು ನೆರವೇರಿಸುವಂತೆ ಅಪ್ಪಣೆ ಮಾಡಿರಿ. ಕಾರ್ಯವೆಲ್ಲವೂ ಹೂವೆತ್ತಿದಂತೆ ಕೈಗೂಡುತ್ತದೆ ಎಂದು ಮುದ್ದಣ್ಣನು ಹೇಳಿದನು. ಮಂತ್ರಿಗಳೆಲ್ಲರೂ ವೃದ್ಧಮಂತ್ರಿಯ ಮಾತು ದೇವರ ಮಾತಿನಂತಿದೆ. ವಿರೂಪಾಕ್ಷನೇ ಅವರ ಬಾಯಲ್ಲಿ ಈ ಮಾತುಗಳನ್ನು ಹೊರಡಿಸಿದ್ದಾನೆ ಎಂದು ಹೇಳಿದರು.

ಮಹಾರಾಜಾ ಅಚ್ಯುತರಾಯನು ಮಂತ್ರಿಗಳ ಅಭಿಮತದಂತೆಯೇ ಮಾಡುವುದಾಗಿ ಹೇಳಿಕಳಿಸಿದನು.

ಸಲಕ ಸಹೋದರರಲ್ಲಿ ಮಹಾರಾಜನು ಈ ವಿಚಾರಗಳನ್ನೆಲ್ಲಾ ವಿವರಿಸಿ ಹೇಳಿದನು. ಸಲಕ ಸಹೋದರರು ತಾವು ಅಪ್ಪಣೆ ಕೊಡಿಸಿದ ದಿನವೇ

ಯುಗಾದಿಯ ದಿನವೇ ರಾಮರಾಯರಿಗೆ ಪತ್ರವನ್ನು ಕಳುಹಿಸಿದ್ದೇವೆ. ಎರಡು ಪಕ್ಷಗಳು ಕಳೆದುಹೋದುವು. ಅವರಿಂದ ಯಾವ ಉತ್ತರವೂ ಬಂದಿಲ್ಲ. ಚಂದ್ರಗಿರಿಗೆ ಹೋದ ದೂತರು ಹಿಂತಿರುಗಿ ಬಂದಿಲ್ಲ ಎಂದು ಹೇಳಿದರು.

ಅಚ್ಯುತರಾಯನು ತನ್ನಲ್ಲಿಯೇ ಆಲೋಚನೆ ಮಾಡಿಕೊಂಡನು ನಾನು ಈ ಸಲಕ ಸಹೋದರರೊಂದಿಗೆ ಹೇಳಿದ ಮಾತುಗಳೇ ಬೇರೆ. ಮಂತ್ರಿಗಳು ನಿಶ್ಚಯಿಸಿರುವ ವಿಧಾನವೇ ಬೇರ. ಅಂದು ರಾಮರಾಯರ ಅಭಿಮತವನ್ನು ಕೋರಿ ಪತ್ರ ಬರೆಸಿದ್ದಾರೆ. ಮಂತ್ರಿಗಳು ಇಂದು ರಾಮರಾಯರನ್ನೇ ಕರೆಸಿ ಈ ಮಹತ್ಕಾರ್ಯವನ್ನು ಅವರಿಗೆ ವಹಿಸಬೇಕೆಂದು ಸೂಚಿಸಿದ್ದಾರೆ. ಇದು ಬಹಳ ನ್ಯಾಯಸಮ್ಮತವಾಗಿದೆ. ವೆಂಕಟಾದ್ರಿಗೆ ಪಟ್ಟಕಟ್ಟಿಸಿ ರಾಮರಾಯರಿಗೆ ರಾಜ್ಯಾಧಿಕಾರವನ್ನು ವಹಿಸಿಬಿಟ್ಟರೆ ನಾನು ನಿಶ್ಚಿಂತನಾಗಿರಬಹುದು. ಯಾವ ದೇಶದಲ್ಲಾದರೂ ಇರಬಹುದು. ಯಾವ ಕ್ಷೇತ್ರದಲ್ಲಾದರೂ ವಾಸಮಾಡ ಬಹುದು ಎಂದುಕೊಂಡು ರಾಮರಾಯನಿಗೆ ತಾನೇ ಖುದ್ದಾಗಿ ಪತ್ರ ಬರೆಯ ಬೇಕೆಂದು ನಿಶ್ಚಯಿಸಿದನು. ಅಚ್ಯುತರಾಯನು ಬರೆದ ಪತ್ರವು ಈ ರೀತಿ ಯಾಗಿದ್ದಿತು.

ಚಂದ್ರಗಿರಿಯ ಮಂಡಲೇಶ್ವರರಾದ ರಾಜಶ್ರೀ ಅಳಿಯ ರಾಮರಾಯ ರವರಿಗೆ ವಿಜಯನಗರದ ಮಹಾರಾಜ ಅಚ್ಯುತರಾಯನು ನಿಮಗೆ ಬರೆಯು ತ್ತಿರುವ ಪತ್ರವಿದು. ವಿರೂಪಾಕ್ಷನ ಪ್ರೇರಣೆಯಿಂದ ನಾನು ಈ ಪತ್ರವನ್ನು ನಿಮಗೆ ಬರೆಯುತ್ತಿದ್ದೇನೆ.

ನಾನು ರಾಜ್ಯತ್ಯಾಗಮಾಡುವ ನಿರ್ಧಾರಮಾಡಿದ್ದೇನೆ. ಇದಕ್ಕೆ ಕಾರಣವಿಷ್ಟೆ. ನಾನು ಜ್ಞಾನಿಯೂ ಅಲ್ಲ, ವಿರಕ್ತನೂ ಅಲ್ಲ. ದುರದೃಷ್ಟ ವಶಾತ್ ನಾನು ಜನಪ್ರಿಯನಾದ ಮಹಾರಾಜನಾಗಿಲ್ಲ ದುಷ್ಟದಮನ ಸಾಮರ್ಥ್ಯವು ನನಗಿಲ್ಲ. ಆದರೆ ಈ ಸಿಂಹಾಸನವು ಜನಪ್ರಿಯವಾಗಿರಬೇಕು. ನಮ್ಮ ಚಕ್ರಾಧಿಪತ್ಯದಲ್ಲಿ ದುಷ್ಟಶಿಕ್ಷಣ ಶಿಷ್ಟಪರಿಪಾಲನೆಗಳು ಅವ್ಯಾಹತವಾಗಿ ನಡೆಯಬೇಕು. ಧರ್ಮವು ಬೆಳಗಬೇಕು. ಅದಕ್ಕಾಗಿ ರಾಜ್ಯಪರಿತ್ಯಾಗ ಮಾಡುತ್ತಿದ್ದೇನೆ.

ಮುಂದೆ ಸಿಂಹಾಸನಕ್ಕೊಬ್ಬ ರಾಜವಂಶೀಯನನ್ನು ಚುನಾಯಿಸುವುದು ನಮ್ಮ ಕರ್ತವ್ಯ ಮತ್ತು ನಿಮ್ಮ ಕರ್ತವ್ಯ. ನನ್ನ ಮಗನಾದ ವೆಂಕಟಾದ್ರಿ ರಾಯನಿಗೆ ಪಟ್ಟ ಕಟ್ಟಬಹುದೆಂದು ನನಗೆ ಯೋಚನೆ ಹೊಳೆಯುತ್ತಿದೆ. ನನ್ನ ವಂಶದವರಿಗೆ ಈ ಸಿಂಹಾಸನವು ಶಾಶ್ವತವಾಗಿರಲಿ ಎಂಬ ರಾಜ್ಯಲೋಭದಿಂದ ನಾನು ಪ್ರೇರೇಪಿತನಾಗಿಲ್ಲ. ನೀವೆಲ್ಲರೂ ಯಾರನ್ನು ಚುನಾಯಿಸಿದರೆ ಅವರಿಗೆ ನಾನೇ ನಿಂತು ಪಟ್ಟಾಭಿಷೇಕಮಾಡಿಸಲು ಸಂತೋಷವುಳ್ಳವನಾಗಿದ್ದೇನೆ ಇದನ್ನು ಮಾತೂಶ್ರೀ ರಾಣಿಯವರುಗಳು ಒಪ್ಪಿರುತ್ತಾರೆ. ನಮ್ಮ ರಾಜ್ಯದಲ್ಲಿ ರುವ ನವಮಂತ್ರಿಗಳು ಅಂಗೀಕಾರಮಾಡಿದ್ದಾರೆ. ಅಳಿಯ ರಾಮರಾಯ ರವರು ರಾಜಧಾನಿಗೆ ಬಂದು ಪ್ರಧಾನಾಮಾತ್ಯಪದವಿಯನ್ನು ಪುನಃ ಸ್ವೀಕರಿಸಿ ಈ ಕಾರ್ಯವನ್ನು ನೆರವೇರಿಸುವ ಭಾರವನ್ನು ಒಪ್ಪಿಕೊಳ್ಳಲಿ ಎಂಬುದು ಮಂತ್ರಿಗಳ ಪುರಪ್ರಮುಖರ ಏಕಾಭಿಪ್ರಾಯವಾಗಿದೆ. ರಾಜರಿಗೆ ಪಟ್ಟ ಕಟ್ಟುವುದೆಂದರೂ ಸಿಂಹಾಸನದ ಪ್ರತಿಷ್ಠಾಪನೆಯೆಂದರೂ ಎರಡೂ ಗುರುತರ ವಾದ ಮಹತ್ಕಾರ್ಯಗಳಂತೆ. ಇದಕ್ಕೆ ನೀವೊಬ್ಬರೇ ಸಮರ್ಥರು ಚಕ್ರಾಧಿ ಪತ್ಯದ ಹಿತದೃಷ್ಟಿಯಿಂದ ನಮ್ಮ ಪೂರ್ವಜರ ಕೀರ್ತಿಯನ್ನು ಶಾಶ್ವತವಾಗಿ ಉಳಿಸುವ ದೃಷ್ಟಿಯಿಂದ ನೀವು ಈ ಕಾರ್ಯವನ್ನು ಒಪ್ಪಿಕೊಳ್ಳಬೇಕು. ನಾನು ಈ ಪತ್ರವನ್ನು ಈಶ್ವರಸಾಕ್ಷಿಯಾಗಿ ಬರೆಯುತ್ತಿದ್ದೇನೆ. ನೀವೂ ಹಾಗೆಯೇ ಅಂಗೀಕಾರಮಾಡುತ್ತೀರೆಂದು ನನಗೆ ದೃಢವಾದ ನಂಬಿಕೆಯಿದೆ.

ಶ್ರೀ ಅಚ್ಯುತರಾಯ.

ಹೀಗೆ ಪತ್ರವನ್ನು ಬರೆದು ದೊಡ್ಡಣ್ಣ ದಂಡನಾಯಕನನ್ನು ಕರೆಸಿ ಈ ಪತ್ರವನ್ನು ಚಂದ್ರಗಿರಿಗೆ ತೆಗೆದುಕೊಂಡು ಹೋಗಿ ಅಳಿಯ ರಾಮರಾಯರಿಗೆ ಒಪ್ಪಿಸಿ ಅವರನ್ನೂ ಅವರ ಸಹೋದರರನ್ನೂ ಜೊತೆಯಲ್ಲಿಯೇ ಕರತರಬೇಕು ಎಂದು ಅಪ್ಪಣೆ ಮಾಡಿದನು.

ಆ ದೊಡ್ಡಣ್ಣ ದಂಡನಾಯಕನು ಲಕ್ಕೋಟೆಯನ್ನು ಸ್ವೀಕರಿಸಿ, ಮಹಾರಾಜರಿಗೆ ಅಭಿವಾದನಮಾಡಿ ಹೊರಟುಹೋದನು.

## ೧೪

ಚಂದ್ರಗಿರಿಯಲ್ಲಿ ಅಳಿಯ ರಾಮರಾಯನು ಮಹಾರಾಜರ ಪತ್ರವನ್ನು ಓದಿನೋಡಿಕೊಂಡನು. ದೊಡ್ಡಣ್ಣ ದಂಡನಾಯಕನನ್ನು ಕುರಿತು, ರಾಜಧಾನಿಯ ರಾಜಕೀಯಗಳ ವಿಚಾರವಾಗಿ ಅನೇಕ ಪ್ರಶ್ನೆಗಳನ್ನು ಹಾಕಿದನು ದಂಡನಾಯಕನು, ರಾಮರಾಯರವರೇ ತಾವು ನಮ್ಮೆಲ್ಲರಿಗೂ ಹಿರಿಯರು. ತಮ್ಮ ಪ್ರಶ್ನೆಗಳಿಗೆಲ್ಲಾ ಉತ್ತರಕೊಡುವಷ್ಟು ಸಾಮರ್ಥ್ಯವು ನನಗೆಲ್ಲಿದೆ. ಮಹಾರಾಜರ ಪತ್ರದಲ್ಲಿ ಎಲ್ಲ ಮುಖ್ಯಾಂಶಗಳೂ ಅಡಕವಾಗಿರಬಹುದು ಮತ್ತೇನಾದರೂ ಉಳಿದಿದ್ದರೆ, ಅದನ್ನು ತಾವು ಊಹಿಸಿಕೊಳ್ಳಬಲ್ಲಿರಿ ನನ್ನಂಥವನು ಮತ್ತೇನು ಹೇಳತಕ್ಕದ್ದಿದೆ

ದೊಡ್ಡಣ್ಣ ನಿನಗೆಷ್ಟು ತಿಳಿದಿದೆಯೋ ಅಷ್ಟನ್ನು ಹೇಳು ನಾವು ವಿಜಯನಗರದ ದರಬಾರಿನ ವಿಚಾರಗಳನ್ನೆಲ್ಲಾ ಉದ್ದೇಶ್ಯಪೂರ್ವಕವಾಗಿ ಮರೆತು ಬಿಟ್ಟಿದ್ದೇವೆ. ಮೊದಲು ಮಹಾರಾಜರ ವಿಷಯವನ್ನು ಹೇಳು. ಅವರೇಕೆ ರಾಜ್ಯಪರಿತ್ಯಾಗ ಮಾಡುತ್ತಾರೆ.

ದಂಡನಾಯಕನು ಎದ್ದು ನಿಂತು “ ರಾಮರಾಯರವರೇ ! ಅದೊಂದು ವಿಚಾರವನ್ನು ಮಾತ್ರಾ ಕೇಳಬೇಡಿರಿ ನಿಜವಾಗಿಯೂ ಆ ರಹಸ್ಯವನ್ನು ಯಾರೂ ಅರಿಯರು. ಮಹಾರಾಜರಿಗಾದರೂ ಗೊತ್ತಿದೆಯೋ ಇಲ್ಲವೋ. ಆ ಮಾತನಾಡುವುದಕ್ಕಂತೂ ನಾನು ಅರ್ಹನಲ್ಲ.”

ರಾಮರಾಯನು ನಕ್ಕು ಅದು ಸ್ವಯಂ ವೇದ್ಯವಾಗಿದೆ ಅದನ್ನು ಹೇಳುವ ಕೇಳುವ ಅವಶ್ಯಕತೆಯೇ ಇಲ್ಲ. ಆ ಸಲಕ ಸಹೋದರರು ಅಧಿಕಾರವನ್ನು ಬಿಡುತ್ತಾರೆಯೇ ? ”

ಬಿಡುತ್ತೇವೆಂದು ಹೇಳುತ್ತಾರಂತೆ ಆದನ್ನು ನಂಬುವುದಕ್ಕೂ ಕಾರಣ ಗಳಿವೆ. ಎಲ್ಲ ಕಡೆಯೂ ಮಂಡಲೇಶ್ವರರು ತಿರುಗಿಬಿದ್ದಿದ್ದಾರೆ. ಅವರುಗಳ ಮೇಲೆ ಯುದ್ಧಕ್ಕೆ ಹೋಗಬೇಕು ಆ ಸಲಕ ಸಹೋದರರೂ ತಿರುಮಲ ರಾಯರು, ತಿರುಮಲರಾಜರು, ರಾಜಾಧಿರಾಜರು, ಅಪ್ರತಿಮವೀರರು ಎಂದು ಹೊಗಳಿಸಿಕೊಳ್ಳುತ್ತಾರೆ ಆದನ್ನೆಲ್ಲಾ ಪ್ರತ್ಯಕ್ಷವಾಗಿ ತೋರಿಸಿಕೊಡುವ ಕಾಲವು ಬಂದಿದೆ ಅಷ್ಟೇ ಅಲ್ಲ. ರಾಜಧಾನಿಯನ್ನು ಬಿಟ್ಟುಹೋಗಲು ಅವರು ಬಡಪೆಟ್ಟಿಗೆ ಒಪ್ಪುವುದಿಲ್ಲವೆಂದು ಕಾಣುತ್ತದೆ.

ಹಾ ! ಅದೇನೋ ಸರಿಯಾಗಿದೆ. ಯುದ್ಧಕ್ಕೆ ಹೋಗುವವರು ಯಾರೂ ಇಲ್ಲ. ರಾಜ್ಯಾಧಿಕಾರ ನಡೆಸಲು ಎಲ್ಲರಿಗೂ ಅಪೇಕ್ಷೆಯಿದೆ. ಹೊಸ ರಾಜರಿಗೆ ಪಟ್ಟಾಭಿಷೇಕ ಮಾಡಿ ಈ ಗೊಂದಲವನ್ನೆಲ್ಲಾ ನಮ್ಮ ಕೈಗೊಪ್ಪಿಸಿ ಪ್ರತಿಭಟನೆ ಯನ್ನು ನಮ್ಮ ಕಡೆಗೆ ತಿರುಗಿಸುವಂತಹ ಪ್ರಸಂಗವನ್ನು ತಂದೊಡ್ಡಿದ್ದಾರೆ. ಇರಲಿ, ಈ ಪ್ರಕರಣದಲ್ಲಿ ಮಿತ್ರರಾರು ಶತ್ರುಗಳಾರು

ದೊಡ್ಡಣ್ಣನು ಈ ಸಮಾಚಾರವು ರಾಜಧಾನಿಯಲ್ಲಿ ಇನ್ನೂ ಪೂರ್ತಿ ಯಾಗಿ ಹಬ್ಬಿಲ್ಲ ದೊಡ್ಡದೊಡ್ಡವರ ಕಿವಿ ಬಾಯಿಗಳಲ್ಲಿ ಮಾತ್ರಾ ಓಡಾಡು ತ್ತಿದೆ. ಈ ಸಲಹೆಯೂ ಕೂಡಾ ವೃದ್ಧಮಂತ್ರಿ ಮುದ್ದಣ್ಣನವರದೆಂದು ಅಧಿಕಾರಿಗಳು ಮಾತನಾಡುತ್ತಾರೆ. ಮುದ್ದಣ್ಣನವರು ಮಂತ್ರಿಗಳೆಲ್ಲರನ್ನು ಕರೆದುಕೊಂಡು ಮಹಾರಾಜರಲ್ಲಿಗೆ ಹೋಗಿದ್ದರಂತೆ ಮಂತ್ರಾಲೋಚನೆಯು ಘಟ್ಟಘಟ್ಟಿಯಾಗಿಯೇ ನಡೆಯಿತಂತೆ. ಮಹಾರಾಜರೇ ಸಿಂಹಾಸನದ ಮೇಲಿರಲಿ ಯುವರಾಜರಿಗೆ ಪಟ್ಟಕಟ್ಟಲಿ. ಸಲಕ ಸಹೋದರರು ಅಧಿಕಾರ ವನ್ನು ಬಿಟ್ಟುಹೋಗಬೇಕು ಅಳಿಯ ರಾಮರಾಯರಿಗೆ ಮಹಾಪ್ರಧಾನ ಪಟ್ಟ ವನ್ನು ಕಟ್ಟಬೇಕು. ಆಮೇಲೆ ಮುಂದಿನಮಾತು ಈಗ ಮಾತನಾಡಿದರೆ ಪ್ರಮಾದ ಗಳು ಘಟಿಸಬಹುದು ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರಂತೆ. ಈಗ ರಾಜಧಾನಿಯಲ್ಲಿ ಮಹಾರಾಜರ ರಾಜ್ಯಪರಿತ್ಯಾಗ ಯುವರಾಜರ ಪಟ್ಟಾಭಿಷೇಕ ಇದೆಲ್ಲಾ ಹಿಂದಕ್ಕೆ ಹೋಗಿಬಿಟ್ಟದೆ. ಸಲಕ ಸಹೋದರರ ಅಧಿಕಾರ ನಿವೃತ್ತಿ, ತಮ್ಮ ಅಧಿಕಾರ ಈ ಮಾತುಗಳೇ ಎಲ್ಲರ ಬಾಯಿಯಲ್ಲಿಯೂ ತಾಂಡವ

ಮಾಡುತ್ತಿದೆ. ಇದಕ್ಕೆ ಸರ್ವ ಸಮ್ಮತಿಯಿದೆಯೆಂದು ಅರ್ಥವಾಗುತ್ತದೆ ಎಂದು ಹೇಳಿದನು.

ರಾಮರಾಯನು "ದೊಡ್ಡಣ್ಣಾ ! ನೀನು ಇನ್ನೂ ತರುಣ. ಜನರ ಬಾಯಲ್ಲಿ ಬರುವ ಮಾತುಗಳೇ ಬೇರೆ ರಾಜರಹಸ್ಯವೇ ಬೇರೆ. ಮಂತ್ರಿ ಮುದ್ದಣ್ಣನವರು ಸಾಮಾನ್ಯರಲ್ಲ. ಎಲ್ಲರ ಮನಸ್ಸನ್ನು ಕಲಕಿ ಅಳೆದು ನೋಡಲು ಈ ಮಾತುಗಳನ್ನು ಆಡಿದ್ದಾರೆ ಮಹಾರಾಜರಿಗೂ ಸಲಕ ಸಹೋದರರಿಗೂ ನಮಗೂ ಮಂತ್ರಿ ಮುದ್ದಣ್ಣನವರು ಸವಾಲ್ ಹಾಕಿರುತ್ತಾರೆ. ಒಳ್ಳೆಯದು ಆಲೋಚನೆ ಮಾಡಿ ಉತ್ತರ ಕೊಡಿಸುತ್ತೇನೆ ನೀನು ನಮ್ಮ ರಾಜಧಾನಿಯಲ್ಲಿ ಕೊಂಚ ವಿಶ್ರಮಿಸಿಕೋ.

ದೊಡ್ಡಣ್ಣನು ತಮ್ಮ ಅಪ್ಪಣೆಯಂತೆ ನಡೆಯುತ್ತೇನೆ ತಮ್ಮ ಸನ್ನಿಧಾನದಲ್ಲಿಯೇ ಇದ್ದುಬಿಡು ಎಂದರೂ ಅದಕ್ಕೂ ಸಿದ್ಧ. ಆದರೆ ಮಹಾರಾಜರವರ ಖುದ್ದು ಅಪ್ಪಣೆಯಾಗಿದೆ. ತಮ್ಮನ್ನು ತಮ್ಮ ಸಹೋದರರನ್ನು ಜೊತೆಯಲ್ಲಿಯೇ ಕರೆತರಬೇಕೆಂದು ಆಜ್ಞೆ ಮಾಡಿದ್ದಾರೆ"

ರಾಮರಾಯನು ಒಳ್ಳೆಯ ಕೆಲಸ ಈ ಕೆಲಸಕ್ಕೆ ಒಳ್ಳೆಯ ದಂಡನಾಯಕನನ್ನು ಮಹಾರಾಜರು ಚುನಾಯಿಸಿದ್ದಾರೆ ಇರಲಿ ಎರಡು ದಿನಗಳು ಇಲ್ಲಿರು ಎಂದು ಹೇಳಿ ರಾಜಗೃಹಕ್ಕೆ ಕಳುಹಿಸಿಕೊಟ್ಟನು. ದ್ವಾರಪಾಲಕರನ್ನು ಕರೆದು ತಿರುಮಲರಾಯನನ್ನು ಕರೆತರುವಂತೆ ಅಪ್ಪಣೆ ಮಾಡಿದನು.

ತಿರುಮಲರಾಯನು ತನ್ನ ಸಮೀಪಕ್ಕೆ ಬರುತ್ತಲೇ ಅಚ್ಯುತರಾಯನ ಪತ್ರವನ್ನು ತಿರುಮಲರಾಯನ ಕೈಗೆ ಕೊಟ್ಟುನೋಡು ತಿರುಮಲರಾಯ ಮಹಾರಾಜರ ಪತ್ರವಿದು ಅದರಲ್ಲಿರುವ ಮಾತುಗಳೆಲ್ಲಾ ನಿನಗೂ ಅನ್ವಯಿಸುತ್ತದೆ.

ತಿರುಮಲರಾಯನು ಆ ಪತ್ರವನ್ನು ಕೈಗೆ ತೆಗೆದುಕೊಂಡು ಓದುತ್ತಾ, ಮಹಾರಾಜರ ಖುದ್ದು ಪತ್ರವಿದು ಸ್ವಹಸ್ತಾಕ್ಷರಗಳು ಎಂದು ಹೇಳಿ ಆಮೂಲಾಗ್ರವಾಗಿ ಪತ್ರವನ್ನು ಓದಿಕೊಂಡನು.

ತಿರುಮಲನು ರಾಮರಾಯನ ಕಡೆಗೆ ತಿರುಗಿ, "ಅಪ್ಪಾಜಿ, ಸಲಕ

ಸಹೋದರರು ನಮಗೆ ಬರೆದಿರುವ ಪತ್ರದ ಉತ್ತರಾರ್ಧವಿದು ಇದರಲ್ಲಿ ಹೊಸದಾಗಿ ಯೋಚಿಸುವ ಅಂಶಗಳೇನೂ ಕಾಣುವುದಿಲ್ಲ."

ರಾಮರಾಯನು "ಏಕಿಲ್ಲ? ಅನೇಕ ಹೊಸ ಅಂಶಗಳು ಈ ಪತ್ರದಲ್ಲಿ ಅಡಕವಾಗಿವೆ"

ತಿರುಮಲರಾಯನು "ಹೂಂ! ಅವೆಲ್ಲವೂ ಪ್ರಲೋಭವಚನಗಳು ಎಂದು ತಿರಸ್ಕಾರದ ನಗುವನ್ನು ನಕ್ಕನು.

ರಾಮರಾಯನು, "ಹಾಗೆ ಹೇಳುವುದಕ್ಕಾಗುವುದಿಲ್ಲ. ಇದು ಮಹಾ ರಾಜರ ಪತ್ರ ಇದರಲ್ಲಿ ವಂಚನೇಯೆನೂ ಕಾಣುವುದಿಲ್ಲ ಇದಕ್ಕೆ ಉತ್ತರ ಕೊಟ್ಟೇಕೊಡಬೇಕು" ಎಂದನು.

ತಿರುಮಲರಾಯನು ನೀವು ದೊಡ್ಡವರು, ಸಾಮರ್ಥ್ಯಶಾಲಿಗಳು ಏನು ಉತ್ತರ ಕೊಡಬೇಕೋ ಅದನ್ನು ನೀವೇ ಕೊಡಬೇಕು. ಆ ಬಗ್ಗೆ ನನ್ನನ್ನು ಕೇಳುವುದೇನಿದೆ?

ರಾಮರಾಯನು ತಿರುಮಲ ಹುಚ್ಚನಂತೆ ಮಾತನಾಡಬೇಡ. ಆ ಪತ್ರಕ್ಕೆ ನೀನು ಉತ್ತರ ಕೊಡಬೇಕು."

ನಾನೇ ಆ ಉತ್ತರಕೊಡುವ ಸ್ವಾತಂತ್ರ್ಯವನ್ನು ನನಗೆ ಒಪ್ಪಿಸುತ್ತೀರಾ? ಹಾಗಾದರೆ ನಾವು ವಿಜಯನಗರಕ್ಕೆ ಬರುವುದಿಲ್ಲ ಎಂದು ಬರೆದು ಕಳಿಸುತ್ತೇನೆ.

ತಿರುಮಲ! ರಾಜಕೀಯದಲ್ಲಿ ಅಷ್ಟು ದುಡುಕಬಾರದು. ಮಾತಿನಲ್ಲಿ ಮಿತಿಯಿರಬೇಕು ಹತೋಟಿಯಿರಬೇಕು. ಅರ್ಥವಿರಬೇಕು. ಈ ಪ್ರಮೇಯ ದಲ್ಲಿ ಯೋಚಿಸಬೇಕಾದ ಅನೇಕ ಸಂಗತಿಗಳಿವೆ. ವಿಜಯನಗರದ ಮಂತ್ರಿ ಗಳೆಲ್ಲರೂ ಏಕವಾಕ್ಯತೆಯಿಂದ ಮಹಾರಾಜರ ಮೇಲೆ ಈ ಗಾಂಡೀವವನ್ನು ಪ್ರಯೋಗಿಸಿದ್ದಾರೆ. ಅದು ಒಂದು ಕಡೆಯ ಅಭಿಪ್ರಾಯ. ಸಾಮ್ರಾಜ್ಯದಲ್ಲಿ ಮಂಡಲೇಶ್ವರರುಗಳು ತಿರುಗಿಬಿದ್ದಿದ್ದಾರೆ. ಆದರಿಂದ ಮಹಾರಾಜರು ಭೀತ ರಾಗಿದ್ದಾರೆ. ಇದು ಮತ್ತೊಂದು ಕಡೆಯ ಅಭಿಪ್ರಾಯ.

ತಿರುಮಲರಾಯನು ಅಣ್ಣಾಜೀ ಈ ಅಭಿಪ್ರಾಯಗಳಿಗೆಲ್ಲಾ ಅರ್ಥವಿಲ್ಲ ಮಹಾರಾಜನು ಅಸಮರ್ಥನಾದರೆ, ಅವಿವೇಕಿಗಳ ಕೈಗೆ ರಾಜ್ಯಭಾರವು ಸಿಕ್ಕಿದರೆ

ಮಂಡಲೇಶ್ವರರು ತಿರುಗಿಬೀಳದೇ ಮತ್ತೇನಾಗುವುದು. ಮಹಾರಾಜರು ಅವರ ಮಗ ವೆಂಕಟಾದ್ರಿಗೆ ಪಟ್ಟಕಟ್ಟಸುತ್ತಾರೆ. ನಾವು ಆ ಹುಡುಗನ ಸೇವಕ ರಾಗಿ ದುಡಿಯಬೇಕು. ವಿರೋಧಿಗಳೊಡನೆ ಯುದ್ಧಮಾಡಬೇಕು. ಇದೆಲ್ಲಾ ಎಲ್ಲಿಯ ಕಥೆ ನಾವು ಆ ಗೊಡವೆಗೆ ಹೋಗಬಾರದು. ಅಚ್ಯುತರಾಯನೂ ಅವನ ಸಲಕ ಸಹೋದರರೂ ಈ ಯುವರಾಜ ವೆಂಕಟಾದ್ರಿಯೂ ಕಲ್ಲು ಕಟ್ಟಿಕೊಂಡು ಸಮುದ್ರದಲ್ಲಿ ಬಿದ್ದು ಸಾಯಲಿ ನೋಡಿ ವಿಜಯನಗರವು ವಿದ್ಯಾರಣ್ಯ ಮಹಾಮುನಿಗಳ ತಪಸ್ಸಿನಿಂದ ನಿರ್ಮಾಣವಾದದ್ದು. ಪೂರ್ವದ ರಾಜರುಗಳು ಆ ಅಭೇದ್ಯವಾದ ಕೋಟೆಯನ್ನೂ ಆ ದಿವ್ಯನಗರಿಯನ್ನೂ ಕಟ್ಟಿದರು. ಅನೇಕ ರಾಜರುಗಳು ಆಳಿಹೋದರು. ಅವರವರ ಪುಣ್ಯಾಪಾಪಗಳು ಆ ವಿಜಯನಗರದಲ್ಲಿ ತುಂಬಿದೆ. ಪಿತೃವಧೆಯನ್ನು ಮಾಡಿದ ರಾಜರುಂಟು. ಭ್ರಾತೃವಧೆ ಮಾಡಿದವರುಂಟು. ಆದರೂ ಆ ರಾಜ್ಯವು ಇನ್ನು ಉಳಿದಿರುವುದು ಆಶ್ಚರ್ಯ. ಆ ಮಹಾಮಹಿಮರ ತಪಃಪ್ರಭಾವವು ಇನ್ನೂ ಮುಗಿದಿಲ್ಲ. ರಾಜ್ಯ ಉಳಿದಿದೆ. ಈ ರಾಜರು ಈ ಸಲಕ ಸೋದರರೂ ಈ ಯುವರಾಜ ಎಲ್ಲರೂ ಹೋದರೂ ರಾಜ್ಯವು ಉಳಿಯುತ್ತದೆ. ಇವರುಗಳನ್ನು ಉದ್ಧರಿಸುವುದಕ್ಕಾಗಿ ನೀವೇಕೆ ಹೋಗಿ ತಲೆಕೊಡಬೇಕು ? ಮಂಡಲೇಶ್ವರರು ತಿರುಗಿಬಿದ್ದಿದ್ದರೆ ಅದರಲ್ಲಿ ತಪ್ಪೇನು. ವಿಜಯನಗರದ ನವಮಂತ್ರಿಗಳು ನಮ್ಮ ಮೇಲೇಕೆ ಈ ಪೀಡೆಯನ್ನು ಹೊರಿಸುತ್ತಾರೆ. ಯುವರಾಜನಾದರೂ ರಾಜ್ಯತ್ಯಾಗ ಮಾಡಲಿ. ಯಾವನಿಗಾದರೂ ಪಟ್ಟಕಟ್ಟಲಿ ಇದೆಲ್ಲಾ ಪ್ರಲೋಭವಲ್ಲದೇ ಮತ್ತೇನು ? ಆ ಅಚ್ಯುತರಾಯನೂ ರಾಜ್ಯಪರಿತ್ಯಾಗ ಮಾಡುವುದೆಂದರೆ ಅರ್ಥವೇನು ? ವನಕ್ಕೆ ಹೋಗಿ ತಪಸ್ಸು ಮಾಡುತ್ತಾನೇನು ? ನಿರಾತಂಕವಾಗಿ ಮತ್ತಷ್ಟು ಮದ್ಯಪಾನ ಮಾಡುತ್ತಾನೆ. ಸುಂದರಸ್ತ್ರೀಯರನ್ನು ಅಪಹರಣ ಮಾಡುತ್ತಾನೆ ಅವನನ್ನು ನೀವೇನು ಮಾಡಬಲ್ಲಿರಿ. ಈ ಪತ್ರಗಳಿಗೆಲ್ಲಾ ತಿರಸ್ಕಾರವೇ ಉತ್ತರ.

ರಾಮರಾಯನು ತಿರುಮಲ ನೀನು ಹಟವಾದಿಯಾಗಿದ್ದೀಯೆ. ಈಗ ಹೋಗು, ಸಮಾಧಾನವಾಗಿ ನಾಳೆ ಬಾ ! ವಿಜಯನಗರದಿಂದ ಈ ಪತ್ರವನ್ನು

ತೆಗೆದುಕೊಂಡು ದೊಡ್ಡಣ್ಣ ದಂಡನಾಯಕನು ಬಂದಿದ್ದಾನೆ. ಅವನನ್ನು ನಿನ್ನ ಜೊತೆಯಲ್ಲಿಟ್ಟುಕೊಂಡು ಊಟ ಉಪಚಾರಗಳನ್ನು ಮಾಡಿ ಆದರಿಸು ಅದು ನಮ್ಮ ಕರ್ತವ್ಯ ಅವನೊಡನೆ ಎಲ್ಲ ವಿಚಾರಗಳನ್ನು ಸಾವಧಾನವಾಗಿ ಮಾತ ನಾಡು ನಾಳೆ ನನ್ನಲ್ಲಿಗೆ ಬಾ. ನಾವು ಕಲೆತು ಮಾತನಾಡಿಕೊಂಡು ಈ ಪತ್ರಕ್ಕೆ ಒಂದು ಸದುತ್ತರವನ್ನು ಬರೆದು ಕಳುಹಿಸೋಣ. ವಿಜಯನಗರದಲ್ಲಿ ಮುಂದೇ ನಾಗುವುದೋ ಕಾದುನೋಡೋಣ ಎಂದು ಹೇಳಿದನು

ತಿರುಮಲರಾಯನು ರಾಮರಾಯನ ಅಪ್ಪಣೆ ಪಡೆದು ತನ್ನ ಮನೆಗೆ ತೆರಳಿದನು.

ಮಾರನೆಯದಿನ ರಾಮರಾಯನು ತಿರುಮಲರಾಯನ ಕೈಯಿಂದಲೇ ಮಹಾರಾಜನಿಗೆ ಒಂದು ಪತ್ರ ಬರೆಸಿದನು.

“ ರಾಜಾಧಿರಾಜ ವಿಜಯನಗರದ ಸಾರ್ವಭೌಮ ಶ್ರೀ ಅಚ್ಯುತರಾಯ ಮಹಾರಾಜರವರ ಸನ್ನಿಧಾನಕ್ಕೆ—

ಚಂದ್ರಗಿರಿಯ ರಾಮರಾಯನೂ ತಿರುಮಲರಾಯನೂ ವಿಜ್ಞಾಪಿಸಿ ಕೊಳ್ಳುವ ಪರಿಯೇನೆಂದರೆ —

ಮಹಾರಾಜರವರು ವಿಶ್ವಾಸಪೂರ್ವಕವಾಗಿ ಬರೆಸಿರುವ ಪತ್ರವನ್ನು ಸಂತೋಷದಿಂದ ಸ್ವೀಕರಿಸಿದ್ದೇವೆ ನಾವು ವಿಜಯನಗರವನ್ನು ಬಿಟ್ಟು ಬಂದ ಮೇಲೆ ಅಲ್ಲಿಯ ವಿದ್ಯಮಾನಗಳೇ ನಮಗೆ ತಿಳಿಯದು. ಈ ಪತ್ರವು ಇದ್ದಕ್ಕಿದ್ದಂತೆ ಬಂದು ನಮ್ಮ ಮನಸ್ಸಿಗೆ ಚಿಂತೆಯನ್ನೂ ಸಂತಸವನ್ನೂ ಉಂಟು ಮಾಡಿದೆ. ಮಹಾರಾಜರ ರಾಜ್ಯಪರಿತ್ಯಾಗ ಯುವರಾಜರ ಪಟ್ಟಾಭಿಷೇಕ ಇವೆರಡೂ ಯುಗಾದಿಹಬ್ಬದ ಬೇವುಬೆಲ್ಲಗಳಂತೆ ನಮಗೆ ಕಾಣುತ್ತಿವೆ. ಅಲ್ಲಿ ರುವ ಮಾತೂಶ್ರೀಯವರುಗಳೂ ವಂಶಪರಂಪರಾನುಗತವಾಗಿ ಬಂದಿರುವ ಮಂತ್ರಿಗಳೂ ಪುರಪ್ರಮುಖರೂ ಹೇಗೆ ಅಭಿಪ್ರಾಯಪಡುತ್ತಾರೋ ಅದಕ್ಕೆ ಮನ್ನಣೆಯು ಇದ್ದೇ ಇರುತ್ತದೆ. ಉನ್ನತಾಧಿಕಾರಗಳಲ್ಲಿರುವ ಸಲಕ ಸಹೋದರರು ಮಹಾರಾಜರವರಿಗಾಗಲೀ ಯುವರಾಜರವರಿಗಾಗಲೀ ದೂರದವ ರೇನೂ ಅಲ್ಲ. ಮಹಾರಾಜರ ಪ್ರೀತಿವಿಶ್ವಾಸಗಳಿಗೆ ಅವರಿಬ್ಬರೂ ಪಾತ್ರರು.

ಸೋದರಳಿಯಂದಿರಾದ ಯುವರಾಜರ ಮೇಲೆ ಅವರಿಗೆ ಪ್ರಗಾಢಪ್ರೇಮವಿರುವುದು ಸ್ವಾಭಾವಿಕ. ಅವರ ಸ್ಥಾನದಲ್ಲಿ ಅವರಿರಲಿ. ನಮ್ಮ ಸ್ಥಾನದಲ್ಲಿ ನಾವು ಮಹಾಪ್ರಭುಗಳ ಸೇವೆಗೆ ಸಿದ್ಧರಾಗಿದ್ದೇವೆ. ಅಣ್ಣ ರಾಮರಾಯರು ವ್ಯಾಧಿಗ್ರಸ್ತರಾಗಿದ್ದಾರೆ. ಈಗ ವಿಜಯನಗರಕ್ಕೆ ಬರುವ ಶಾರೀರಕ ಬಲವು ಅವರಲ್ಲಿ ಇಲ್ಲವಾಗಿದೆ. ನಾನು ಅವರನ್ನು ಬಿಟ್ಟುಬರುವಂತಿಲ್ಲ. ಅವರು ಆರೋಗ್ಯಭಾಗ್ಯವನ್ನು ಪಡೆಯುತ್ತಲೇ ನಾವು ಸಹೋದರರಿಬ್ಬರೂ ವಿಜಯನಗರಕ್ಕೆ ಬಂದು ಮಹಾರಾಜರ ದರ್ಶನ ಪಡೆಯುತ್ತೇವೆ. ಉಳಿದ ಸಮಾಚಾರಗಳೆಲ್ಲವೂ ದೊಡ್ಡಣ್ಣ ದಂಡನಾಯಕರಿಂದ ತಿಳಿಯಬರುತ್ತವೆ

ಇತಿ ಶ್ರೀ ತಿರುಮಲರಾಯ

ಈ ಪತ್ರವನ್ನು ರಾಮರಾಯನು ಮತ್ತೊಮ್ಮೆ ಓದಿ ನೋಡಿಕೊಂಡು ಲಕ್ಕೋಟೆಯಲ್ಲಿ ಹಾಕಿ ಮೊಹರು ಮಾಡಿಸಿ ಮಹಾರಾಜರ ವಿಳಾಸವನ್ನು ಬರೆಸಿ ದೊಡ್ಡಣ್ಣ ದಂಡನಾಯಕನನ್ನು ಸಮ್ಮುಖಕ್ಕೆ ಕರೆಸಿ ಅವನಿಗೆ ಉಡುಗರೆಗಳನ್ನು ಕೊಡಿಸಿ ಗೌರವಿಸಿ ಕಳುಹಿಸಿದನು ತಿರುಮಲರಾಯನು ದೊಡ್ಡಣ್ಣ ದಂಡನಾಯಕನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ, ದೊಡ್ಡಣ್ಣ ! ರಾಮರಾಯರ ಅಭಿಮಾನವು ನಿನ್ನ ಮೇಲೆ ಬಹಳವಾಗಿದೆ. ಅವರು ನಿನ್ನನ್ನು ಇಲ್ಲಿಯೇ ಇಟ್ಟುಕೊಳ್ಳಬೇಕೆಂದು ಅಭಿಪ್ರಾಯಪಟ್ಟರು ಆದರಿಂದ ಮಹಾರಾಜರ ಅನ್ಯಥಾಭಾವನೆಗೆ ಅವಕಾಶವಾಗುವುದೆಂದು ನಾನೇ ನಿನ್ನನ್ನು ಕಳುಹಿಸಿಕೊಡುತ್ತಿದ್ದೇನೆ. ಅಲ್ಲಿ ನೀನು ನಮ್ಮ ಕಡೆಯವನಾಗಿಯೇ ಇರು ಸಮಯಬಂದಾಗ ಮಹಾರಾಜರಿಗೆ ಬರೆಸಿ ನಿನ್ನನ್ನು ಇಲ್ಲಿಗೆ ಕರೆಸಿಕೊಳ್ಳುತ್ತೇವೆ ಎಂದು ಹೇಳಿ ಮರ್ಯಾದೆಯಿಂದ ಅವನನ್ನು ರಾಜಧಾನಿಗೆ ಸಾಗು ಕಳಿಸಿದನು

ದೊಡ್ಡಣ್ಣ ದಂಡನಾಯಕನು ವಿಜಯನಗರಕ್ಕೆ ತಲುಪಿ ಮಹಾರಾಜರ ಭೇಟಿಮಾಡಿ ರಾಮರಾಯನ ಆ ಪತ್ರವನ್ನು ಮಹಾರಾಜರಿಗೆ ಒಪ್ಪಿಸಿದನು.

ಸಲಕ ಸಹೋದರರು ಚಂದ್ರಗಿರಿಗೆ ಹೋಗಿದ್ದ ದಂಡನಾಯಕನು ಹಿಂತಿರುಗಿ ಬಂದಿದ್ದಾನೆ. ರಾಮರಾಯರ ಪತ್ರವನ್ನು ತಂದಿದ್ದಾನೆ ಎಂಬು ದನ್ನು ಕೇಳಿ ಆತುರವಾಗಿ ಹೋಗಿ ಮಹಾರಾಜರ ಬೇಟಿಮಾಡಿದರು. ಮಹಾ ರಾಜನು ಪತ್ರವನ್ನು ಸಲಕ ತಿರುಮಲನ ಕೈಗೆ ಕೊಟ್ಟು ಈ ಪತ್ರದ ವಿಚಾರ ವಾಗಿ ನಿಮ್ಮ ಅಭಿಪ್ರಾಯವೇನು ? ಎಂದು ಕೇಳಿದನು.

ಸಲಕ ತಿರುಮಲರಾಯನು ನಮ್ಮ ಮುಖ್ಯ ಉದ್ದೇಶ್ಯ ಯುವರಾಜರ ಪಟ್ಟಾಭಿಷೇಕ ಅದನ್ನು ರಾಮರಾಯರು ಒಪ್ಪಿಕೊಂಡಂತೆಯೇ ಆಗಿದೆ. ಈ ಪತ್ರದಲ್ಲಿ ಕೃತ್ರಿಮವೇನೂ ಕಂಡುಬರುವುದಿಲ್ಲ ಎಲ್ಲವೂ ಸಹಜವಾಗಿಯೇ ಇವೆ ಮಹಾರಾಜರು ತಮ್ಮ ಇಷ್ಟದಂತೆ ಮಾಡಬಹುದು ಪಟ್ಟಾಭಿಷೇಕ ಕಾರ್ಯಗಳನ್ನು ಮುಂದುವರಿಸಬಹುದು. ಪಟ್ಟಾಭಿಷೇಕ ಸಮಯಕ್ಕೆ ರಾಮ ರಾಯರೂ ತಿರುಮಲರಾಯರೂ ಇಲ್ಲಿರಬೇಕಾದುದು ಅತ್ಯಗತ್ಯ. ನಾವು ಸಹೋದರರಲ್ಲೊಬ್ಬರು ಚಂದ್ರಗಿರಿಗೆ ಹೋಗಿ ಆ ಸಮಯಕ್ಕೆ ಇಬ್ಬರು ಅಳಿಯಂದಿರನ್ನು ಪತ್ನೀಸಮೇತರಾಗಿ ಇಲ್ಲಿಗೆ ಕರೆತರುತ್ತೇವೆ. ಆ ಭಾರವನ್ನು ನಮಗೆ ವಹಿಸಿಬಿಡಿ ಎಂದು ಹೇಳಿದನು.

ಮಹಾರಾಜನು ಅರಮನೆಯ ಅಧಿಕಾರಿಗಳನ್ನು ಕರೆಸಿ ಪಟ್ಟಾಭಿಷೇಕ ಸನ್ನಾಹಗಳನ್ನು ಮಾಡುವಂತೆ ಅಪ್ಪಣೆ ಮಾಡಿದನು. ಮಂಡಲೇಶ್ವರರೆಲ್ಲರಿಗೂ ಅವರುಗಳಿಗೂ ನಮಗೂ ಇರುವ ಸ್ನೇಹಬಾಂಧವ್ಯಗಳಿಗನುಸಾರವಾಗಿ ಪತ್ರಿಕೆ ಗಳನ್ನು ಬರೆಸಬೇಕೆಂದು ಸಲಕ ತಿರುಮಲರಾಯನಿಗೆ ಅಪ್ಪಣೆ ಮಾಡಿದನು.

## ೧೫

ಚಂದ್ರಗಿರಿಯ ಅರಮನೆಯಲ್ಲಿ ತರುಣನೊಬ್ಬನು ಬಂದು ರಾಮರಾಯನ ದರ್ಶನ ಮಾಡಿದನು. ರಾಮರಾಯನು ವಿಶ್ವಾಸದಿಂದ ಅವನನ್ನು ಕರೆಸಿಕೊಂಡು ಯೋಗಕ್ಷೇಮಸಮಾಚಾರಗಳನ್ನು ವಿಚಾರಿಸಿದನು ಆ ತರುಣನು, "ರಾಮರಾಯರವರೇ! ವಿಜಯನಗರದ ಸಮಾಚಾರಗಳನ್ನು ಕೇಳಿದಿರಾ?"

"ಹೂಂ. ಅಲ್ಪಸ್ವಲ್ಪ ಕೇಳಿದ್ದೇನೆ."

"ಅದೆಲ್ಲಾ ನಿಮಗೆ ಸಮ್ಮತ. ನಿಮ್ಮ ಸಮ್ಮತಿಯಿಂದಲೇ ಎಲ್ಲ ಖಾರಖುದ್ದುಗಳೂ ನಡೆಯುತ್ತಿರಬೇಕೆಂದು ಕಾಣುತ್ತದೆ."

ಸದಾಶಿವರಾಯ! ಯಾವ ವಿಚಾರವನ್ನು ಕೇಳುತ್ತಿದ್ದೀಯೆ? ನೀನೇಕೆ ಇಷ್ಟು ಉದ್ರೇಕಗೊಂಡಿರುವೆ ಯಾರಿಂದಲಾದರೂ ಅಪಮಾನಿತನಾಗಿರುವೆಯೇನು? ಏನು ವಿಚಾರ. ಸ್ಪಷ್ಟವಾಗಿ ಹೇಳು

ಆ ತರುಣನು ವಿಜಯನಗರದಲ್ಲಿ ಅಚ್ಯುತರಾಯರು ವೆಂಕಟಾದ್ರಿಗೆ ಪಟ್ಟಕಟ್ಟಿಸುತ್ತಾರಂತೆ. ಹಿರಿಯರೆಲ್ಲಾ ಒಪ್ಪಿದ್ದಾರಂತೆ. ಹಾಗೆಂದಮೇಲೆ ನೀವೂ ಒಪ್ಪಿರಬೇಕು.

ರಾಮರಾಯನು ಆ ವಿಷಯವೇ. ಹೌದು ನಾನೂ ಕೇಳಿದ್ದೇನೆ. ಹಾಗೆ ಮಾತನಾಡಿಕೊಳ್ಳುತ್ತಿದ್ದಾರಂತೆ ಅದು ಸಹಜವಾಗಿಯೇ ಇದೆ. ತಂದೆಯು ತನ್ನ ಮಗನಿಗೆ ಪಟ್ಟಕಟ್ಟಬೇಕೆಂದು ಅಭಿಲಾಷೆಪಡುವುದು ಸ್ವಾಭಾವಿಕ ಇನ್ನು ಮಾತುಕಥೆಗಳು ನಡೆಯುತ್ತಿವೆಯಂತೆ.

"ಎಲ್ಲಾ ನಿಮಗೆ ಗೊತ್ತಿದೆ. ನಿಮ್ಮ ಮಾತು ರಾಜಧಾನಿಯಲ್ಲಿ ಕೇಳಿಬರುತ್ತಿದೆ. ನೀವೇ ಅಧಿಕಾರ ಸ್ವೀಕಾರ ಮಾಡುತ್ತೀರೆಂದು ರಾಜಧಾನಿಯಲ್ಲಿ

ಎಲ್ಲರೂ ಮಾತನಾಡಿಕೊಳ್ಳುತ್ತಾರೆ. ಎಲ್ಲವನ್ನೂ ಕೇಳಿಕೊಂಡೇ ಬಂದಿದ್ದೇನೆ."

ರಾಮರಾಯನ ಬೀದಿಗಳಲ್ಲಿ ಜನರಾಡುವ ಮಾತುಗಳನ್ನೆಲ್ಲಾ ನಂಬಲು ಸಾಧ್ಯವೇ ? ಆ ಅಧಿಕಾರವನ್ನು ನಾನು ಸ್ವೀಕರಿಸುವನಾಗಿದ್ದರೆ, ನಾನೇಕೆ ಬಿಟ್ಟುಬರುತ್ತಿದ್ದೆ ಬಿಟ್ಟ ಅಧಿಕಾರವನ್ನು ಮತ್ತೆ ಸ್ವೀಕರಿಸುತ್ತೇನೆಯೇ ಸದಾಶಿವರಾಯ ನೀನಿನ್ನೂ ತರುಣ ಪೂರ್ವಾಪರಗಳನ್ನು ಚೆನ್ನಾಗಿ ಅರಿಯೆ. ವಿಜಯನಗರದಲ್ಲಿ ಪ್ರಧಾನಾಮಾತ್ಯ ಪದವಿಯನ್ನು ವಹಿಸಿದವರಿಗೆ ಲಭಿಸುವ ಭಾಗ್ಯವೇನು ? ಬದುಕಿರುವವರೆಗೂ ಕಷ್ಟಪಡಬೇಕು. ಕೊನೆಗೆ ರಾಜರ ಆಗ್ರಹಕ್ಕೆ ಪಾತ್ರರಾಗಬೇಕು. ಇಲ್ಲ ಜನಗಳ ಅಪಕ್ಯಾತಿಗಾದರೂ ಗುರಿಯಾಗಬೇಕು ನೋಡು ಯಾವುದಾದರೂ ಮಹಾಪ್ರಧಾನಿಗಳ ವಂಶ ಸಾರೋದ್ಧಾರವಾಗಿ ಸುಖದಿಂದ ಬಾಳಿಬದುಕಿರುವುದೇ ಅಂಥಾ ಅಧಿಕಾರಕ್ಕೆ ಯಾರು ಆಸೆಪಟ್ಟಾರು ?

"ಅದನ್ನೆಲ್ಲಾ ಯೋಚನೆಮಾಡುವಷ್ಟು ನನಗೆ ಮನಶ್ಶಾಂತಿಯಿಲ್ಲ. ರಾಜಧಾನಿಯಲ್ಲಿರುವ ಪ್ರಬಲ ವರ್ತಮಾನವನ್ನು ನಿಮಗೆ ತಿಳಿಸಿದೆ. ನೀವು ಇಲ್ಲವೆಂದು ಹೇಳಿದ ಮೇಲೆ ಅದನ್ನು ನಂಬುತ್ತೇನೆ. ಆದರೆ ನಿಮಗೂ ವಿಜಯನಗರದ ರಾಜಮನೆತನಕ್ಕೂ ಸಂಬಂಧವಿದೆ. ನೀವು ವಿಜಯನಗರಕ್ಕೆ ಬಂದು ಮಹಾರಾಜರಿಗೆ ಹೇಳಬೇಕು ಈ ಸಮಯದಲ್ಲಿ ಈ ಪಟ್ಟಾಭಿಷೇಕಕ್ಕೆ ಮನಗೊಡುವುದು ಶ್ರೇಯಸ್ಕರವಲ್ಲ ಎಂದು ಹೇಳಿಬಿಡಿ. ರಾಜ್ಯದ ಹಿತಾಕಾಂಕ್ಷಿಗಳ ಕರ್ತವ್ಯ ಅದು ನೋಡಿರಿ ಏನಾಯಿತು ಹಿಂದಿನ ಮಹಾರಾಜರು ಅಷ್ಟು ಖ್ಯಾತಿ ಪಡೆದಿದ್ದವರು ಆ ಬಾಲಕ ತಿರುಮಲರಾಯನಿಗೆ ಪಟ್ಟಕಟ್ಟಿ ಎಷ್ಟು ದುಷ್ಪರಿಣಾಮಗಳಾದವು. ಕೃಷ್ಣದೇವರಾಯರ ವಂಶವೇ ಹೆಸರಿಲ್ಲದೇ ಹೋಯಿತು. ಹಾಗೆಯೇ ಮಹಾಪ್ರಧಾನಿ ಸಾಲ್ವ ತಿಮ್ಮರಸರ ವಂಶ ನಾಶವಾಯಿತು. ಈಗ ಪುನಃ ಅದೇ ಚಕ್ರವು ಪರಿವರ್ತಿತವಾಗುತ್ತದೆ."

ರಾಮರಾಯನು, ಸದಾಶಿವರಾಯ ಮಾತಿನಲ್ಲಿ ನೀನು ಎಲ್ಲವನ್ನು ಕೊನೆಮುಟ್ಟಿಸುತ್ತಿದ್ದೀಯೆ. ಮಹಾರಾಜಾ ಅಚ್ಯುತರಾಯರು ರಾಜ್ಯ

ಪರಿತ್ಯಾಗ ಮಾಡಬೇಕೆಂದು ನಿಶ್ಚಯಿಸಿಬಿಟ್ಟಿದ್ದಾರಂತೆ. ಮುಂದೇನು ಮಾಡಬೇಕು ?

ರಾಜ್ಯಪರಿತ್ಯಾಗ! ರಾಜ್ಯಸರಿತ್ಯಾಗ! ಅದೆಂತಹ ವಿಡಂಬನ. ನಾಗಲಾ ಪುರದ ಅರಮನೆಗೆ ಬಂದು ನೋಡಿ ಅದೆಷ್ಟು ಆಮೋದಪ್ರಮೋದಗಳು ನಡೆಯುತ್ತಿವೆ. ಭೋಗಲಾಲಸೆಯಲ್ಲಿ ತೊಳಲುತ್ತಿರುವವರು ಪ್ರಾಣವನ್ನಾದರೂ ಬಿಟ್ಟಾರು ರಾಜ್ಯವನ್ನು ಬಿಡುವರೇ? ಅದೆಲ್ಲಾ ಶುದ್ಧ ಸುಳ್ಳು ಮತ್ತು ಮೋಸ. ದೈವವಶಾತ್ ಅಚ್ಯುತರಾಯರ ಕಾಲವು ಮುಗಿದುಹೋದರೆ ನಮ್ಮ ತಂದೆ ರಂಗರಾಯರಿಗೆ ಕ್ರಮಪ್ರಾಪ್ತವಾಗಿ ರಾಜ್ಯವು ಬರುತ್ತದೆ. ಅಚ್ಯುತರಾಯರಿಗೆ ಹೇಗೆ ಬಂದಿತೋ ಹಾಗೆಯೇ ಅವರ ಅನಂತರ ನಮ್ಮ ತಂದೆಯವರಿಗೆ ಬರಬೇಕು. ದೊಡ್ಡವರಿದ್ದುಕೊಂಡು ಹುಡುಗರಿಗೆ ಪಟ್ಟಕಟ್ಟುವುದೆಂದರೇನು ? ಅಚ್ಯುತರಾಯರು ತಮ್ಮ ವಂಶಕ್ಕೆ ರಾಜ್ಯಾಧಿಕಾರವನ್ನು ಖಾಯಂಮಾಡಿ ಕೊಳ್ಳುವುದಕ್ಕಾಗಿ ಈ ಆಟವೆತ್ತಿದ್ದಾರೆ. ಇದಕ್ಕೆ ಸಲಕ ಸಹೋದರರ ಕೃತ್ರಿಮ ಸಂಧಾನವೇ ಮೂಲಕಾರಣ.

ಸದಾಶಿವರಾಯ ! ಯಾವುದೇ ,ಕಾರಣಕ್ಕಾಗಿಯಾಗಲೀ ಅಚ್ಯುತರಾಯರು ರಾಜ್ಯಾಧಿಕಾರವನ್ನು ಬಿಟ್ಟುಬಿಡುತ್ತಾರೆಂದುಕೊಳ್ಳೋಣ ಆಗ ಯಾರಿಗೆ ಪಟ್ಟವಾಗಬೇಕು ?

ಹೇಳಿದೆನಲ್ಲಾ ಮತ್ತೆ ಮತ್ತೆ ಆ ಪ್ರಶ್ನೆಯನ್ನೇ ಕೇಳುತ್ತೀರಿ. ರಂಗ ರಾಯರಿಗೆ.

ರಾಮರಾಯನು, ಸದಾಶಿವರಾಯ ಅದೆಲ್ಲಾ ನಡೆಯುವ ಮಾತಲ್ಲ. ನಾನು ವಿಜಯನಗರಕ್ಕೆ ಬಂದು ರಂಗರಾಯರಿಗೆ ಪಟ್ಟಕಟ್ಟಿ ಎಂದು ಅಚ್ಯುತ ರಾಯರಿಗೆ ಹೇಳುವುದಿಲ್ಲ ನಾನು ಆ ಗೋಜಿಗೇ ಬರುವುದಿಲ್ಲ.

" ನೀವು ದೊಡ್ಡವರೆಂದು ನಿಮಗೆ ಬಂದು ಹೇಳುತ್ತಿದ್ದೇನೆ. ಅಷ್ಟೇ ಅಲ್ಲ. ನೀವು ಅಧಿಕಾರ ಸ್ವೀಕಾರಮಾಡುವಿರೆಂದು ವದಂತಿಯೂ ಇದೆ. ನಾನು ಈ ಪಟ್ಟಾಭಿಷೇಕವನ್ನು ಆಗಗೊಡುವುದಿಲ್ಲ. ಸಾಲ್ವ ತಿಮ್ಮರಸರನ್ನು ಸೆರೆ

ಯಲ್ಲಿಟ್ಟಂತೆ ನನ್ನನ್ನೂ ನಮ್ಮ ತಂದೆಯವರನ್ನೂ ಸೆರೆಯಲ್ಲಿಡಿಸಿ ಅವರು ಮಗನಿಗೆ ಪಟ್ಟಕಟ್ಟಿಕೊಳ್ಳಬಹುದು."

ರಾಮರಾಯನು ಸದಾಶಿವರಾಯ ! ಈ ಉದ್ಯೋಗಕ್ಕೆ ಕೈಯಿಡಬೇಡ. ರಾಜಮನೆತದ ಅಂತಃಕಲಹಗಳಿಂದಲೇ ವಿಜಯನಗರವು ಇಷ್ಟು ಹೀನಾಯ ಸ್ಥಿತಿಗೆ ಬಂದಿದೆ. ಇದರಿಂದ ಬಹಮನಿ ಸುಲ್ತಾನರುಗಳು ಪ್ರಾಬಲ್ಯಕ್ಕೆ ಬರಲು ಕಾರಣವಾಗುತ್ತದೆ. ನಿಮ್ಮ ತಂದೆ ರಂಗರಾಯರು ಪಟ್ಟಕ್ಕೆ ಬಂದರೆ ಈಗಿರುವ ಗೊಂದಲಗಳನ್ನೆಲ್ಲಾ ಅವರು ಶಮನಗೊಳಿಸಬಲ್ಲರೇನು ? ಅವರ ಅಭಿಪ್ರಾಯವೇನಿದೆ ? ನೀನು ತಿಳಿದುಕೊಂಡಿದ್ದೀಯೇನು.

" ಇಲ್ಲ ರಾಯರೇ ! ಇದುವರೆಗೆ ನಾನು ಯಾರೊಡನೆಯೂ ಬಾಯಿ ಬಿಟ್ಟಿಲ್ಲ. ನಿಮ್ಮಲ್ಲಿ ನನಗೆ ಬಹಳ ಗೌರವವಿದೆ ಆದರಿಂದ ಮೊದಲು ಇಲ್ಲಿಗೆ ಬಂದೆ. ಅವಕಾಶ ದೊರೆತರೆ ಮಹಾರಾಜರಿಗೂ ದುಡುಕಬೇಡಿ ಎಂದು ಹೇಳುತ್ತೇನೆ. ತಿರುಮಲಾಂಬಿಕೆ ಚಿನ್ನಾಂಬಿಕೆಯರಿಗೂ ಅರಿಕೆ ಮಾಡುತ್ತೇನೆ. ಇದು ಅವರಿಗಾದರೂ ಹೇಗೆ ಸಮಾಧಾನಕರವಾಗಿರಬೇಕು ? ಮುಖ್ಯವಾಗಿ ನೀವು ಮನಸ್ಸುಮಾಡಿದರೆ ಇದೆಲ್ಲಾ ನಿಂತುಹೋಗುತ್ತದೆ. ಮಹಾರಾಜರಾಗಲೀ ಆ ಸಲಕರುಗಳಾಗಲೀ ನಿಮ್ಮ ಮಾತನ್ನು ಮೀರಲು ಧೈರ್ಯಮಾಡುವುದಿಲ್ಲ ರಾಜಧಾನಿಯಲ್ಲಿ ಆ ಸಲಕರುಗಳಿಗೆ ಕಾಸಿನಷ್ಟು ಗೌರವವಿಲ್ಲ. ಇವರೆಲ್ಲರೂ ಸೇರಿ ರಾಜ್ಯವನ್ನು ಹಾಳುಮಾಡುತ್ತಾರೆ. ನೀವು ನೋಡುತ್ತ ಕುಳಿತಿರುತ್ತೀನೆನ್ನುತ್ತೀರಿ. ನಿಮ್ಮಂಥಾ ದೊಡ್ಡವರೆಲ್ಲಾ ಕೈಬಿಟ್ಟರೆ ನಮ್ಮಂಥಾ ತರುಣರು ತೋರಿದಂತೆ ಮಾಡುವುದೊಂದೇ ಮಾರ್ಗ."

ಸದಾಶಿವರಾಯ ! ನನ್ನ ಮಾತನ್ನು ಕೇಳುವುದಾದರೆ ನೀನು ರಾಜಧಾನಿಗೆ ಹೋಗಲೇಬೇಡ. ನಮ್ಮ ಚಂದ್ರಗಿರಿಯಲ್ಲಿಯೇ ನನ್ನೊಡನೆ ಇರು. ಏನಾಗುವುದೋ ನೋಡೋಣ. ರಾಜಧಾನಿಯಲ್ಲಿ ಅಷ್ಟು ಸುಲಭವಾಗಿ ಅವರಿಗೆ ತೋರಿದಂತೆ ಮಾಡುವುದಕ್ಕಾಗುವುದಿಲ್ಲ "

ಸದಾಶಿವರಾಯನು, ನಾನು ಇಲ್ಲಿರುವುದಿಲ್ಲ. ಎಲ್ಲಿಯೂ ಇರುವುದಿಲ್ಲ. ನನ್ನ ಮನಸ್ಸಿಗೆ ಶಾಂತಿಯಿಲ್ಲ ನನಗೆ ಸಾವು ಬದುಕುಗಳೆರಡೂ ಸಮಾನ

ಸಾಯುವುದಾದರೆ ಆ ರಾಜಧಾನಿಯಲ್ಲಿಯೇ ಸಾಯುತ್ತೇನೆ. ಆ ಸಿಂಹಾಸನ
ದಡಿಯಲ್ಲಿಯೇ ಪ್ರಾಣವನ್ನೊಪ್ಪಿಸುತ್ತೇನೆ. ಆ ವೆಂಕಟಾದ್ರಿಯು ಸಿಂಹಾಸನ
ವನ್ನೇರಬೇಕಾದರೆ ನನ್ನ ಹೆಣದ ಮೇಲೆ ಕಾಲಿಟ್ಟು ಏರಬೇಕು.

ರಾಮರಾಯನು ನಿಟ್ಟುಸಿರುಬಿಟ್ಟು ರಾಜಧಾನಿಯಲ್ಲಿ ಒಬ್ಬೊಬ್ಬರದು
ಒಂದೊಂದು ಮಾರ್ಗ ಹೋಜೇ ತಿರುಮಲನು ಒಬ್ಬ ರಾಜರ ವಿರೋಧಿ
ಯಾಗಿದ್ದಾನೆ. ನೀನೊಬ್ಬನು ಆರಂಭಮಾಡಿದ್ದಿ. ಮತ್ತಾರಾದರೂ ಎದ್ದು
ಬರುತ್ತಾರೋ ಹೇಳಲಾಗುವುದಿಲ್ಲ ನೀವೆಲ್ಲರೂ ಸೇರಿ ವಿಜಯನಗರವನ್ನು ಹಾಳು
ಮಾಡಲು ಹುಟ್ಟಿದ್ದೀರಿ ಈ ವಿಜಯನಗರದ ರಾಜಕುಲವು ಯಾದವರ
ಕುಲದಂತಾಯಿತು. ವಿರೂಪಾಕ್ಷನ ಇಚ್ಛೆ ಇದ್ದಂತಾಗಲಿ ಹೋಗು ಸದಾಶಿವ
ರಾಯ ನೀನಿನ್ನೂ ತರುಣ ಉನ್ನತಕುಲದಲ್ಲಿ ಹುಟ್ಟಿರುವ ರಾಜಕುಮಾರ
ಕುಲಘ್ನನೆನ್ನಿಸಿಕೊಳ್ಳಬೇಡ ಕುಲಪಾತಕಿ ಎನ್ನಿಸಿಕೊಳ್ಳಬೇಡ. ಆ ವಿರೂ
ಪಾಕ್ಷನ ಅನುಗ್ರಹವಿಲ್ಲದೇ ಯಾರೂ ಸಿಂಹಾಸನವನ್ನೇರಲಾರರು. ಏರಿದರೂ
ಉಳಿಸಿಕೊಳ್ಳಲಾರರು ಎಂದು ಹೇಳಿದನು.

ಸದಾಶಿವರಾಯನು ಅಲ್ಲಿಂದ ಹೊರಟು ತಿರುಮಲಾಂಬೆಯನ್ನು ದರ್ಶನ
ಮಾಡಿ ರಾಮರಾಯರಿಗೆ ಏನು ಹೇಳಿದರೂ ವ್ಯರ್ಥ. ನೀವಾದರೂ ಹೇಳ
ಬಾರದೇ. ವಿಜಯನಗರದಲ್ಲಿ ಕೋಲಾಹಲವೆದ್ದಿರುವಾಗ ಎಷ್ಟು ಹೇಳಿದರೂ
ಇವರು ಇಲ್ಲಿ ಕುಳಿತಿರುತ್ತೇನೆನ್ನುತ್ತಾರೆ. ರಾಜ್ಯವೆಲ್ಲವೂ ಅನಾಯಕವಾಗಿ
ಹಾಳಾಗಿಹೋದಮೇಲೆ ಇವರು ರಾಜಧಾನಿಗೆ ಬಂದರೇನು ? ಬಿಟ್ಟರೇನು ?

ಸದಾಶಿವರಾಯರೇ ರಾಜಧಾನಿಯಲ್ಲಿ ಅಂತಹ ಅನಾಹುತವೇನು ನಡೆ
ಯುತ್ತಿದೆ

ಅಯ್ಯೋ ಅಕ್ಕಯ್ಯಾ ! ಅದನ್ನೆಲ್ಲಾ ಹೇಳಿ ಫಲವೇನು ? ರಾಜಧಾನಿ
ಯಲ್ಲಿ ಕತ್ತಿಯು ಮಸೆಯುತ್ತಿದೆ. ರಾಮರಾಯರೇ ನನ್ನೊಡನೆ ಹೇಳಿದರು.
ನಮ್ಮ ರಾಜಕುಲವು ಯಾದವಕುಲದಂತಾಗಿದೆಯಂತೆ. ಅದು ನಿಜವಾದ
ಮಾತು. ವಿಜಯನಗರದ ರಾಜಕುಲದವರೆಲ್ಲರೂ ಹೋರಾಡಿ ಸಿಂಹಾಸನದ
ಮುಂದೆ ಬಲಿಬೀಳುತ್ತಾರೆ. ಆಮೇಲೆ ಆ ಸಿಂಹಾಸನವು ಶೂನ್ಯ ಸಿಂಹಾಸನ

ವಾಗುತ್ತದೆ. ರಕ್ತ ಸಿಂಹಾಸನವಾಗುತ್ತದೆ ಎಂದು ಹೇಳಿದನು.

ತಿರುಮಲಾಂಬೆಯು ನನ್ನಂಥವಳು ಏನು ಮಾಡಲಾದೀತು ? ದೇವರು ಅಂಥಾ ದುಃಸ್ಥಿತಿಯನ್ನು ಕರುಣಿಸದಿರಲಿ ಎಂದು ಹರಸಿಕೊಳ್ಳುತ್ತೇನೆ ಎಂದಳು.

ಸದಾಶಿವರಾಯನು ತಿರುಮಲರಾಯನನ್ನು ಕಂಡು ಮಾತನಾಡಿದನು. ತಿರುಮಲರಾಯರೇ ! ನಿಮ್ಮ ಅಣ್ಣಂದಿರೊಡನೆ, ಎಲ್ಲವನ್ನೂ ಹೇಳಿಬಿಟ್ಟಿದ್ದೇನೆ. ವೆಂಕಟಾದ್ರಿಗಾಗಲೀ ಮತ್ತಾರಿಗಾಗಲೀ ಈಗ ಪಟ್ಟಾಭಿಷೇಕವಾಗಕೂಡದು, ಆ ಹೇಡಿ ಅಚ್ಯುತರಾಯನು ಬದುಕಿರುವಷ್ಟುದಿನವೂ ಸಿಂಹಾಸನದ ಮೇಲೆ ಕುಳಿತಿದ್ದು ಉರುಳಿಹೋಗಲಿ. ಸಲಕ ಸಹೋದರರು ನಾಶವಾಗಿಹೋಗಲಿ. ಆಮೇಲೆ ಈ ರಾಜ್ಯದ ನಿಜವಾದ ಶ್ರೇಯೋಭಿಲಾಷೆಗಳು ರಾಜಭಕ್ತರು ಯಾರಾದರೂ ಉಳಿದಿದ್ದರೆ, ಅವರೆಲ್ಲರೂ ಸೇರಿ ಯಾರಿಗೆ ಬೇಕಾದರೂ ಪಟ್ಟಕಟ್ಟಲಿ. ರಾಮರಾಯರು ಈತಂಟಿಗೆ ಬರುವುದಿಲ್ಲವೆಂದು ಹೇಳಿಬಿಟ್ಟಿದ್ದಾರೆ. ಅವರೇನಾದರೂ ಮಧ್ಯದಲ್ಲಿಬಂದಾರು. ಅವರನ್ನೂ ನೀವು ನೋಡಿಕೊಳ್ಳಿರಿ. ಒಂದುಪಕ್ಷ ದುರ್ದೈವವಶಾತ್ ಅವರಿಗೆ ಎದುರು ನಿಲ್ಲಬೇಕಾದರೂ ನಾನು ಹಿಂತೆಗೆಯುವುದಿಲ್ಲ. ಅಚ್ಯುತರಾಯನ ಕಡೆಗೆ ಈ ಕಾರ್ಯಸಾಧನೆಗಾಗಿ ಯಾರೇ ಬರಲಿ ಅವರನ್ನು ನಾನು ಎದುರಿಸುತ್ತೇನೆ.

ತಿರುಮಲರಾಯನು ಆ ಸದಾಶಿವರಾಯನನ್ನು ಹಿಡಿದು ಕೂರಿಸಿದನು. ಹುಚ್ಚಾ, ಕುಳಿತುಕೋ ದೇವರಾಣೆಗೂ ಹೇಳುತ್ತೇನೆ. ನನಗೂ ನಿನಗಿರುವ ಅಭಿಪ್ರಾಯವೇ ಇದೆ. ವೆಂಕಟಾದ್ರಿ ಒಳ್ಳೆಯ ಹುಡುಗ ವಿದ್ಯಾವಿನಯಸಂಪನ್ನ. ಆದರೂ ಈಗ ಪಟ್ಟಾಭಿಷೇಕದ ಮಾತು ಬೇಡವೆಂಬುದೇ ನನ್ನ ಖಚಿತಾಭಿಪ್ರಾಯ ನಾನು ಯಾರ ಮುಂದೆ ಬೇಕಾದರೂ ಇದನ್ನು ಹೇಳಲು ಸಿದ್ಧನಾಗಿದ್ದೇನೆ. ಇದೆಲ್ಲಾ ಸಲಕ ಸಹೋದರರ ತಂತ್ರವೆಂದು ನಾನು ಮೊದಲೇ ಊಹಿಸಿಬಿಟ್ಟೆ. ಆದುದರಿಂದಲೇ ಮಹಾರಾಜರು ಪ್ರಾರ್ಥಿಸಿದರೂ ನಾವು ಈ ಸಮಯದಲ್ಲಿ ರಾಜಧಾನಿಗೆ ಹೋಗಲಿಲ್ಲ. ರಾಮರಾಯರು ನಿನಗೆ ಹೇಳಿದ ಮಾತುಗಳಲ್ಲಿ ಒಂದು ಬುದ್ಧಿಯ ಮಾತಿದೆ. ಅದು ಒಳ್ಳೆಯದು ಈಗ ನೀನು

ರಾಜಧಾನಿಗೆ ಹೋಗಬೇಡ. ನಮ್ಮೊಡನೆ ಇರು. ಅಲ್ಲಿ ನಡೆಯುವ ಯಾವ
ಕಾರ್ಯಗಳಲ್ಲಿಯೂ ನಾವು ಭಾಗಿಗಳಾಗಬಾರದು. ಅಲ್ಲಿ ಅವಿವೇಕದಿಂದ ಅನಾ
ಹುತಗಳಾದರೆ ಅದು ತಾನಾಗಿ ನಮ್ಮೆಡೆಗೆ ಬರುತ್ತದೆ ನೀನು ಕ್ರೋಧಾ
ವೇಶದಿಂದ ಏಕಾಕಿಯಾಗಿ ಅಲ್ಲಿ ಮಾಡುವ ಕಾರ್ಯವಾದರೂ ಏನಿದೆ ?

ಸದಾಶಿವರಾಯನು ನಿಮಗೆ ಧನ್ಯವಾದಗಳು. ಅನಂತವಂದನೆಗಳು.
ನನ್ನ ಅಭಿಪ್ರಾಯವು ಸರಿಯೆಂದು ನೀವೂ ಒಪ್ಪಿಕೊಳ್ಳುತ್ತೀರಿ. ಈಗ
ಗೊತ್ತಾಯಿತು ರಾಮರಾಯರೂ ನಿಮ್ಮ ಅಭಿಪ್ರಾಯವನ್ನೇ ಅನುಮೋದಿಸಿರ
ಬಹುದು. ಆದರೆ ಬಾಯಿಯಲ್ಲಿ ಅದನ್ನು ನುಡಿಯಲೊಲ್ಲರು. ಬೇಡ! ನಿಮ್ಮಿಂದ
ಅವರ ಮನಸ್ಸು ಗೊತ್ತಾದಹಾಗಾಯಿತು. ನೀವು ಕಟ್ಟಿಹಾಕಿದರೂ ನಾನಿಲ್ಲಿರು
ವುದಿಲ್ಲ ನಾನು ರಾಜಧಾನಿಗೆ ಹೋಗುತ್ತೇನೆ. ಅಚ್ಯುತರಾಯರ ಕಾರ್ಯಕ್ಕೆ
ಪ್ರತಿರೋಧಮಾಡುತ್ತೇನೆ ನಾನು ಏಕಾಕಿ ಎಂದು ನೀವು ಹೇಳಿದಿರಿ.
ಅದು ಸರಿಯಲ್ಲ ರಾಜಧಾನಿಯಲ್ಲಿ ಅಚ್ಯುತರಾಯರಿಗೆ ಪ್ರಿಯರಾದವರು
ಒಬ್ಬರೂ ಇಲ್ಲ. ಆ ಸಲಕ ಸಹೋದರರೂ ಪೂರ್ಣವಾಗಿ ಅಚ್ಯುತರಾಯರ
ಹಿತೈಷಿಗಳಲ್ಲ. ಪರಮಸ್ವಾರ್ಥಿಗಳು ಮಂಡಲೇಶ್ವರರೆಲ್ಲರೂ ತಿರುಗಿಬಿದ್ದಿ
ದ್ದಾರೆ. ನಾನು ನಿಮಿತ್ತಮಾತ್ರ. ಅಷ್ಟೆ. ಅಚ್ಯುತರಾಯರು
ಈ ಸಲಕ ಸಹೋದರರ ಸಮೇತವಾಗಿ ಬಿದ್ದುಹೋಗುತ್ತಾರೆ. ನೀವೇ
ನೋಡಿರಿ. ಈ ಸದಾಶಿವರಾಯನ ಮಾತು ಎಷ್ಟು ಸತ್ಯವೆಂಬುದು ನಿಮಗೇ
ತಾರ್ಕಾಣೆಗೆ ಬರುತ್ತದೆ. ತಿರುಮಲರಾಯನ ಸಾಂತ್ವವಚನಗಳೊಂದೂ
ಸದಾಶಿವರಾಯನಿಗೆ ಸೊಗಸಲಿಲ್ಲ. ಅವನು ಚಂದ್ರಗಿರಿಯಿಂದ ಹೊರಟೇ
ಬಿಟ್ಟನು.

ಮರುದಿನ ರಾಮರಾಯನೂ ತಿರುಮಲರಾಯನೂ ಮಾತನಾಡಿ
ಕೊಂಡರು.

ರಾಮರಾಯನು ಈ ಸದಾಶಿವರಾಯನು ಈ ಪಟ್ಟಾಭಿಷೇಕದ ಸುದ್ದಿ
ಯನ್ನು ಕೇಳಿ ಉದ್ರಿಕ್ತನಾಗಿ ದಳ್ಳುರಿಯಂತೆ ಎದ್ದುಬಿಟ್ಟಿದ್ದಾನೆ. ಅವನನ್ನು
ಎಷ್ಟೇ ಪ್ರಯತ್ನಪಟ್ಟರೂ ಶಾಂತಗೊಳಿಸಲಾಗಲಿಲ್ಲ. ಅವನು ಇಂದು ಏಕಾಕಿ

ಯಾಗಿರಬಹುದು. ರಾಜಕುಲದವನೇ ಪ್ರತಿಭಟಿಸುವಾಗ ವಿರೋಧಿಗಳಾದ ಹತ್ತಾರು ಜನರು ಅವನ ಜೊತೆಗೆ ಸೇರಿಕೊಳ್ಳುತ್ತಾರೆ. ರಾಜಧಾನಿಯಲ್ಲಿ ಏನೋ ಅನಾಹುತಗಳಿಗೆ ಆರಂಭವಾಗಿರುವಂತಿದೆ.

ತಿರುಮಲರಾಯನು, ಅಣ್ಣಾಜೀ ಆ ಸದಾಶಿವರಾಯನದು ಏನು ತಪ್ಪಿದೆ. ಈ ರಾಜ್ಯದಲ್ಲಿ ಅಚ್ಯುತರಾಯರಿಗೆ ಎಷ್ಟು ಹಕ್ಕಿದೆಯೋ ಸದಾಶಿವರಾಯನಿಗೂ ಅಷ್ಟೇ ಹಕ್ಕಿದೆ ಅವನೇಕೆ ಮೂಲೆಯಲ್ಲಿ ಕೂತಿರಬೇಕು. ನಾವೇಕೆ ಅವನನ್ನು ಅದುಮಿ ಇಡಬೇಕು. ರಾಜಕುಲದವನಲ್ಲವೇ ಅವನು. ಅವನೇನು ಮೇಣದ ಗೊಂಬೆಯೇ ಪರಾಕ್ರಮವಿದ್ದರೆ ಎದುರಿಸಲಿ. ಅಚ್ಯುತರಾಯರಿಗೆ ಶಕ್ತಿಯಿದ್ದರೆ, ಅಣಗಿಸಲಿ ನೀವು ಅತ್ತ ಕಡೆಗೆ ಹೋಗುವುದಿಲ್ಲವೆಂದ ಮೇಲೆ ಅದನ್ನೇ ಚಿಂತಿಸುತ್ತಾ ಕೂಡುವುದು ಸರಿಯಲ್ಲ. ಆ ರಾಜಧಾನಿಯಲ್ಲಿ ಸದಾಶಿವರಾಯನಂಥವರು ಎಷ್ಟು ಜನರಿದ್ದಾರೋ ಯಾರು ಬಲ್ಲರು ? ಎಂದನು.

ಸದಾಶಿವರಾಯನು ರಾಜಧಾನಿಗೆ ಹೋಗಿ ತನ್ನ ಸಂಗಡಿಗರನ್ನೆಲ್ಲಾ ಕೂಡಿ ಹಾಕಿದನು. ನಾವೆಲ್ಲರೂ ಒಟ್ಟುಕೂಡಿ ಈ ಪಟ್ಟಾಭಿಷೇಕವನ್ನು ಆಗದಂತೆ ಮಾಡಬೇಕು. ಅಚ್ಯುತರಾಯನನ್ನು ಮೂಲೆಯಲ್ಲಿ ಕೂಡಿಸಬೇಕು ಯಾರಾದರೂ ರಾಜ್ಯವನ್ನು ತೆಗೆದುಕೊಳ್ಳಲಿ ಸಿಂಹಾಸನವನ್ನು ಏರಲಿ. ಆ ಸಿಂಹಾಸನದ ಪವಿತ್ರತೆಯು ಎಂದೋ ಹಾಳಾಗಿ ಹೋಯಿತು. ಮೂಢಭಕ್ತಿಯಿಂದ ನಾವು ಕಣ್ಣುಮುಚ್ಚಿಕೊಂಡು ಕೂಡಬಾರದು ಹಾವನ್ನು ಹೊಡೆದು ಹದ್ದಿಗೆ ಹಾಕಿದಂತಾದರೂ ದೋಷವಿಲ್ಲ. ಈ ಹೋರಾಟದಲ್ಲಿ ಆ ಹೋಜೇ ತಿರುಮಲನು ಆ ಎಳೆಗೂಸನ್ನು ಎರಡು ದಿನಗಳು ಪಟ್ಟಕ್ಕೇರಿಸಿದರೂ ಬಾಧಕವಿಲ್ಲ ಎಂದು ಹೇಳಿದನು ಸಂಗಡಿಗರು ಉತ್ಸಾಹದಿಂದ ಇದೇನು ಸದಾಶಿವರಾಯರೇ ಅಷ್ಟೊಂದು ದುಸ್ಸಾಧ್ಯವಾದ ಕಾರ್ಯವೇ ಇದು. ಈ ರಾಜಧಾನಿಯಲ್ಲಿ ಸಲಕ ಶಲಕಗಳು ಎರಡಲ್ಲದೇ ಅಚ್ಯುತರಾಯನಿಗೆ ಬೆಂಬಲ ಕೊಡುವವರು ಯಾರಿದ್ದಾರೆ. ನಮ್ಮನ್ನು ಎದುರಿಸುವಂಥಾ ಧೀರರಾದರೂ ಯಾರಿದ್ದಾರೆ. ಅಚ್ಯುತರಾಯನನ್ನು ಮೂಲೆಗೆ ಕೂಡಿಸುವುದು ಎಷ್ಟರ ಕಾರ್ಯ ? ಅವನು ಪರಾಕ್ರಮಿಯಂತೆ ಎದುರಿಗೆ 'ಬರಬಲ್ಲನೇ ನಾಗಲಾಪುರದ

ಅರಮನೆಯಲ್ಲಿ ಬಿದ್ದು ಪದ್ದಾಡುತ್ತಿದ್ದಾನೆ. ಆ ಅರಮನೆಗೆ ಮದ್ಯ, ಮಾನ ಗೆಟ್ಟ ಸ್ತ್ರೀಯರು ಇವೆರಡು ಹೋಗುವುದನ್ನು ತಡೆಗಟ್ಟಿಬಿಟ್ಟರೆ, ಅಚ್ಯುತ ರಾಯನು ಅಂತರ್ಧಾನವಾಗಿ ಹೋಗುತ್ತಾನೆ ನಾವೆಲ್ಲರೂ ಪ್ರತಿಭಟನೆ ಮಾಡೋಣ. ಅಂಥಾ ಸಂದರ್ಭಬಂದರೆ ದಂಡನಾಯಕ ದೊಡ್ಡಣ್ಣನು ಸಲಕ ಸಹೋದರನನ್ನು ಸಿಂಹಾಸನದ ಮುಂದೆಯೇ ಒಂದೇ ಏಟಿಗೆ ಕಡಿದುಹಾಕಿ ಬಿಡುತ್ತಾನೆ. ಅವನೊಬ್ಬ ಧೀರನಾದ ಮನುಷ್ಯ. ಏಕೋ ಆ ಸಲಕ ಶುನಕಗಳು ಅವನನ್ನು ಕಂಡುಹಿಡಿದಿಲ್ಲ, ಇರಲಿ ಯಾವಾಗಲೂ ಮೃತ್ಯುವಶ ರಾಗುವವರು ಪಕ್ಕದಲ್ಲಿಯೇ ಅಡಗಿರುವ ಶತ್ರುವನ್ನು ಗಮನಿಸುವುದಿಲ್ಲ ಎಂದು ಹೇಳಿದರು.

ಸದಾಶಿವರಾಯನು ದೊಡ್ಡಣ್ಣ ದಂಡನಾಯಕನನ್ನು ನಾವು ನಂಬ ಬಹುದೇ ? ಅವನು ಅಳಿಯ ರಾಮರಾಯರಲ್ಲಿಗೆ ಸಂಧಾನಕ್ಕೆ ಹೋಗಿದ್ದವ ನಲ್ಲವೇ ?

ಸ್ನೇಹಿತನೊಬ್ಬನು ಹೇಳಿದನು—ಹೌದು ! ಹೌದು ! ಅವನು ರಾಮ ರಾಯರಲ್ಲಿಗೆ ಹೋಗಿದ್ದವನು. ನೀವೂ ರಾಮರಾಯರಲ್ಲಿಗೆ ಹೋಗಿದ್ದವರು. ದೊಡ್ಡಣ್ಣ ದಂಡನಾಯಕನನ್ನು ನಾವು ನಂಬದಿದ್ದರೆ ಮತ್ತಾರನ್ನೂ ನಂಬು ವುದು. ಈ ಪಟ್ಟಾಭಿಷೇಕ ನಡೆಯಲಿ ನಡೆಯದಿರಲಿ. ದೊಡ್ಡಣ್ಣನು ಸಲಕ ರನ್ನು ಆಹುತಿತೆಗೆದುಕೊಳ್ಳುವುದೇನೋ ಖಂಡಿತ. ಪಟ್ಟಾಭಿಷೇಕದ ಮುಹೂ ರ್ತವು ಮೊದಲೋ ಸಲಕರ ಪರಲೋಕ ಯಾತ್ರೆಯು ಮೊದಲೋ ಎಂಬು ದನ್ನು ದೇವರೇ ನಿಶ್ಚಯಮಾಡಬೇಕು.

ಸದಾಶಿವರಾಯನು ಹಾಗಾದರೆ ಒಳ್ಳೆಯದಾಯಿತು. ನಾನು ಸರಿಯಾದ ಸಮಯವರಿತು ಆ ದಂಡನಾಯಕನನ್ನು ಸಂಧಿಸುತ್ತೇನೆ.

ವೀರ ವಿರೂಪಾಕ್ಷನು ಬೇಡ ಮಹರಾಯರೇ ದೇವರಾಣೆಗೂ ಅದೊಂದು ಕೆಲಸ ಮಾಡಬೇಡಿ. ಅವನ ದಾರಿಗೇ ಅವನನ್ನು ಬಿಟ್ಟುಬಿಡಿ ನಿಮ್ಮ ಮೇಲೆ ಸಲಕ ಸೋದರರಿಗೆ ಈಗಲೇ ಗುಮಾನಿಯು ಬಂದುಹೋಗಿದೆ.

ಹಾಂ ! ಗುಮಾನಿ. ನನ್ನ ಮೇಲೆ ಗುಮಾನಿ ನಾನೇನು ಕಳ್ಳನೇ. ಹೀನಕುಲದವನೇ ಸಲಕರು ನನ್ನ ಮೇಲೆ ಗುಮಾನಿ ಮಾಡುವುದೆಂದರೇನು ? ನನ್ನನ್ನೇನು ಮಾಡಬಲ್ಲರು ಎಂದು ಸದಾಶಿವರಾಯನು ಆರ್ಭಟಿಸಿದನು ಆ ಸಂಗಡಿಗರೆಲ್ಲರೂ ಮುಂದೆ ಏನು ಮಾಡಬೇಕೆಂಬುದನ್ನು ಮಾತನಾಡಿಕೊಂಡು ಒಂದು ನಿಶ್ಚಯಕ್ಕೆ ಬಂದರು. ಎಲ್ಲರೂ ತಮ್ಮ ತಮ್ಮ ಕಾರ್ಯಗಳಿಗೆ ಹೊರಟು ಹೋದರು.

# ೧೬

ಸದಾಶಿವರಾಯನು ಪಟ್ಟಾಭಿಷೇಕಕ್ಕೆ ಉಗ್ರವಿರೋಧಿಯೆಂಬುದು ದರ ಬಾರಿನಲ್ಲೆಲ್ಲಾ ಮಾತುಕತೆಗಳಿಗೆ ಮೊದಲಾಯಿತು ಅಚ್ಯುತರಾಯನಿಗೂ ಈ ಸಮಾಚಾರಗಳು ಕಿವಿಗೆ ಬಿದ್ದವು ಸದಾಶಿವರಾಯನನ್ನು ಕರೆಸಿ ಮಾತ ನಾಡುವುದು ಒಳ್ಳೆಯದು ಎಂದು ಆಲೋಚನೆ ಮಾಡಿದನು

ಸದಾಶಿವರಾಯನು ಪಟ್ಟಾಭಿಷೇಕವನ್ನು ನಿರೋಧಿಸುವುದಕ್ಕಾಗಿ ನೀರಿ ನಂತೆ ಹಣವನ್ನು ಚೆಲ್ಲುತ್ತಿದ್ದಾನೆಂದೂ ಸೈನ್ಯದಲ್ಲಿ ಅಧಿಕಾರಿವರ್ಗದಲ್ಲಿ ಪುರ ಪ್ರಮುಖರಲ್ಲಿ ಅನೇಕರನ್ನು ಎತ್ತಿಕಟ್ಟುತ್ತಿದ್ದಾನೆಂದೂ ಗುಪ್ತಚಾರರು ಸಲಕ ಸಹೋದರರಿಗೆ ಅರಿಕೆಮಾಡಿದರು. ಆ ಸಹೋದರರಿಬ್ಬರೂ ತಮ್ಮತಮ್ಮಲ್ಲಿಯೇ ಯೋಚನೆ ಮಾಡಲಾರಂಭಿಸಿದರು ಈ ಸದಾಶಿವರಾಯನನ್ನೂ ಬಂಧಿಸಿ ಕಾರಾಗೃಹದಲ್ಲಿಟ್ಟುಬಿಟ್ಟರೆ, ನಿರ್ಭಯವಾಗಿ ಕಾರ್ಯಗಳನ್ನು ಮುಂದುವರಿಸ ಬಹುದು ಎಂದು ಪೆದ್ದತಿರುಮಲನು ಹೇಳಿದನು

ತಿನ್ನತಿರುಮಲನು ಏಕಾಏಕಿ ಅಂತಹ ಕಾರ್ಯಕ್ಕೆ ದುಡುಂಪ್ರವೇಶ ಮಾಡಬಾರದು. ಅದರಿಂದ ರಾಜ್ಯದಲ್ಲಿ ಒಂದು ವಿಪ್ಲವವು ಎದ್ದರೂ ಏಳ ಬಹುದು. ನಮ್ಮ ವಿರೋಧಿಗಳು ಸದಾಶಿವರಾಯನನ್ನು ಮುಂದಿಟ್ಟುಕೊಂಡು ಗದ್ದಲವೆಬ್ಬಿಸುವುದು ನಿಶ್ಚಯ. ಹೇಗಾದರೂ ಮಾಡಿ ಸದಾಶಿವರಾಯನನ್ನು ಕೊಲೆಮಾಡಿಬಿಡುವುದು ಒಂದು ನಿರಾತಂಕವಾದ ಮಾರ್ಗವಿದೆ. ಆದರೆ ಹುಚ್ಚು ಮಾರ್ಗವಾದೀತು. ಸಾಕ್ಷಾತ್ತಾಗಿ ರಾಜಕುಲದಲ್ಲಿ ಹುಟ್ಟಿದ ಸದಾಶಿವರಾಯ ನನ್ನು ಕೊಲೆಮಾಡಿ ಅದೇ ಕುಲದಲ್ಲಿ ಹುಟ್ಟಿದ ಮತ್ತೊಬ್ಬನಿಗೆ ಪಟ್ಟಾಭಿಷೇಕ ಮಾಡುವುದನ್ನು ಪ್ರಜೆಗಳು ಒಪ್ಪರು. ಸಾಮಂತರೂ ಸಮ್ಮತಿಸರು. ನಮ್ಮ

ಕಾಲಿನ ಮೇಲೆ ನಾವೇ ಕೊಡಲಿಯ ಪೆಟ್ಟು ಹಾಕಿಕೊಂಡಂತಾಗುತ್ತದೆ. ಸದಾಶಿವರಾಯನನ್ನು ದೂರವಿಟ್ಟು ನಮ್ಮ ಕಾರ್ಯವನ್ನು ನಾವು ಮುಂದುವರಿಸುವುದೇ ಬುದ್ಧಿವಂತಿಕೆ ಒಂದು ವಿಚಾರದಲ್ಲಿ ಸಮಾಧಾನಪಟ್ಟುಕೊಳ್ಳಬೇಕು ಈ ಸದಾಶಿವರಾಯನು ಆ ಹುಚ್ಚು ತಿರುಮಲನ ಜೊತೆಗೆ ಸೇರಿಕೊಂಡಿಲ್ಲ. ಅದೊಂದು ಪುಣ್ಯ ಎಂದು ಹೇಳಿದನು.

ಆ ಸಲಕ ಸಹೋದರರಿಬ್ಬರೂ ಈ ವಿಚಾರವನ್ನು ಅಚ್ಯುತರಾಯರಿಗೆ ತಿಳಿಸಬೇಕೇ ಬೇಡವೇ ಎಂದು ಆಲೋಚನೆ ಮಾಡಿದರು. ತಿನ್ನತಿರುಮಲನು ಇದನ್ನೆಲ್ಲಾ ಮಹಾರಾಜರಿಗೇಕೆ ತಿಳಿಸಬೇಕು. ನಾವೇನಾದರೂ ಉಗ್ರಕ್ರಮವನ್ನು ಕೈಗೊಳ್ಳುವುದಾದರೆ ಅವರ ಕಿವಿಗೆ ಹಾಕಿ ಅವರ ಅಪ್ಪಣೆಯನ್ನು ಪಡೆಯಬೇಕು. ಈಗ ಅಂತಹ ಪ್ರಮೇಯವೇನೂ ಇಲ್ಲ. ಸದಾಶಿವರಾಯನು ವಿರೋಧವಾಗಿದ್ದಾನೆ ಎಂಬಷ್ಟು ಮಾತನ್ನು ಸೂಕ್ಷ್ಮವಾಗಿ ಮಹಾರಾಜರ ಕಿವಿಗೆ ಹಾಕಿಬಿಟ್ಟರೆ ಸಾಕು ಎಂದು ನಿರ್ಧಾರಮಾಡಿಕೊಂಡು ತಿನ್ನ ಮಹಾರಾಜರ ಬೇಟೆ ಮಾಡಿದನು ಅನೇಕ ರಾಜಕಾರ್ಯಗಳನ್ನು ಮಹಾರಾಜರಿಗೆ ತಿಳಿಸಿದನಂತರ ಸದಾಶಿವರಾಯನ ಪ್ರಸ್ತಾಪವನ್ನು ಎತ್ತಿದನು. ಅಚ್ಯುತರಾಯನು, "ಹೌದು ! ಈ ಸಮಾಚಾರಗಳು ನಮಗೂ ಬಂದಿವೆ ಮೊದಲೇ ಅವನೊಡನೆ ಪ್ರಸ್ತಾಪಮಾಡಬಹುದಾಗಿತ್ತು. ಆದರೆ ಅವನು ಹುಡುಗ. ಅವನೊಡನೆ ಇಷ್ಟು ದೊಡ್ಡ ರಾಜಕಾರ್ಯವನ್ನು ಮೊದಲೇ ಪ್ರಸ್ತಾಪಿಸುವುದು ಸರಿಯಲ್ಲವೆಂದು ಯೋಚನೆ ಮಾಡಿದೆ, ಇರಲಿ ಅದರಗೊಡವೆ ನೀವು ಹಚ್ಚಿಕೊಳ್ಳಬೇಡಿರಿ. ನಾನು ಚಿನ್ನಾಂಬಿಕೆಯವರಿಂದ ಅವನಿಗೆ ಬುದ್ಧಿ ಹೇಳಿಸುತ್ತೇನೆ. ನಮ್ಮ ರಾಜ್ಯದಲ್ಲಿ ಅವನಿಗೂ ಸಮಯಬಂದಾಗ ತಕ್ಕ ಉನ್ನತಸ್ಥಾನವನ್ನು ಕೊಡಲೇಬೇಕು ರಾಜವಂಶೀಯರಾರನ್ನು ದೂರ ಮಾಡುವುದು ನನ್ನ ಅಭಿಮತವಲ್ಲ. ಅವನ ವಿಚಾರ ನಾನು ನೋಡಿಕೊಳ್ಳುತ್ತೇನೆ. ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಹೇಗೂ ಕುಮಾರ ವೆಂಕಟಾದ್ರಿಯ ಪಟ್ಟಾಭಿಷೇಕ ಸಮಯಕ್ಕೆ ರಾಮರಾಯರನ್ನೂ ತಿರುಮಲರಾಯರನ್ನೂ ನಾವು ಕರೆಸಿಯೇಕರೆಸುತ್ತೇವೆ. ಸದಾಶಿವರಾಯನ ಯೋಗಕ್ಷೇಮ ಅವ

ರಿಗೆ ಬಿಟ್ಟುಬಿಟ್ಟರೆ ಸರಿ ಎಂದು ಹೇಳಿ ತಿನ್ನತಿರುಮಲರಾಯನನ್ನೂ ಕಳುಹಿಸಿ ಕೊಟ್ಟನು.

ಅಚ್ಯುತರಾಯನು ರಾಣಿಯವರೊಡನೆ ಸದಾಶಿವರಾಯನ ವೃತ್ತಾಂತ ವನ್ನೆಲ್ಲಾ ತಿಳಿಸಿ ಅವನನ್ನು ಕರೆಕಳುಹಿಸಿ ಬುದ್ಧಿವಾದ ಹೇಳಬೇಕೆಂದು ಕೇಳಿಕೊಂಡನು.

ರಾಣಿಯವರು ಸದಾಶಿವರಾಯನಲ್ಲಿಗೆ ದೂತರನ್ನು ಕಳಿಸಿ ಅವನನ್ನು ಅರಮನೆಗೆ ಬರಮಾಡಿಕೊಂಡರು. ಆ ಸಮಯಕ್ಕೆ ಸರಿಯಾಗಿ ಮಹಾರಾಜ ಅಚ್ಯುತರಾಯನು ಅಂತಃಪುರಕ್ಕೆ ಬಂದನು ಅಚ್ಯುತರಾಯನು ಸದಾಶಿವ ರಾಯನನ್ನು ಆದರಪುರಸ್ಸರವಾಗಿ ಸಮೀಪದಲ್ಲಿ ಕುಳ್ಳಿರಿಸಿಕೊಂಡು ರಾಣಿಯು ರಿಬ್ಬರ ಸಮ್ಮುಖದಲ್ಲಿ ಆವನಿಗೆ ಹಿತವಚನಗಳನ್ನು ನುಡಿದನು—

“ಸದಾಶಿವರಾಯ ನೀನು ಈ ವಿಜಯನಗರದ ಅರಸು ಮನೆತನ ದವನು. ನಮ್ಮ ಮನೆತನದ ಕೀರ್ತಿಯನ್ನು ನೆಲೆಗೊಳಿಸುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯ ಈ ರಾಜ್ಯವನ್ನು ರಕ್ಷಣೆಮಾಡುವ ವಿಚಾರದಲ್ಲಿ ನನಗೆಷ್ಟು ಹೊಣೆಗಾರಿಕೆ ಇದೆಯೋ ಅಷ್ಟೇ ಹೊಣೆಗಾರಿಕೆಯು ನಿನಗೂ ಇದೆ ನೀನು ನಮ್ಮ ವಿರುದ್ಧವಾಗಿ ನಮ್ಮ ವಿರೋಧಿಗಳೊಡನೆ ಸ್ನೇಹಮಾಡಿ ಕೊಂಡು ಸಿಂಹಾಸನಕ್ಕೆ ಅಪಚಾರ ಮಾಡುವಂಥಾ ಆಲೋಚನೆಯನ್ನು ಮಾಡುತ್ತಿದ್ದೀಯೆಂದು ಕೇಳಿದ್ದೇನೆ. ನಮ್ಮ ವಂಶದವರಾರೂ ಹಾಗೆ ಮಾಡಬಾರದು”

“ಮಹಾರಾಜರವರೇ! ನಾನು ಮನದಲ್ಲೊಂದು ಕಾರ್ಯದಲ್ಲೊಂದು ಮಾಡುವವನಲ್ಲ. ನಿಮ್ಮೆದುರಿಗೆ ಬಂದು ಈ ರಾಜ್ಯದ ಎರಡು ಮಾತುಗಳನ್ನು ಹೇಳಬೇಕೆಂದಿದ್ದೆ. ಅದು ಮಾತೊಶ್ರೀಯವರುಗಳಿಗೂ ತಿಳಿದಿರಬೇಕಾದ ವಿಷಯ. ನಿಮ್ಮೆಲ್ಲರಿಗೂ ನಾನು ಚಿಕ್ಕವನು ನಿಮ್ಮ ಮುಂದೆ ಅಂಥಾ ಮಾತುಗಳನ್ನು ಹೇಳುವುದು ಉದ್ಧಟತನವಾದೀತು ಎಂದು ಹಿಂತೆಗೆಯು ತ್ತಿದ್ದೆ. ಹಿರಿಯರಾದ ರಾಣಿಯವರು ನೀವು ನನ್ನನ್ನು ಕರೆಯಿಸಿ, ನೀವಾಗಿಯೇ ಪ್ರಸ್ತಾಪವೆತ್ತಿದ್ದೀರಿ. ನೀವು ಹೇಳಿದಂತೆ ನಮ್ಮ ಸಿಂಹಾಸನಕ್ಕೆ ವಿರೋಧಿ

ಗಳಾದ ಯಾವ ದುಷ್ಟಜನರೊಂದಿಗೂ ನಾನು ಸ್ನೇಹಮಾಡಿಕೊಂಡಿಲ್ಲ. ನಾನು ಸ್ನೇಹದಿಂದ ಗೌರವದಿಂದ ಪ್ರಸ್ತಾಪಮಾಡಿರುವುದು ಅಳಿಯ ರಾಮರಾಯರವರಲ್ಲಿ ಮತ್ತು ಅಳಿಯ ತಿರುಮಲರಾಯರಲ್ಲಿ ಅವರಿಬ್ಬರೂ ಸಿಂಹಾಸನಕ್ಕೆ ವಿರುದ್ಧಾಚರಣೆ ಮಾಡುವರೆಂದಾಗಲೀ ನಿಮ್ಮ ವಿರೋಧಿಗಳೆಂದಾಗಲೀ ನೀವುಗಳು ಸರ್ವಥಾ ಭಾವಿಸಿರಲಾರಿರಿ ಅಂಥಾ ಸಮಯ ಬಂದರೆ, ನಿಮ್ಮ ಸಮ್ಮುಖಕ್ಕೂ ಬಂದು ಸ್ಪಷ್ಟವಾಗಿ ಹೇಳುತ್ತಿದ್ದೆ. ವಿರೋಧಿಸುವ ಪ್ರಸಂಗ ಬಂದರೆ ನಾನೊಬ್ಬನೇ ವಿರೋಧಿಸಿ ಸಿಂಹಾಸನದ ಮುಂದೆ ಪ್ರಾಣವನ್ನೊಪ್ಪಿಸುವ ನಿರ್ಧಾರ ಮಾಡಿಕೊಂಡಿದ್ದೇನೆ. ಮಹಾರಾಜರವರು ಚಿರಂಜೀವಿ ವೆಂಕಟಾದ್ರಿಗೆ ಪಟ್ಟಕಟ್ಟಬೇಕೆಂದು ಆಲೋಚನೆಮಾಡಿದ್ದಾರಂತೆ. ಸಲಕರಣೆಗಳ ಸಿದ್ಧತೆಗೂ ಆರಂಭವಾಗಿದೆ ಮಂಡಲೇಶ್ವರರಿಗೆ ರಾಯಸಗಳು ಬರೆಸಲ್ಪಟ್ಟಿವೆ. ಈಗ ಪಟ್ಟಾಭಿಷೇಕದ ಪ್ರಯತ್ನಗಳಿಗೆ ಪ್ರಸಂಗವೇನು ಒದಗಿದೆ. ಮಹಾರಾಜರವರು ದೃಢಕಾಯರಾಗಿದ್ದೀರಿ ಪಟ್ಟಾಭಿಷಿಕ್ತರಾಗಿ ಇನ್ನೂ ನಾಲ್ಕು ವರ್ಷಗಳು ಕೂಡಾ ಕಳೆದಿಲ್ಲ ಈಗ ಆ ಬಾಲಕನ ಪಟ್ಟಾಭಿಷೇಕವೆಂಬುದು ಸೋಜಿಗವಾಗಿದೆ. ನಮ್ಮ ಅರಮನೆಯಲ್ಲಿ ಎಂದೆಂದಿಗೂ ಬಾಲಕರಿಗೆ ಪಟ್ಟಕಟ್ಟಬಾರದೆಂಬ ವಚನವನ್ನು ಬರೆದಿಡುವಂತೆ ನಮಗೆ ಕೆಟ್ಟ ಅನುಭವವಾಗಿದೆ. ನೋಡಿ ನೋಡಿ ಮತ್ತೆ ಅದೇ ಉದ್ಯಮಕ್ಕೆ ಕೈಹಚ್ಚಿದಂತಾಗಿದೆ. ಇದು ಮಹಾರಾಜರವರ ಸ್ವಂತಬುದ್ಧಿಯಲ್ಲ. ಆ ಸ್ವಾರ್ಥಪರರಾದ ಸಲಕ ಸಹೋದರರ ಕುತಂತ್ರದ ಪರಿಣಾಮ ಕುಮಾರ ವೆಂಕಟಾದ್ರಿಯು ಪ್ರಾಪ್ತವಯಸ್ಕನಾದರೆ ಹಿರಿಯರೆಲ್ಲರೂ ಅಪೇಕ್ಷೆಮಾಡಿದರೆ ನಾನೇ ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವನ ಶಿರಸ್ಸಿನ ಮೇಲೆ ರತ್ನಕಿರೀಟವನ್ನು ಇಡಲು ಸಿದ್ಧನಾಗಿದ್ದೇನೆ. ನೀವು ಹೇಳಿದಂತೆ ನಮ್ಮ ಮನೆತನದಲ್ಲಿ ಯಾರಿಗೆ ಪಟ್ಟವಾದರೂ ನಮಗೆಲ್ಲರಿಗೂ ಸಂತೋಷವೇ ಆದರೆ ಸಲಕ ಸಹೋದರರ ಕಲ್ಪನೆಯು ಹಾಗಿಲ್ಲ. ಅವರ ಕೃತ್ರಿಮೋಪಾಯದಿಂದ ಮಹಾರಾಜರು ಮರುಳಾದರೆ, ರಾಜ್ಯದ ಕ್ಷೇಮಾರ್ಥವಾಗಿ ನಾವಾದರೂ ಪ್ರತಿಕ್ರಿಯೆಯನ್ನು ಮಾಡಬೇಡವೇ? ನಾನು ಆ ಪ್ರತಿಕ್ರಿಯೆಯ ಪ್ರಯತ್ನದಲ್ಲಿ

ತೊಡಗಿದ್ದೇನೆ. ಅಳಿಯ ರಾಮರಾಯರೂ ತಿರುಮಲರಾಯರೂ ಏಕೆ ರಾಜಧಾನಿಯನ್ನೂ ಬಿಟ್ಟು ದೂರಹೋದರು. ಈ ದುರ್ಮಂತ್ರಿಗಳಿಗಾಗಿಯೇ ವಂಶಪಾರಂಪರ್ಯವಾಗಿ ಬಂದಿರುವ ಮಂತ್ರಿಗಳಾದರೂ ಏಕೆ ವಿಮುಖರಾಗಿದ್ದಾರೆ. ಈ ಸಲಕ ಸಹೋದರರುಗಳಿಗಾಗಿಯೇ ಹುಚ್ಚನೆಂದು ಅಲೆಯುತ್ತಿರುವ ಹೋಜೇ ತಿರುಮಲರಾಯನೂ ಕೂಡಾ ಈ ಸಲಕರ ವಿದ್ವೇಷಿಯೇ."

"ಸಾಕು! ಸಾಕು! ಸದಾಶಿವರಾಯ! ಒಂದರಮೇಲೊಂದರಂತೆ ವಾಗ್ಬಾಣಗಳನ್ನು ಪ್ರಯೋಗಿಸಬೇಡ. ಯುವರಾಜ ವೆಂಕಟಾದ್ರಿಗೆ ಪಟ್ಟ ಕಟ್ಟಬೇಕೆಂದು ನಾನೇ ಅಭಿಪ್ರಾಯಕೊಟ್ಟವನು. ರಾಜಬಂಧುಗಳೆಲ್ಲರಿಗೂ ಅದು ಪ್ರಿಯವಾಗಿಲ್ಲದಿದ್ದರೆ ನನಗೇನೂ ಹರವಿಲ್ಲ. ಅಳಿಯ ರಾಮರಾಯರನ್ನು ನಾನೆಷ್ಟೋ ವಿಧವಾಗಿ ಪ್ರಾರ್ಥನೆ ಮಾಡಿದೆ. ಈ ಮಹಾರಾಣಿಯರೂ ಎಷ್ಟೋ ಹೇಳಿದರು. ಅವರು ರಾಜಧಾನಿಯಲ್ಲಿ ಇರಲೊಪ್ಪದೇಹೋದರು. ಆಗ ರಾಜಬಂಧುಗಳಾದ ಸಲಕ ಸಹೋದರರಿಗೆ ಅಧಿಕಾರ ಸಿಕ್ಕಿತು. ನನಗೆ ರಾಜಕಾರ್ಯಗಳಲ್ಲಿ ಆಸಕ್ತಿಯಿಲ್ಲವಾಗಿದೆ. ಈ ಯುದ್ಧ ವಿಗ್ರಹಗಳು ಸಂಧಾನಗಳು ಇದೆಲ್ಲವೂ ನನ್ನ ಮನಸ್ಸಿಗೆ ರುಚಿಸುತ್ತಿಲ್ಲ. ಆದರಿಂದ ನಾನು ರಾಜ್ಯಪರಿತ್ಯಾಗ ಮಾಡಬೇಕೆಂದಿದ್ದೇನೆ ನೀನು ಪ್ರಾಪ್ತವಯಸ್ಕನಾಗಿರುವೆ. ನೀನು ನನ್ನೊಡನೆ ಇರು. ರಾಮರಾಯರಂತೆ ನನ್ನನ್ನು ಬಿಟ್ಟು ಹೋಗಬೇಡ. ಈ ರಾಜಕಾರ್ಯಗಳೆಲ್ಲವನ್ನು ನೀವು ನಿರ್ವಹಿಸಿಕೊಳ್ಳಿರಿ. ನಾನು ನಿನ್ನನ್ನು ಮಗನಿಗಿಂತಲೂ ಹೆಚ್ಚಾಗಿ ನೋಡುತ್ತೇನೆ ನೀನು ಕುಮಾರ ವೆಂಕಟಾದ್ರಿಯನ್ನು ನಿನ್ನ ಸೋದರನಿಗಿಂತಲೂ ಮಿಗಿಲಾಗಿಯೇ ನೋಡಿಕೊಳ್ಳುವಿಯೆಂಬ ಭರವಸೆಯು ನನಗಿದೆ. ಕೃಷ್ಣದೇವರಾಯರವರು ಸ್ವರ್ಗಸ್ಥರಾದಮೇಲೆ ಈ ರಾಣಿಯರು ತಿರುಪತಿಗೆ ತೆರಳುವ ಯತ್ನಮಾಡಿದರು. ನನ್ನ ಪ್ರಾರ್ಥನೆಯಂತೆ, ಅವರು ಇಲ್ಲಿಯೇ ನಿಂತರು. ನನಗಾಗಿ ಅಲ್ಲದಿದ್ದರೂ ರಾಜ್ಯಕ್ಷೇಮಾರ್ಥವಾಗಿಯಾದರೂ ನೀನು ನಮ್ಮೊಡನೆ ಇರು. ನಮ್ಮ ವಂಶದಲ್ಲಿ ಹುಟ್ಟಿದವರಾರೂ ನಮ್ಮನ್ನು ಬಿಟ್ಟುಹೋಗುವುದು ನನ್ನ

ಮನಸ್ಸಿಗೆ ಹಿತಕರವಾದುದಲ್ಲ. ನನ್ನ ಮಾತನ್ನು ನಂಬಿ ನೀನು ಅದರಂತೆ ನಡಿ ನಿನಗೂ ಶ್ರೇಯಸ್ಸಾಗುವುದು ರಾಜ್ಯಕ್ಕೂ ಕ್ಷೇಮವು ಲಭಿಸುವುದು."

ರಾಣಿ ಚಿನ್ನಾಂಬಿಕೆಯು "ಸದಾಶಿವರಾಯ! ಮಹಾರಾಜರ ಮಾತು ನಮ್ಮೆಲ್ಲರಿಗೂ ಸಂತೋಷಕರವಾಗಿದೆ. ನೀನು ಅವರ ಮಾತಿಗೆ ತಲೆಬಾಗಿ ನಡೆದುಕೋ ಇದನ್ನು ಕೇಳಿ ರಾಮರಾಯರು ಎಷ್ಟೋ ಸಂತೋಷಪಡುವರು. ರಾಜಧಾನಿಯಲ್ಲಿರುವ ರಾಜ್ಯದ ಅಭಿಮಾನಶಾಲಿಗಳೆಲ್ಲರೂ ಹರ್ಷಿಸುವರು" ಎಂದು ಹೇಳಿದಳು.

ಸದಾಶಿವರಾಯನು, ತಲೆಬಾಗಿ ಒಪ್ಪಿಗೆಯನ್ನು ಸೂಚಿಸಿದನು.

ಅಚ್ಯುತರಾಯನು ಸದಾಶಿವರಾಯನನ್ನು ರಾಣಿಯವರ ಸಮ್ಮುಖ ದಲ್ಲಿಯೇ ಬಿಟ್ಟು ತನ್ನರಮನೆಗೆ ತೆರಳಿದನು. ರಾಣಿಯವರು ಸದಾಶಿವ ರಾಯನಿಗೆ - ನಾನಾವಿಧವಾಗಿ ಬೋಧಿಸಿದರು. ಮಹಾರಾಜಾ ಅಚ್ಯುತ ರಾಯನ ಮನಸ್ಸು ಸ್ಥಿರವಾಗಿಲ್ಲ. ಅವನು ಯಾವಾಗಲೂ ಚಂಚಲ ಮನಸ್ಸಿನವನಾಗಿದ್ದಾನೆ. ಅವನ ಹಿತರಕ್ಷಣೆಯನ್ನು ಮಾಡಿ ಗೌರವವನ್ನು ಕಾಪಾಡುವುದು ನಮ್ಮೆಲ್ಲರ ಕರ್ತವ್ಯ ದೊರೆತ ಅವಕಾಶದಲ್ಲಿ ಸಲಕ ಸಹೋ ದರರು ಪ್ರಬಲಿಸಿಬಿಟ್ಟಿದ್ದಾರೆ. ಒಂದೇ ಬಾರಿಗೆ ಅವರನ್ನು ಮುರಿದು ಹಾಕುವುದು ಸಾಧ್ಯವೂ ಅಲ್ಲ ಹಿತಕರವೂ ಅಲ್ಲ ನೀನು ಮಹಾರಾಜ ರೊಡನಿದ್ದು ರಾಜ್ಯಸೂತ್ರಗಳನ್ನು ಕೈಗೆತೆಗೆದುಕೊಂಡರೆ, ಸಲಕ ಸಹೋದರರು ತಾವಾಗಿಯೇ ದೂರವಾಗುತ್ತಾರೆ. ಪಟ್ಟಾಭಿಷೇಕದ ವಿಚಾರದಲ್ಲಿ ನಿನ್ನ ಮಾತು ಸರಿಯಾಗಿದೆ. ಅದು ದೂರಾಲೋಚನೆಯಿಂದ ಕೂಡಿದ್ದಾಗಿದೆ. ಮಹಾರಾಜರು ಆತುರದಿಂದ ಕುಮಾರ ವೆಂಕಟಾದ್ರಿಗೆ ಪಟ್ಟಾಭಿಷೇಕ ಮಾಡಬೇಕೆಂದು ನಿಶ್ಚಯಮಾಡಿದ್ದೇನೋ ನಿಜ. ಚಂದ್ರಗಿರಿಯಲ್ಲಿರುವ ಅಳಿ ಯಂದಿರು ಪೂರ್ಣ ಸಮ್ಮತಿಯನ್ನು ಕೊಡದಿದ್ದಾಗಲೇ ಮಹಾರಾಜನು ಆ ಆಲೋಚನೆಯನ್ನು ಬಿಟ್ಟಂತೆಯೇ ಆಯಿತು. ಸಲಕಸಹೋದರರು ಅದನ್ನು ಮುಂದುವರಿಸುತ್ತಿದ್ದಾರೆ. ಇದಕ್ಕೆ ನೀನು ವಿರೋಧಿಯೆಂಬುದು ರಾಜಧಾನಿ ಯಲ್ಲೆಲ್ಲಾ ಪ್ರಸಿದ್ಧವಾಗಿದೆ. ನೀನು ಮಹರಾಜರೊಡನೆ ಸೇರಿಹೋದ

ಮೇಲೆ ಸಲಕ ಸಹೋದರರು ತಮ್ಮಷ್ಟಕ್ಕೆ ತಾವೇ ಸುಮ್ಮನಾಗುತ್ತಾರೆ. ಸಲಕ ಸಹೋದರರು ಈ ರಾಜ್ಯದಿಂದ ದೂರವಾಗಬೇಕು ದೇವರು ಹುಚ್ಚು ತಿರುಮಲನ ಬಾಯಿ ಮುಚ್ಚಿಸಬೇಕು ಇಷ್ಟಾದರೆ ಈ ರಾಜ್ಯಕ್ಕೆ ಕ್ಷೇಮವಾಗುತ್ತದೆ, ನಿಷ್ಕಂಟಕವಾಗುತ್ತದೆ ನೀನು ಅಧಿಕಾರಸೂತ್ರಗಳನ್ನು ವಹಿಸಿಕೊಳ್ಳುತ್ತಲೇ ಮಂಡಲೇಶ್ವರರುಗಳು ಸ್ನೇಹಭಾವದಿಂದ ನಮ್ಮ ಕಡೆಗೆ ಬಗ್ಗಿ ಬರುತ್ತಾರೆಂಬ ನಂಬಿಕೆಯು ನಮಗಿದೆ. ನಿನ್ನ ಪ್ರಭಾವದಿಂದ ಸಾಮ್ರಾಜ್ಯದಲ್ಲಿ ಶಾಂತಿ ಯುಂಟಾದರೆ, ಮಹಾರಾಜಾ ಕೃಷ್ಣದೇವರಾಯ ರಂತೆ ನೀನೂ ಖ್ಯಾತಿವಂತನಾಗುತ್ತೀಯ.

ಸದಾಶಿವರಾಯನು "ಮಾತೆಯವರೇ! ಮಹಾರಾಜ ಅಚ್ಯುತರಾಯರ ಮಾತಿನಲ್ಲಿ ನನಗೆ ಗೌರವವುಂಟು ಆದರೆ ಸಲಕ ಸಹೋದರರ ಮಾಯಾ ಜಾಲಕ್ಕೆ ಅವರು ಸಿಲುಕದಂತಿರಬೇಕು ನಿಮ್ಮ ಭರವಸೆ ಇದ್ದರೆ ನಾನು ಮಹಾರಾಜರ ಸೇವೆಗೆ ಒಪ್ಪಿಕೊಳ್ಳುತ್ತೇನೆ" ಎಂದು ಹೇಳಿದನು.

ಅಂದಿನಿಂದ ಸದಾಶಿವರಾಯನ ಅಧಿಕಾರಕ್ಕೆ ಆರಂಭವಾಯಿತು. ಸದಾಶಿವರಾಯನ ಅಧಿಕಾರವು ಮೆಲ್ಲಮೆಲ್ಲಗೆ ಆರಂಭವಾಯಿತು. ಮಂತ್ರಿಗಳೆಲ್ಲರೂ ಹರ್ಷಚಿತ್ತರಾದರು. ಸಲಕ ಸಹೋದರರು ಹೊರಗಿನ ತೋರಿಕೆಗೆ ಅನುಸರಿಸಿ ನಡೆಯುತ್ತಾ ಬಂದರು. ರಾಜಾನುಗ್ರಹಪಾತ್ರನೂ ರಾಜಬಂಧುವೂ ಆದ ಸದಾಶಿವರಾಯನಿಗೆ ವಿರೋಧವಾಗಿ ನಡೆದು ಕೊಳ್ಳುವುದಕ್ಕಿಂತಲೂ ಅವನನ್ನನುಸರಿಸಿ ಕಾರ್ಯಸಾಧನೆ ಮಾಡುವುದರಿಂದಲೇ ತಮ್ಮ ಲಾಭವು ಹೆಚ್ಚುವುದೆಂದು ಅವರು ಬಗೆದರು.

ರಾಜಧಾನಿಯ ಸಮಾಚಾರಗಳನ್ನು ಕೇಳಿ ರಾಮರಾಯನಿಗೆ ಅತ್ಯಂತ ಸಂತೋಷವಾಯಿತು. ಎಲ್ಲದಕ್ಕಿಂತಲೂ ಅಚ್ಯುತರಾಯನ ಬುದ್ಧಿಕೌಶಲ ವನ್ನೂ ಸಮಯಸ್ಫೂರ್ತಿಯನ್ನೂ ಕೊಂಡಾಡಿದರು.

ಅಚ್ಯುತರಾಯನು ಒಳ್ಳೆಯ ಮಂತ್ರಿಯಾಗಲು ಅರ್ಹನಾಗಿದ್ದಾನೆ. ಅವನು ಮಹಾರಾಜಾಧಿರಾಜನಾಗಲು ಅನರ್ಹ ಎಂದು ಅಣ್ಣತಮ್ಮಂದಿರಿ

ಬ್ಬರೂ ಮಾತನಾಡಿಕೊಂಡರು. ವಿಜಯನಗರದ ಸಮಾಚಾರಗಳು ಹೇಗಿದೆ. ಅಲ್ಲಿ ಸದಾಶಿವರಾಯನ ಕ್ಷೇಮವು ಸಾಧಿಸಲ್ಪಡುತ್ತದೆಯೋ ಎಂಬುದನ್ನು ನೋಡಿಕೊಂಡು ಬರುವುದಕ್ಕಾಗಿ ತಿರುಮಲಾಂಬೆಯನ್ನು ಚಿನ್ನಾಂಬೆಯನ್ನು ತೌರುಮನೆಗೆ ಕಳಿಸಿಕೊಟ್ಟರು.

ಸದಾಶಿವರಾಯನಿಗೆ ಆ ಸೋದರಿಯರು ರಾಜಧಾನಿಗೆ ಬಂದದ್ದು ಅತ್ಯಂತ ಸಂತೋಷವಾಯಿತು. ತಾನು ಅಧಿಕಾರವಹಿಸಿಕೊಂಡಿದ್ದು ರಾಮರಾಯರಿಗೆ ಸಂತೋಷವಾಗಿದೆಯೆಂಬುದಕ್ಕೆ ಇದೇ ಚಿಹ್ನೆಯೆಂದು ಅವನು ಭಾವಿಸಿಕೊಂಡನು.

ಆ ರಾಜಪುತ್ರಿಯರಿಬ್ಬರೂ ವಿಜಯನಗರಕ್ಕೆ ಬಂದು ಅಚ್ಯುತರಾಯನ ಭೇಟಿಮಾಡಿ, "ಮಹಾರಾಜರೇ ಸದಾಶಿವರಾಯನನ್ನು ನೀವು ಪರಿಗ್ರಹಿಸಿ ವ್ಯಕ್ತಪಡಿಸಿದ ರಾಜನೀತಿಯನ್ನು ನಿಮ್ಮ ಅಳಿಯಂದಿರಿಬ್ಬರೂ ಕೊಂಡಾಡುತ್ತಾರೆ ಈ ಚಕ್ರಾಧಿಪತ್ಯದಲ್ಲಿ ಎದ್ದಿರುವ ಅಂದೋಳನವೆಲ್ಲವೂ ತನ್ನಷ್ಟಕ್ಕೆ ತಾನೇ ಶಮನವಾಗುವುದೆಂದು ಅವರುಗಳು ಭಾವಿಸುತ್ತಾರೆ. ರಾಜಕುಲವೆಲ್ಲವೂ ಒಂದಾದರೆ ಉದ್ವೃತರಾದ ಮಂಡಲೇಶ್ವರರೂ, ಅವಿನೀತರಾದ ಅಧಿಕಾರಿಗಳೂ ವಶವರ್ತಿಗಳಾಗುತ್ತಾರೆ ನೀವು ಆಲೋಚಿಸಿದ ಪಟ್ಟಾಭಿಷೇಕ ಕಾರ್ಯಕ್ಕಿಂತಲೂ ಈ ಕಾರ್ಯವು ವಿಶೇಷ ಫಲಪ್ರದವಾಗುವುದೆಂದು ಎಲ್ಲರೂ ನಿರೀಕ್ಷಿಸಿದ್ದಾರೆ" ಎಂದು ಹೇಳಿದರು.

"ರಾಜಕುಮಾರಿಯರಾದ ನೀವು ಹರ್ಷದಿಂದ ರಾಜಧಾನಿಗೆ ನೀವಾಗಿ ಬಂದುದೇ ನಮಗೆ ಮಹದಾನಂದವನ್ನುಂಟುಮಾಡಿದೆ. ರಾಜ್ಯವೆಲ್ಲವೂ ಸಂತಸಗೊಂಡಿದೆಯೆಂಬುದಕ್ಕೆ ನಿಮ್ಮ ಆಗಮನವೇ ಸಾಕ್ಷಿ ಇನ್ನು ನಾವು ಆತಂಕಪಡಬೇಕಾದುದಿಲ್ಲ ಪ್ರಾರ್ಥಿಸಬೇಕಾದುದೂ ಇಲ್ಲ ಅಳಿಯಂದಿರು ತಾವಾಗಿಯೇ ರಾಜಧಾನಿಗೆ ಬರುತ್ತಾರೆ. ಅದರಿಂದಲೇ ನಮಗೆ ಎಷ್ಟೋ ಬಲಬಂದಂತಾಗುತ್ತದೆ." ಎಂದು ಹೇಳಿ ಆದರದಿಂದ ಅವರನ್ನು ಉಪಚರಿಸಿದನು.

ಅಚ್ಯುತರಾಯನ ರಾಣಿ ವರದಾಂಬಿಕೆಯು ತನ್ನ ಮಗನಿಗೆ ಪಟ್ಟಾಭಿಷೇಕವಾಗುವುದು ತಪ್ಪಿಹೋಯಿತಲ್ಲಾ ಎಂದು ವ್ಯಸನಪಡುವುದಕ್ಕಿಂತಲೂ ಅತಿಶಯವಾಗಿ ಮಹಾರಾಜರ ವಿರೋಧಿಗಳೆಲ್ಲರೂ ಮಾಯವಾಗಿ ರಾಜ್ಯಕ್ಕೆ ಒದಗಿದ್ದ ಆತಂಕವು ಪರಿಹಾರವಾಯಿತಲ್ಲಾ ಎಂದು ಸಂತೋಷಪಟ್ಟುಕೊಂಡಳು.

## ೧೭

ಸದಾಶಿವರಾಯನು ಅಧಿಕಾರಕ್ಕೆ ಬಂದೊಡನೆಯೇ ವಿಜಯನಗರದಲ್ಲಿ ತನಗೆ ಆಪ್ತರಾದವರಾರು ? ಉದಾಸೀನರಾರು ? ವಿರೋಧಿಗಳಾರು ? ಎಂಬುದನ್ನು ಪರೀಕ್ಷಮಾಡಲು ಅವನಿಗೆ ಸ್ವಲ್ಪಕಾಲ ಬೇಕಾಯಿತು. ದೊಡ್ಡಣ್ಣ ದಂಡನಾಯಕನು ಬಂದು ಸದಾಶಿವರಾಯನ ಭೇಟಿಮಾಡಿದನು. ಅವರ ಸಾಮಾನ್ಯ ಮಾತುಕಥೆಗಳಾದನಂತರ—

"ಸದಾಶಿವರಾಯರೇ ಈ ಪ್ರಕರಣದಲ್ಲಿ ವಾಸ್ತವವಾಗಿಯೂ ನೀವು ಗೆದ್ದಂತೆಯೇ ಆಯಿತು. ಯುದ್ಧವಾಗಲಿಲ್ಲ. ದೊಡ್ಡ ತಲೆಗಳಾವುವೂ ನೆಲಕ್ಕುರುಳಲಿಲ್ಲ ಆದರೆ ನಿಮ್ಮ ಇಷ್ಟಾರ್ಥವು ಸಿದ್ಧಿಸಿದಂತಾಯಿತು. ಇದನ್ನು ದೈವೀಪ್ರಸಾದವೆಂದು ಹೇಳಬಹುದು."

ದೊಡ್ಡಣ್ಣದಂಡನಾಯಕ ನಿನ್ನ ವಿಚಾರವನ್ನು ನಾನು ಆಮೂಲಾಗ್ರವಾಗಿ ಅರಿತಿದ್ದೇನೆ. ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳಿಬಿಡು. ನೀನು ಇನ್ನು ಬಹುಕಾಲ ಪ್ರಚ್ಛನ್ನನಾಗಿರುವುದು ಸಾಧ್ಯವಿಲ್ಲ. ಮಹಾರಾಜರಿಂದ ರಾಮರಾಯರಿಗೆ ಪತ್ರವನ್ನು ಕೊಂಡುಹೋದವನು ನೀನು. ರಾಮರಾಯರಿಂದ ಉತ್ತರವನ್ನು ತಂದವನೂ ನೀನು. ನೀನು ರಾಮರಾಯರ ಅನುಗ್ರಹಪಾತ್ರನೆಂಬುವುದನ್ನು ನಾನು ಚೆನ್ನಾಗಿ ಬಲ್ಲೆ. ಆ ವಿಷಯದಲ್ಲಿ ನಾವಿಬ್ಬರೂ ಸಮಾನರು ನಾನು ರಾಜಕುಲೋತ್ಪನ್ನ ನೀನು ಸಾಮಾನ್ಯ ಸೇನಾಧಿಪತಿ ಎಂಬ ವ್ಯತ್ಯಾಸವನ್ನು ನಾನು ಬಗೆಯುವವನಲ್ಲ ನಿನ್ನನ್ನು ನಂಬಿದರೆ, ಸ್ನೇಹಿತನೆಂದು ನಂಬುತ್ತೇನೆ. ನಂಬದಿದ್ದರೆ ನಿನ್ನ ದಾರಿ ನಿನಗೆ ನನ್ನ ಯೋಗಕ್ಷೇಮ ನನಗೆ. ನೀನು ಸ್ಪಷ್ಟವಾಗಿ ಹೇಳು. ಯಾರು ನಿನಗೆ

ಅಹಿತರು ಅದನ್ನು ಹೇಳು ನೀನೊಬ್ಬ ರಾಜಕಾರಣಿಯೆಂದು ನಾನು ಗುರು ತಿಟ್ಟದ್ದೇನೆ ಈಗಲೇ ಹೇಳಬೇಕೆಂಬುದೇನೂ ಇಲ್ಲ ನೀನು ಬೇಕಾದಷ್ಟು ಕಾಲಾವಕಾಶವನ್ನೂ ತೆಗೆದುಕೋ ಮೊದಲು ನಿನ್ನ ಮನಸ್ಸನ್ನು ಸ್ಥಿರ ಮಾಡಿಕೊಂಡುಬಾ ”

“ ಸದಾಶಿವರಾಯರೇ ನನ್ನ ಮನಸ್ಸು ಸ್ಥಿರವಾಗಿದೆ. ಎಲ್ಲವನ್ನೂ ತಮ್ಮೊಂದಿಗೆ ಮಾತನಾಡುವುದಕ್ಕಾಗಿಯೇ ಇಂದು ಇಲ್ಲಿಗೆ ಬಂದಿದ್ದೇನೆ. ನೀವು ನನ್ನನ್ನು ನಂಬಿ ನಿಮ್ಮವನೆಂದು ಅಂಗೀಕರಿಸಿದರೆ ನನ್ನ ಪ್ರಾಣವನ್ನು ಪಣವಾಗಿಟ್ಟು ಸೇವೆ ಮಾಡುತ್ತೇನೆ. ಇಲ್ಲದಿದ್ದರೆ, ಈ ರಾಜಧಾನಿಯನ್ನು ಇಂದೇ ಬಿಟ್ಟುಹೋಗುತ್ತೇನೆ.”

ಹೇಳು ! ದೊಡ್ಡಣ್ಣನಾಯಕ ಅಷ್ಟೊಂದು ತೀವ್ರಮನೋಭಾವವೇಕೆ ನಾನು ನಂಬದಿದ್ದರೂ ನನ್ನವನೆಂದು ಪರಿಗ್ರಹಿಸದಿದ್ದರೂ ನೀನು ಈ ರಾಜ ಧಾನಿಯಲ್ಲಿ ಸುಖವಾಗಿರಬಹುದು. ನನ್ನಿಂದ ಎಂದೂ ನಿನಗೆ ಕೆಡಕಾಗದು ”

ದೊಡ್ಡಣ್ಣನು ತನ್ನ ರಾಜಕೀಯ ರಹಸ್ಯವನ್ನು ಬಿಚ್ಚಲು ಆರಂಭಿ ಸಿದನು.

ಸದಾಶಿವರಾಯರೇ ಈ ಸಲಕ ಸಹೋದರರ ಮೇಲೆ ನನಗೆ ಮೊದಲಿ ನಿಂದಲೂ ದ್ವೇಷವಿದೆ ಆ ದ್ವೇಷದ ಕಾರಣವು ಬಲುದೊಡ್ಡದು. ಅವರಿಂದ ಈ ರಾಜ್ಯಕ್ಕೆಹಾನಿಯುಂಟಾಗುವುದೆಂದು ನಾನು ದೇವರಮುಂದೆ ಪ್ರಮಾಣಮಾಡಿ ಹೇಳುತ್ತೇನೆ. ಅವರಿಗೂ ನನ್ನಮೇಲೆ ಕಣ್ಣಿದೆ. ಆದರೆ ನನಗೆಷ್ಟು ದ್ವೇಷವಿದೆ ಯೆಂಬುದನ್ನುಅವರರಿಯರು ನಾನು ಅಳಿಯ ರಾಮರಾಯರ ಕಡೆಯವರೆಂದು ಅವರು ಸಂದೇಹಪಡುತ್ತಾರೆ. ಅವರಿಗೆ ಅದನ್ನು ತೋರಿಸಿಕೊಳ್ಳುವ ಧೈರ್ಯ ವಿಲ್ಲ. ನೀವು ಈ ಪಟ್ಟಾಭಿಷೇಕ ಕಾರಣದಿಂದ ವಿರೋಧವನ್ನೆಬ್ಬಿಸಿದಾಗ ಬಹು ಜನರು ಸಕಲ ಸಹೋದರರ ವಿರೋಧಿಗಳಾಗಿದ್ದರು. ಈ ಸಮಯದಲ್ಲಿ ಅವರಿಬ್ಬರನ್ನು ಮುಗಿಸಿಬಿಡುತ್ತೇನೆಂದು ಸಂಕಲ್ಪಮಾಡಿದ್ದೆ. ನಿಮ್ಮ ದಯೆ ಯಿಂದ ಅವರು ಉಳಿದುಕೊಂಡರು. ಅವರು ಮೊದಲನೆಯ ಶತ್ರುಗಳು. ಮತ್ತೊಬ್ಬ ಸಲಕ ತಿಮ್ಮಣ್ಣನು ಅತಿ ಬುದ್ಧಿವಂತ. ಪರಾಕ್ರಮಶಾಲಿಯೂ

ಹೌದು. ಅವನ ಮೇಲೆ ಯಾರೂ ಸಂದೇಹಪಡುವಂತೆಯೂ ಇಲ್ಲ. ಏಕೆಂದರೆ ರಾಮರಾಯರೇ ಅವನನ್ನು ತಂದು ಈ ಆ ಸ್ಥಾನದಲ್ಲಿ ನಿಲ್ಲಿಸಿದವರು. ಅವನು ರಾಮರಾಯರು ಇಲ್ಲಿರುವ ತನಕ ಅವರ ಅವಿಚ್ಛಿನ್ನಭಕ್ತನಾಗಿದ್ದ. ಅವರು ಹೊರಟುಹೋದ ಮೇಲೆ ಈ ತಿರುಮಲರನ್ನೇ ಸೇರಿಕೊಂಡಿದ್ದಾನೆ. ಆಗಲೂ ಅವನ ಕೈಯೇ ಮೇಲಾಗಿತ್ತು. ಈಗಲೂ ಅವನ ಕೈಯೇ ಮುಂದಾಗಿದೆ ರಾಮರಾಯರೇ ಪೆದ್ದತಿರುಮಲರಾಯನನ್ನು ದೂರವಿಟ್ಟು ಈ ಸಲಕ ತಿಮ್ಮಣ್ಣನನ್ನು ರಾಜಭಂಡಾರದ ಅಧಿಕಾರಿಯಾಗಿ ಮಾಡಿದರು. ಈಗಲೂ ಅವನು ಅದೇ ಅಧಿಕಾರದಲ್ಲಿದ್ದಾನೆ. ದೊಡ್ಡ ದೊಡ್ಡ ಅಧಿಕಾರಿಗಳು ಅವನ ಸ್ನೇಹಮಾಡುತ್ತಾರೆ. ಸಾಮಂತರೂ ಮಂಡಲೇಶ್ವರರೂ ಅವನ ವಿಶ್ವಾಸಿಗಳಾಗಿದ್ದಾರೆ ಈ ಮೂವರು ಒಂದಾಗಿದ್ದಾರೆ. ನೀವು ಇವರ ಕೈಯ ಗೊಂಬೆಯಾಗಬಹುದು ಅಥವಾ ಅಪಾಯಕ್ಕೆ ಸಿಕ್ಕಿ ಮಾಯವಾಗಿ ಹೋಗಬಹುದು ಆದರೆ ರಾಮರಾಯರ ಕಡೆಯವನೆಂಬ ಕಾರಣದಿಂದ ನಾನು ಸಲಕ ತಿಮ್ಮನ ಸ್ನೇಹಿತನಾಗಿಯೇ ಇದ್ದೇನೆ. ಈ ತಿರುಮಲ ಸಹೋದರರ ವಿಚಾರವನ್ನು ಸಮಯ ಬಂದಾಗ ಅವರಿಗೆ ಆಗಾಗ ಸೂಚನೆ ಕೊಟ್ಟೇ ಇದ್ದೇನೆ. ಆದರೆ ಉಳಿದ ಮಂತ್ರಿಗಳೆಲ್ಲರೂ ನಿಮ್ಮ ಪಕ್ಷದಲ್ಲಿದ್ದಾರೆ ಸೇನಾಧಿಪತಿಗಳಲ್ಲಿಯೂ ಎರಡು ಭಾಗಗಳಿವೆ. ಆದರೆ ಅವರೆಲ್ಲರೂ ರಾಮರಾಯರಿಗೆ ಅಂಜಿ ನಡೆಯುತ್ತಾರೆ ಮಂಡಲೇಶ್ವರರಲ್ಲಿಯೂ ಸಾಮಂತರಲ್ಲಿಯೂ ಹೇಗಿದೆಯೋ ನಾನರಿಯೆ. ನಾನು ನಿಮ್ಮ ಉದಾತ್ತ ಗುಣಗಳನ್ನು ಮೆಚ್ಚಿದ್ದೇನೆ ರಾಮರಾಯರ ಮತ್ತು ರಾಣಿಯರುಗಳ ಅಭಿಮಾನವು ನಮ್ಮ ಮೇಲಿದೆ. ಆದುದರಿಂದ ಪ್ರತ್ಯಕ್ಷವಾಗಿ ನಿಮ್ಮ ಸೇವೆಗೆ ಸೇರಬೇಕೆಂದಿದ್ದೇನೆ.

" ದೊಡ್ಡಣ್ಣ ! ನಿನ್ನಂತಹ ತರುಣ ಅಧಿಕಾರಿಗಳು ನನ್ನ ಸಹಾಯಕ್ಕೆ ಬೇಕೇಬೇಕು ನೀನು ನನ್ನವನೆಂದೇ ಭಾವಿಸುತ್ತೇನೆ. ಈಗಿರುವಂತೆಯೇ ನೀನಿದ್ದರೆ ನಿನ್ನಿಂದ ಹೆಚ್ಚು ಪ್ರಯೋಜನವಾಗುತ್ತದೆ. ನಾನು ಸಮಯ ನೋಡಿ ನಿನ್ನನ್ನು ಮಹಾರಾಜರ ಸನ್ನಿಧಾನದಲ್ಲಿ ಸೇರಿಸಿಬಿಡುತ್ತೇನೆ.

ಆದರಿಂದ ಹೆಚ್ಚು ಪ್ರಯೋಜನವಾಗುವುದು."

ಒಂದೆರಡು ದಿನಗಳಲ್ಲಿಯೇ ದೊಡ್ಡಣ್ಣ ದಂಡನಾಯಕನು ಮಹಾರಾಜರವರ ಅಂಗರಕ್ಷಕ ಪಡೆಯ ಯಜಮಾನನಾದನು. ಈ ಹೊಸ ಹುದ್ದೆಗೆ ಕಾರಣಭೂತರಾರೆಂದು ತಿರುಮಲ ಸೋದರರು ಆಲೋಚನೆಮಾಡಿದರು. ಅವರಿಗೆ ಸದಾಶಿವರಾಯನ ಕಡೆಗೆ ದೃಷ್ಟಿಯು ಹೋಗಲಿಲ್ಲ. ಮಹಾರಾಜರೇ ನೇಮಿಸಿಕೊಂಡಿರಬಹುದು ಅಥವಾ ರಾಮರಾಯರ ಸಿಫಾರ್ಸು ಬಂದಿರಬಹುದು. ದೊಡ್ಡಣ್ಣನು ಗಂಭೀರಸ್ಥನಾದ ತರುಣ ಯಾವಾಗಲೂ ಅಪಾಯಕಾರಿಯಲ್ಲ ಎಂದುಕೊಂಡರು.

ದೊಡ್ಡಣ್ಣನಿಗೆ ಒಳ್ಳೆಯ ಸ್ಥಳವು ದೊರೆತಂತಾಯಿತು. ಮಹಾರಾಜರು ಆಗಾಗ ಅವನನ್ನು ಕರೆದು ಮಾತನಾಡಿಸುತ್ತಿದ್ದರು. ಸದಾಶಿವರಾಯನು ದೊಡ್ಡಣ್ಣನನ್ನು ಸಮಯ ಬಂದರೆ ಉಪಯೋಗಿಸಿಕೊಳ್ಳಬಹುದು ಎಂದು ಭಾವನೆಮಾಡಿಕೊಳ್ಳುತ್ತಿದ್ದನು.

ಸದಾಶಿವರಾಯನು ಮಹಾರಾಜರ ಕ್ಷೇಮವನ್ನು ನೋಡಿಕೊಳ್ಳುವುದು ನನ್ನ ಮೊದಲನೆಯ ಕೆಲಸ ತಿರುಮಲ ಸಹೋದರರು ಮಹಾರಾಜರಿಗೆ ಯಾವ ಹಾನಿಯನ್ನೂ ಉಂಟುಮಾಡುವರಲ್ಲ ಸಲಕ ತಿಮ್ಮನು ಅವರೊಡನೆಯೇ ಸೇರಿಕೊಂಡಿರುತ್ತಾನೆ ಹುಚ್ಚುತಿರುಮಲನ ವಿಚಾರದಲ್ಲಿ ಮಾತ್ರ ನಿರ್ಭಯವಾಗಿ ಇರುವಂತಿಲ್ಲ. ಆದರೆ ಅವನ ಗೊಡವೆಯನ್ನು ನಾನು ಹೆಚ್ಚಾಗಿ ಹಚ್ಚಿಕೊಳ್ಳುವ ಅಗತ್ಯವಿಲ್ಲ. ಸಲಕ ಸಹೋದರರು ಆ ಹುಚ್ಚುತಿರುಮಲನನ್ನು ನೋಡಿಕೊಳ್ಳುತ್ತಾರೆ. ಎಂದು ಯೋಚನೆ ಮಾಡಿಕೊಳ್ಳುತ್ತಿದ್ದನು.

ಸಲಕ ತಿಮ್ಮನು ಅರಮನೆಯಲ್ಲಿಯೇ ಯಾವಾಗಲೋ ಸದಾಶಿವರಾಯನಿಗೆ ಬೆಟ್ಟಿಯಾದನು ಸದಾಶಿವರಾಯನು ಸಲಕ ತಿಮ್ಮನು ರಾಮರಾಯರ ಕಡೆಯವನು ಅರ್ಥಾತ್ ಅವನು ನಮ್ಮವನೇ ಆಗಿರುತ್ತಾನೆ ಎಂದುಕೊಂಡನು. ಆದರೆ ಭಂಡಾರಕ್ಕೆ ಬರಬೇಕಾದ ರಾಜಾದಾಯಗಳ ವಿಚಾರವಾಗಿ ಸದಾಶಿವರಾಯನು ಹೆಚ್ಚುಗಮನ ಕೊಡಬೇಕಾಗಿದ್ದಿತು.

ಸಲಕ ತಿಮ್ಮನೊಡನೆ ಆ ಬಗ್ಗೆ ವಿಶೇಷ ಸಮಾಲೋಚನೆ ನಡೆಸುವ ಸಂದರ್ಭ ಗಳೂ ಒದಗುತ್ತಿದ್ದವು. ಸಲಕ ತಿಮ್ಮನು, "ದಕ್ಷಿಣದ ಕಡೆಯಿಂದ ಮಂಡಲೇಶ್ವರರು ಸರಿಯಾಗಿ ಹಣ ಕಳಿಸುತ್ತಿಲ್ಲ ಮೈಸೂರಿನವರು ಅರ ಮನೆಯ ಬಂಧುತ್ವದ ನೆಪದಿಂದ ಪೊಗದಿಗಳನ್ನು ಸಲ್ಲಿಸುತ್ತಲೇ ಇಲ್ಲ. ಪೋರ್ಚುಗೀಸ್ ಅಧಿಕಾರಿಗಳ ಹಣಕಾಸುಗಳ ಲೆಖ್ಖಾಚಾರವು ಕ್ರಮ ವಾಗಿದೆ. ಆದರೂ ಕೃಷ್ಣದೇವರಾಯರ ಕಾಲದಲ್ಲಿದ್ದಷ್ಟು ಸ್ನೇಹ ವಿಶ್ವಾಸಗಳು ಈಗ ನಡೆದು ಬರುತ್ತಿಲ್ಲವೆಂದು ಮುತ್ಸದ್ದಿಗಳು ಹೇಳುತ್ತಾರೆ. ದಕ್ಷಿಣದ ವಸೂಲಿಯನ್ನು ರಾಮರಾಯರ ಕಡೆಗೆ ಒಪ್ಪಿಸಿಬಿಟ್ಟರೆ, ಸರಾಗವಾಗ ಬಹುದು" ಎಂದು ತಿಳಿಸಿದನು.

ಸದಾಶಿವರಾಯನು, ಸಲಕ ತಿಮ್ಮಣ್ಣನವರೇ! ಈ ಹಣಕಾಸು ಗಳ ವಿಚಾರ ನಿಮಗೆ ಚೆನ್ನಾಗಿ ಗೊತ್ತಿದೆ. ನನ್ನ ಬುದ್ಧಿಗೆ ಅದಷ್ಟು ಮುಖ್ಯವಾದುದೆಂದು ತೋರುವುದಿಲ್ಲ ರಾಜಕೀಯ ಸ್ನೇಹ ವಿಶ್ವಾಸಗಳೇ ಮುಖ್ಯ. ಹಣಕಾಸುಗಳ ವಿಚಾರಗಳೆಲ್ಲಾ ಮಾಮೂಲಿನಂತೆ ನಡೆಯುತ್ತ ಬರಲಿ ಯಾವಾಗಲೂ ಹೋಗಿ ಬರುವಂತೆ ಮುತ್ಸದ್ದಿಗಳು ಹೋಗಿ ಬರಲಿ. ರಾಮರಾಯರಿಗೆ ನಾವು ಈ ಕೆಲಸವನ್ನು ಒಪ್ಪಿಸಲೂ ಬಾರದು. ಅವರು ಒಪ್ಪಿಕೊಳ್ಳುವುದು ಇಲ್ಲ" ಎಂದು ಹೇಳಿದನು.

ಅದಕ್ಕೆ ಸಲಕ ತಿಮ್ಮನು ಸಮ್ಮತಿಯನ್ನು ಸೂಚಿಸಿ ಹೊರಟು ಹೋದನು.

ಸದಾಶಿವರಾಯನು ರಾಣಿಯವರ ಅಂತಃಪುರಕ್ಕೆ ಪದೇ ಪದೇ ಹೋಗಿ ಬರುತ್ತಿದ್ದರು ಅಲ್ಲಿ ಕನ್ನಾಂಬಿಕೆಯನ್ನು ಅನೇಕ ಬಾರಿ ನೋಡಿ ದ್ದನು ಸದಾಶಿವರಾಯನ ಮನಸ್ಸಿನಲ್ಲಿ ಕನ್ನಾಂಬಿಕೆಯ ವಿಚಾರವಾಗಿ ಅವನರಿಯದಂತೆಯೇ ಯಾವುದೋ ಒಂದು ಅಭಿನಿವೇಶವು ಅಂಕುರಿ ಸಿದ್ದಿತು ಕನ್ನಾಂಬಿಕೆಯ ಕಥೆಗಳನ್ನು ಅಷ್ಟು ಇಷ್ಟು ಅವನು ಕೇಳಿದ್ದನು. ರಾಜದ್ರೋಹಿ ತಿಮ್ಮಣ್ಣನಾಯಕನ ಪತ್ನಿಯವಳು ಕೃಷ್ಣದೇವರಾಯರ ಅಭಿಮಾನಕ್ಕೆ ಪಾತ್ರಳಾದವಳು. ರಾಣಿ ಚಿನ್ನಾಂಬಿಕೆಯ ಪಾಲಿತಪುತ್ರಿ.

ಕನ್ನಾಂಬಿಕೆಯ ಸಂಬಂಧವಾಗಿ ಸದಾಶಿವರಾಯನಿಗೆ ಇಷ್ಟು ಅಂಶಗಳು ಖಚಿತವಾಗಿ ತಿಳಿದಿದ್ದವು. ಮಹಾರಾಣಿಯವರುಗಳು ದೇವಾಲಯಗಳಿಗೆ ಹೋಗಿರುವಾಗ ಅಕಸ್ಮಾತ್ತಾಗಿ ಕನ್ನಾಂಬಿಕೆಯನ್ನು ಸದಾಶಿವರಾಯನು ನೋಡಿದನು ಅಂತಃಪುರದಲ್ಲಿ ಅವಳು ಏಕಾಕಿನಿಯಾಗಿದ್ದಳು. ಆದರೆ, ಸದಾಶಿವರಾಯನು ಅಂತಃಪುರಕ್ಕೆ ಬರುತ್ತಲೇ ಅವಳು ದಿಟ್ಟತನದಿಂದ ಎದುರಿಗೆ ಬಂದು, ಯುವರಾಜಾ! ಬಾ ರಾಣಿಯವರು ಅಂತಃಪುರದಲ್ಲಿಲ್ಲ. ಅವರು ಈಗಲೇ ಬರಬಹುದು. ಬರುವವರೆಗೆ ಈ ಹಜಾರದಲ್ಲಿ ಕುಳಿತುಕೋ ಎಂದು ಹೇಳಿದಳು.

ಸದಾಶಿವರಾಯನಿಗೆ ಕನ್ನಾಂಬಿಕೆಯು ತನ್ನೊಡನೆ ಅಷ್ಟು ಧಾರಾಳ ವಾಗಿ ಮಾತನಾಡುವಳೆಂಬ ಭಾವನೆಯಿರಲಿಲ್ಲ ಅವನು, " ರಾಣಿಯವರಿಲ್ಲ ದಿದ್ದರೆ ಬಾಧಕವೇನು ? ರಾಣಿಯವರ ಪುತ್ರಿಯವರು ಇದ್ದಾರಲ್ಲಾ" ಎಂದು ಹೇಳಿ ಹಜಾರದಲ್ಲಿ ಬಂದು ಕುಳಿತುಕೊಂಡನು.

ಅವನು, " ಕನ್ನಾಂಬಿಕೆ ನೀನೂ ಕುಳಿತುಕೋ ಸಂಕೋಚಪಡ ಲೇಕೆ ? ನಮ್ಮಿಬ್ಬರಿಗೂ ಸೋದರ ಸೋದರಿಯರ ಸಂಬಂಧವಿದೆ. ನಾನು ರಾಣಿಯವರ ಕುಮಾರ, ನೀನು ರಾಣಿಯವರ ಪುತ್ರಿ ನಿನ್ನನ್ನು ಈ ಅಂತಃ ಪುರದಲ್ಲಿ ನೋಡಿದಂದಿನಿಂದ ಮಾತನಾಡಿಸಬೇಕೆಂದು ಅಭಿಲಾಷೆಯಿತ್ತು. ಅದಕ್ಕೆ ಇಂದು ಅವಕಾಶವಾಯಿತು " ಎಂದನು.

" ಅದೇನು ನಿನಗೆ ಅಷ್ಟೊಂದು ಆಸಕ್ತಿ. ನನ್ನೊಡನೆ ಮಾತನಾಡು ವುದು ನಿನಗೆ ಅಷ್ಟು ಕಷ್ಟವೇ ಅಥವಾ ಸಂಕೋಚವೇ ರಾಣಿಯವರು ಏನೂ ಅನ್ಯಥಾ ಭಾವಿಸುವುದಿಲ್ಲ ನನ್ನ ವಿಚಾರವನ್ನು ಅವರು ಚೆನ್ನಾಗಿ ಬಲ್ಲರು "

" ನಾನು ಬಲ್ಲೆ ಕನ್ನಾಂಬಿಕೆ ! ಈ ಅಂತಃಪುರದಲ್ಲಿ ನೀನು ಬಲು ಮುಖ್ಯವಾದವಳು ಇಷ್ಟುದಿನಗಳಾದರೂ ನಿನ್ನನ್ನು ತಿಳಿದುಕೊಳ್ಳದೆ ಇರುವೆನೇ"

" ತಿಳಿದುಕೊಂಡಿದ್ದಿ, ಆದರೇನು ನಮ್ಮಂಥವರನ್ನು ಯಾರೂ ಗಮ ನಿಸುವುದಿಲ್ಲ. ಸಮಯಬಂದರೆ ಆಗ ನಮ್ಮಂಥವರ ಕಡೆಗೆ ದೃಷ್ಟಿಯು ಬೀಳುತ್ತದೆ."

" ಹಾಗೇನೂ ಇಲ್ಲ ತಿರುಮಲಾಂಬಿಕೆಯನ್ನು ಚಿನ್ನಾಂಬೆಯನ್ನು ನಾನು ಹೇಗೆ ಭಾವಿಸಿದ್ದೇನೆಯೋ ನಿನ್ನನ್ನು ಹಾಗೆಯೇ ಭಾವಿಸಿದ್ದೇನೆ."

" ಯುವರಾಜಾ ! ಅವರು ದೊಡ್ಡವರು. ರಾಜಪುತ್ರಿಯರು ಈ ಅರಮನೆಯಲ್ಲಿ ಅವರಿಗಿರುವ ಗೌರವವು ರಾಣಿಯವರಿಗೇ ಇಲ್ಲವೆನ್ನ ಬಹುದು. ರಾಮರಾಯರು, ತಿರುಮಲರಾಯರಂಥಾ ಪತಿಗಳನ್ನು ಪಡೆದಿರುವ ಆ ಸೌಭಾಗ್ಯಶಾಲಿನಿಯರೆಲ್ಲಿ, ಅನಾಥಳಾದ ನಾನೆಲ್ಲಿ? "

" ಕನ್ನಾಂಬಿಕೆ! ಹಾಗೆಲ್ಲಾ ಮಾತನಾಡುವುದು ಉಚಿತವಲ್ಲ. ರಾಣಿಯವರ ಅಭಿಮಾನಪಾತ್ರಳು ನೀನು. ನಮಗೂ ಅದೇ ಅಭಿಮಾನವಿದೆ."

ಅಷ್ಟರಲ್ಲಿ ರಾಣಿಯರಿಬ್ಬರೂ ಅಂತಃಪುರದೊಳಗೆ ಪ್ರವೇಶಿಸುವ ಸದ್ದಾಯಿತು. ಪರಿಚಾರಿಕೆಯರು ಮುಂದೆ ಓಡುತ್ತ ಬಂದರು. ಸದಾಶಿವ ರಾಯನು " ಕನ್ನಾಂಬಿಕೆ ಅಭಿಮಾನವಿಟ್ಟು ನಮ್ಮ ಅರಮನೆಗೆ ಒಂದು ದಿನ ಬಂದು ದರ್ಶನಕೊಡು ಸಾವಕಾಶವಾಗಿ ಮಾತನಾಡೋಣ "

" ಬರುತ್ತೇನೆ ಯುವರಾಜಾ! ಸಮಯ ಬಂದರೆ, ನಾನೇ ಬರುತ್ತಿದ್ದೆ. ಈಗ ನೀನಾಗಿ ಕರೆದಿರುವೆ, ಬರುತ್ತೇನೆ ನನಗೂ ನಿನ್ನೊಡನೆ ಎಷ್ಟೋ ಮಾತನಾಡುವ ಅಭಿಲಾಷೆಯಿದೆ."

ಇಷ್ಟು ಮಾತನಾಡುವ ಸಮಯಕ್ಕೆ ಸರಿಯಾಗಿ ರಾಣಿಯರು ಹಜಾರಕ್ಕೆ ಬಂದರು ಪರಿಚಾರಿಕೆಯರು ಯುವರಾಜರು ಬಂದು ಕಾದಿದ್ದಾರೆಂದು ಅವರಿಗೆ ಅಂತಃಪುರದ್ವಾರದಲ್ಲಿಯೇ ತಿಳಿಸಿದರು. ರಾಣಿಯರು ನೇರವಾಗಿ ಯುವರಾಜನು ಕುಳಿತಿರುವ ಹಜಾರಕ್ಕೆ ಬಂದರು. ಕನ್ನಾಂಬೆಯು ಸಮೀಪದಲ್ಲಿ ನಿಂತು ಮಾತನಾಡುತ್ತಿದ್ದಳು.

ರಾಣಿ ಚಿನ್ನಾಂಬಿಕೆಯು " ಯುವರಾಜನು ಬಂದು ಬಹಳ ಹೊತ್ತಾಗಿರಬಹುದು. ಬಹಳ ಕಾಯಿಸಿದಂತಾಯಿತು " ಎಂದಳು.

ಯುವರಾಜನು, ರಾಣಿಯವರು ಹಾಗೆ ಭಾವಿಸಬೇಕಾದ್ದಿಲ್ಲ. ನಾನು ಬಂದು ಸ್ವಲ್ಪವೇ ಹೊತ್ತಾಯಿತು. ಈ ಸೋದರಿ ಕನ್ನಾಂಬೆಯು ಮಾತನಾಡಿಸುತ್ತಿದ್ದಳು.

ರಾಣಿಯು ನಗುತ್ತಾ, " ಅವಳಿದ್ದ ಮೇಲೆ ನಾವಿದ್ದಂತೆಯೇ ಎಲ್ಲರಿಗೂ ಹೇಗೆ ಹೇಗೆ ಮರ್ಯಾದೆಯಿಂದ ನಡೆದುಕೊಳ್ಳಬೇಕೆಂಬುದನ್ನು ಅವಳು ಚೆನ್ನಾಗಿ ಬಲ್ಲಳು. ಗಂಡಾಗಿ ಹುಟ್ಟಿದ್ದರೆ ಮಂತ್ರಿಯಾಗುತ್ತಿದ್ದಳು " ಎಂದಳು.

" ಹೆಣ್ಣಾಗಿ ಹುಟ್ಟಿದರೇನು ಈಗಲೂ ಕನ್ನಾಂಬೆಯು ಮಂತ್ರಿಯಾಗ ಬಲ್ಲಳು."

ಕನ್ನಾಂಬೆಯು ನಾಚಿಕೆಯಿಂದ ತಲೆತಗ್ಗಿಸಿಕೊಂಡು ದೂರ ಸರಿದು ಹೋದಳು. ರಾಣಿಯು, " ಸದಾಶಿವರಾಯ ! ನೀನು ಬಂದ ಕಾರ್ಯವೇನು ? ಅದನ್ನು ಹೇಳು " ಎಂದಳು.

" ಹೇಳುವುದೇನೂ ಹೆಚ್ಚಾಗಿಲ್ಲ. ಒಂದು ಕಡೆಯಿಂದ ರಾಜ್ಯದ ವಿಚಾರಗಳೆಲ್ಲಾ ಸರಿಹೋಗುತ್ತಿವೆ ನಿಮ್ಮ ಅಳಿಯಂದಿರಿಬ್ಬರೂ ಒಂದು ಬಾರಿ ಇಲ್ಲಿಗೆ ಬಂದು ಹೋದರೆ, ಎಲ್ಲ ವಿಚಾರಗಳೂ ಸಂಪೂರ್ಣವಾಗಿ ಸರಿಹೋಗುತ್ತದೆ. ಕೆಲವು ಜನ ದರ್ಬಾರಿಗಳ ಮನಸ್ಸಿನಲ್ಲಿ ಇಲ್ಲಿ ಅಳಿಯಂದಿರಿಗೆ ಅಸಮಾಧಾನಕರವಾದ ವಿಷಯವೇನೋ ಇದೆಯೆಂದು ಭಾವನೆಯಿದೆ. ಅವರು ಬಂದುಬಿಟ್ಟರೆ ಸರಿಹೋಗುತ್ತದೆ."

" ಅಳಿಯಂದಿರಿಗೆ ಇಲ್ಲಿ ಯಾರ ಮೇಲಾದರೂ ಅಸಮಾಧಾನವಿದೆ ಯೆಂದು ನೀನು ಕೇಳಿದ್ದೀಯೇನು ? "

" ಹಾಗಲ್ಲ! ರಾಜಕೀಯವು ಬಹು ಗಹನವಾದದ್ದು. ನನ್ನ ಮೇಲೆಯೇ ಅಸಮಾಧಾನವಿರಬಹುದು. ನಿಮ್ಮ ಮೇಲೆಯೇ ಸಮಾಧಾನ ವಿಲ್ಲದೇ ಇರಬಹುದು."

" ಹೂಂ! ಹಾಗೆಯೇ ಮುಂದುವರಿಸು. ತಿರುಮಲಾಂಬೆ, ಚಿನ್ನಮಾಂಬೆಯರ ಮೇಲೆಯೇ ಅಳಿಯಂದಿರಿಗೆ ಅಸಮಾಧಾನವಿರಬಹುದು." ಎಲ್ಲರೂ ಘೊಳ್ಳನೆ ನಕ್ಕರು.

" ಸದಾಶಿವರಾಯ ! ನೀನು ಹೇಳಿದ್ದು ಒಳ್ಳೆಯದಾಯಿತು. ನಾನು

ತಿರುಮಲಾಂಬೆಯ ಕೈಯಲ್ಲಿಯೇ ರಾಮರಾಯರಿಗೆ ಪತ್ರ ಬರೆಸುತ್ತೇನೆ. ಅವರು ಬಂದೇ ಬರುತ್ತಾರೆ."

"ತಿರುಮಲಾಂಬೆಯು ಪತ್ರ ಬರೆದರೆ ನಾನೂ ಅವರಿಗೊಂದು ಬಿನ್ನಹ ಪತ್ರವನ್ನು ಬರೆದುಕೊಳ್ಳುತ್ತೇನೆ. ಆಗ ಸರಿಹೋಗುವುದು."

ರಾಣಿಯು ನಸುನಗುತ್ತಾ "ಅದೂ ಸರಿಯೆ! ಎರಡು ಲಗಾಮು ಗಳನ್ನು ಹಾಕಿ ಎಳೆದಂತಾಗುವುದು" ಎಂದಳು.

ಸದಾಶಿವರಾಯನು ರಾಣಿಯವರಿಗೆ ವಂದಿಸಿ ಕನ್ನಾಂಬೆ ಕಡೆಗೆ ಕಣ್ಣು ತಿರುಗಿಸಿ "ಸೋದರಿ ಕನ್ನಾಂಬೆ! ಹೋಗಿಬರುತ್ತೇನೆ" ಎಂದು ಹೇಳಿದನು.

ಕನ್ನಾಂಬೆಯು ನಗುಮೊಗದಿಂದ ಬೀಳ್ಕೊಟ್ಟಳು.

# ೧೮

ವಿಜಯನಗರದ ರಾಜಮಹಲುಗಳ ಮಧ್ಯದಲ್ಲಿ ಚಿಕ್ಕದಾದರೂ ಐಶ್ವರ್ಯ ಪರಿಶೋಭಿತವಾದ ಅರಮನೆ ಸದಾಶಿವರಾಯನದು. ಆ ಅರಮನೆಯ ಮಹಡಿಯ ಮೇಲೆ ಚಂದ್ರಶಾಲೆಯಲ್ಲಿ ಪಳಪಳನೆ ಹೊಳೆಯುತ್ತಿದ್ದ ಶ್ವೇತಶಿಲಾಫಲಕದ ಮೇಲೆ ಸದಾಶಿವರಾಯನೂ ಕನ್ನಾಂಬೆಯೂ ಕುಳಿತು ಮಾತನಾಡುತ್ತಿದ್ದರು. ಹಾಲುಚೆಲ್ಲಿದಂತಹ ಬೆಳದಿಂಗಳಿನಲ್ಲಿ ಪುಷ್ಪಸೌರಭದಿಂದ ಕೂಡಿದ ತಂಗಾಳಿಯು ಮೆಲ್ಲಮೆಲ್ಲನೆ ಬೀಸುತ್ತಿದ್ದಿತು ಕನ್ನಾಂಬಿಕೆ ಶ್ವೇತವಸನಧಾರಿಣಿ, ಮುಕ್ತ ಕೇಶಿ, ನಿರಾಭರಣಸುಂದರಿ. ಸದಾಶಿವರಾಯನು ಬಿಳಿಯ ಅಂಗರೇಕು ಜರಿಯ ಉಷ್ಣೀಷಗಳನ್ನು ಧರಿಸಿಕೊಂಡು ಆ ಕನ್ನಾಂಬೆಗೆ ಅನತಿ ದೂರದಲ್ಲಿ ಕುಳಿತಿದ್ದನು.

ಯುವರಾಜನು, ಕನ್ನಾಂಬೆ! ನೀನು ಅರಮನೆಯಲ್ಲಿರುವಿಯೆಂದು ಮೊದಲೇ ಕೇಳಿದ್ದೆ. ಕೃಷ್ಣದೇವರಾಯರೇ ನಿನ್ನ ಪತಿಯ ಚಿತೆಯ ಸಮೀಪದಿಂದ ನಿನ್ನನ್ನು ಕರೆದೊಯ್ದು ಅರಮನೆಯಲ್ಲಿಟ್ಟರು ಎಂದು ಕೇಳಿದ್ದೆ. ನಿನ್ನ ಪೂರ್ವವೃತ್ತಾಂತಗಳು ಸಿತಾಸಿತವಾಗಿ ನನ್ನ ಕಿವಿಗೆ ಬಿದ್ದಿವೆ ಅಂದಿನಿಂದಲೂ ನಿನ್ನನ್ನು ನೋಡುವ ಆಕಾಂಕ್ಷೆಯು ನನಗಿತ್ತು ರಾಣಿಯ ಸಮೀಪದಲ್ಲಿ ನಿನ್ನನ್ನು ಮೊದಲು ಕಂಡಾಗಲೇ ಇವಳೇ ಆ ಕನ್ನಾಂಬೆ ಇರಬೇಕು ಎಂದುಕೊಂಡೆ. ಮಹಾರಾಣಿ ಚಿನ್ನಾಂಬೆಯವರನ್ನೇ ಆ ಕನ್ನಾಂಬೆಯು ಇವಳೇ ಅಲ್ಲವೇ ಎಂದು ಕೇಳಿಬಿಡಬೇಕೆಂದು ಎಷ್ಟೋ ಬಾರಿ ಬಾಯಿಗೆ ಬಂದಮಾತು ಹೊರಗೆ ಬಾರದೇ ಹೋಯಿತು. ಏಕೋ ಅದನ್ನು ನಾನರಿಯೆ. ನಮಗೆ ಮಾತನಾಡುವ ಅವಕಾಶವು ಸಿಕ್ಕಿದಂದೇ ನೀನು ಹತ್ತಾರುವರ್ಷಗಳ ಪರಿಚಿತಳಂತೆ ಜೊತೆಯಲ್ಲಿ ಬೆಳೆದ ಸೋದರಿಯಂತೆ ಮಾತನಾಡಿಸಿದೆ. ಅಂದೇ ನನ್ನ ಭಾವನೆಗಳೆಲ್ಲಾ ಬದಲಾಗಿ ಹೋದವು.

ನೀನು ಕಠಿಣಹೃದಯಳೆಂದು ನನ್ನ ಮನಸ್ಸಿನಲ್ಲಿ ನಿನ್ನನ್ನು ಚಿತ್ರಿಸಿಕೊಂಡಿದ್ದೆ ನಿನ್ನ ಮಾತುಗಳು ಅದರ ವಿಶ್ವಾಸಗಳು ಅವುಗಳನ್ನು ಕಂಡು ನೀನೆಷ್ಟು ಕೋಮಲ ಹೃದಯಳು ಎಂದುಕೊಂಡೆ. ಕೃಷ್ಣದೇವರಾಯರ ಆದರ ವಿಶ್ವಾಸಗಳಿಗೆ ಪಾತ್ರಳಾದ ಪಾಲಿತ ಪುತ್ರಿಯು ಮತ್ತೆ ಹೇಗಿದ್ದಾಳು? ಎಂದನು.

"ಯುವರಾಜಾ! ನನ್ನ ವಿಷಯವಾಗಿಯೇ ಮಾತನಾಡಲು ಬರ ಹೇಳಿದೆಯಾ? ಅಥವಾ ಮತ್ತೇನಾದರೂ ರಾಜಕಾರ್ಯಗಳುಂಟೋ?"

"ಸೋದರಿ ರಾಜಕಾರ್ಯಗಳು ಬೆಟ್ಟದಷ್ಟಿವೆ. ಮೊದಲು ಸೋದರಿಯ ಸ್ನೇಹವನ್ನು ಸಂಪಾದಿಸುವುದು. ಹೇಗೆ ರಾಣಿಯವರ ಅನುಗ್ರಹಕ್ಕೆ ನಾನು ಪಾತ್ರನೆಂದುಕೊಂಡಿದ್ದೇನೋ ಹಾಗೆ ಈ ಸೋದರಿಯ ಅನುಗ್ರಹವನ್ನು ಸಂಪಾದಿಸುವುದು ಇದಕ್ಕಿಂತಲೂ ದೊಡ್ಡ ಕಾರ್ಯ ಯಾವುದಿದೆ. ನಾವಿಬ್ಬರೂ ಸುಖದುಃಖಗಳಲ್ಲಿ ಸಮಭಾಗಿಗಳಾದರಲ್ಲವೇ ಸೋದರ ಸೋದರಿಯರೆನ್ನಿಸಿ ಕೊಳ್ಳುವುದು. ನಿನ್ನಿಂದಾಗಬೇಕಾದ ರಾಜಕಾರ್ಯಗಳು ಬೇಕಾದಷ್ಟಿವೆ. ಮೊದಲು ನಿನ್ನ ವೃತ್ತಾಂತವನ್ನು ನಿನ್ನಿಂದಲೇ ಕೇಳಿ ತಿಳಿದುಕೊಳ್ಳುವ ಕುತೂಹಲವಿದೆ"

"ಯುವರಾಜಾ! ಅದನ್ನೇಕೆ ಕೇಳುತ್ತಿ. ನನ್ನ ಕಥೆಯೆಲ್ಲಾ ದುಃಖ ಮಯವಾದ ಕಥೆ ಸುಖವೆಂಬುದನ್ನೇ ಅರಿಯದ ಕಥೆ. ಕಲ್ಲುಬೊಂಬೆಯು ನೀರಾಗಿ ಕರಗಿಹೋಗುವ ಕಥೆ. ಅದರಿಂದ ಯಾರಿಗೇನು ಲಾಭ."

"ಕನ್ನಾಂಬಾ ಹಾಗಲ್ಲ. ಅದರಲ್ಲಿ ಕೆಲವು ಮುಖ್ಯವಿಚಾರಗಳಿವೆ. ನಮ್ಮರಮನೆಯ ಇಂದಿನ ಪರಿಸ್ಥಿತಿಯ ಮೇಲೆ ಅಂದಿನ ಪ್ರಭಾವವು ಬೀಳುವ ಸಂಭವವಿದೆ."

"ಯುವರಾಜಾ! ನನ್ನ ಕಥೆಯು ಆರಂಭವಾಗುವಾಗಲೇ ಅರಮನೆ ಯಲ್ಲಿ ಕತ್ತಲು ಕವಿಯುತ್ತ ಬಂದಿತು. ಎಂದಾದರೊಂದು ದಿವಸ ಪ್ರಕಾಶ ಮಾನವಾಗುತ್ತದೆ ಎಂಬಾಶೆಯನ್ನಿಟ್ಟುಕೊಂಡು ನಾನು ಬದುಕಿದ್ದೇನೆ. ಈ ವಿಜಯನಗರದ ಅರಮನೆಯು ಪ್ರಕಾಶಮಾನವಾಗಿ ರಾಜ್ಯದಲ್ಲೆಲ್ಲಾ ಬೆಳಕು ಪಸರಿಸುತ್ತದೆಂಬ ಆಶೆ ನನಗಿನ್ನು ಇದೆ. ಆ ಮಹತ್ಕಾರ್ಯಕ್ಕೆ ಯಾರು ಯಾರು ಟೊಂಕಕಟ್ಟಿ ನಿಲ್ಲುವರೋ ಯಾರು ಯಾರು ಬಲಿದಾನ

ಮಾಡಲು ಸಿದ್ಧರಾಗಿರುವರೋ ಅವರೆಲ್ಲರೂ ನನ್ನವರು. ತಂದೆತಾಯಿ ಸೋದರಸೋದರಿ ಬಂಧುಬಾಂಧವರು ಅವರೇ ಎಂಬ ದೃಢಭಾವನೆಯು ನನ್ನಲ್ಲಿದೆ."

"ಸೋದರಿ ! ನಿನ್ನ ಮುಖದಲ್ಲಿ ಬೆಳಗುವ ತೇಜಸ್ಸೇ ನೀನು ಅಂತಹ ಶಕ್ತಿಮಯಿಯೆಂಬುದನ್ನು ಹೇಳುತ್ತದೆ. ನೀನು ಆ ತಿಮ್ಮಣ್ಣದಂಡನಾಯಕ ನನ್ನು ಮದುವೆಯಾದುದು ಹೇಗೆ ? "

"ಮೊದಲು ಕೃಷ್ಣದೇವರಾಯರು ನಮ್ಮಿಬ್ಬರಿಗೂ ವಿವಾಹಮಾಡಿಸ ಬೇಕೆಂದು ಸಂಕಲ್ಪಿಸಿದ್ದರು. ಈ ಅರಮನೆಯಲ್ಲೆಲ್ಲಾ ನಮ್ಮ ವಿವಾಹದ ಮಾತು ಪ್ರಸಿದ್ಧವಾಗಿತ್ತು. ಮಹಾರಾಜರ ಮಗ ಬಾಲಕನಾದ ತಿರುಮಲರಾ ಯನ ಕೊಲೆಯು ಎಂದು ನಡೆಯಿತೋ ಆ ಕೊಲೆಯ ಪೂರ್ವದಿನ ನಮ್ಮಿಬ್ಬರ ವಿವಾಹವಾಯಿತು. ಅದು ಗಾಂಧರ್ವವಿವಾಹ. ಆದರೆ ದೇವರ ಮುಂದೆ ನಡೆದ ವಿವಾಹ. ವಿರೂಪಾಕ್ಷನ ಅನುಗ್ರಹದಿಂದ ವಿದ್ಯಾರಣ್ಯ ಮಹಾಮುನಿ ಗಳ ತಪಸ್ಸಿನ ಸ್ಥಳದಲ್ಲಿ ನಾವಿಬ್ಬರೂ ವಿವಾಹ ಪ್ರತಿಜ್ಞೆ ಮಾಡಿದೆವು. ಮರುದಿನವೇ ತಿರುಮಲರಾಯನ ಕೊಲೆಯಾಯಿತು ತಿಮ್ಮಣ್ಣದಂಡ ನಾಯಕನನ್ನು ಸೆರೆಯಲ್ಲಿಟ್ಟರು. ಅವನು ಅಲ್ಲಿಯೇ ಇದ್ದಿದ್ದರೆ ಎಷ್ಟೋ ಚೆನ್ನಾಗಿತ್ತು. ಎಂದಾದರೂ ಬಿಡುಗಡೆಯಾಗುತ್ತಿತ್ತು ಈ ರಾಜ್ಯದಲ್ಲಿ ಮಹಾಪರಾಕ್ರಮಶಾಲಿಯಾದ ತಿಮ್ಮಣ್ಣನು ಒಬ್ಬ ಪ್ರಸಿದ್ಧ ಸೇನಾಪತಿ ಯಾಗುತ್ತಿದ್ದನು. ನಾನೇ ಅವನನ್ನು ಕಾರಾಗೃಹದಿಂದ ಬಿಡಿಸಿಬಿಟ್ಟೆ."

"ಅಂಥಾ ಮಹಾಪರಾಧ ಮಾಡಿದವನನ್ನು ನೀನು ಹೇಗೆ ಬಿಡಿಸಿದೆ ? "

"ಬಹು ಸುಲಭವಾಗಿ ಮಹಾರಾಜಾ ಕೃಷ್ಣದೇವರಾಯರ ಕೃತಕ ಪತ್ರವನ್ನು ನಿರ್ಮಾಣಮಾಡಿಸಿ ನನ್ನ ಕೈಯಿಂದಲೇ ಕೃಷ್ಣದೇವರಾಯ ಎಂದು ರುಜು ಮಾಡಿದೆ. ಆ ಪತ್ರದಿಂದ ಅವನ ಬಿಡುಗಡೆಯಾಯಿತು."

"ಮುಂದೆ ಹೇಳು ! "

"ಮುಂದಿನ ಕಥೆ ಮತ್ತೂ ಕಠೋರವಾದುದು. ತಿಮ್ಮಣ್ಣದಂಡ ನಾಯಕನು ನನ್ನನ್ನು ಕರೆದುಕೊಂಡು ಕಮಲಾಪುರಕ್ಕೆ ಓಡಿಹೋದ. ಅಲ್ಲಿ ಬಲವಾದ ಸೈನ್ಯವನ್ನು ಕಟ್ಟಿ ಒಂದು ರಾಜ್ಯವನ್ನೇ ನಿರ್ಮಾಣಮಾಡಿಬಿಟ್ಟ.

ಕೃಷ್ಣದೇವರಾಯರು ಕೋಪದಿಂದ ಅವನನ್ನು ಹಿಡಿತರಿಸಿ ಕಣ್ಣು ಕೀಳಿಸಿ ಕಾರಾಗೃಹದಲ್ಲಿಡಿಸಿದರು. ಯಾರು ನನ್ನ ಭಾಗ್ಯವಿಧಾತರೋ ಅವರೇ ನನ್ನ ಜೀವನದ ಆಧಾರವೃಕ್ಷವನ್ನು ಕಡಿದು ಬೆಂಕಿಯಲ್ಲಿ ಉರಿಸಿಬಿಟ್ಟರು. ಆ ಚಿತೆಯ ಪಾರ್ಶ್ವದಲ್ಲಿದ್ದ ನಿರ್ಭಾಗ್ಯಳಾದ ನನ್ನನ್ನು ಅರಮನೆಗೆ ಕರೆತಂದರು. ಅಂದಿನಿಂದಲೂ ಈ ಅರಮನೆಗೆ ಕತ್ತಲೆಯು ಮುಸುಕಿದಂತಾಗಿದೆ. ನಮ್ಮ ಪಾಪಗಳು ರಾಜಕುಲವನ್ನೇ ದಹಿಸುತ್ತಿದೆ ಮತ್ತೆ ಅಚ್ಯುತರಾಯನು ಅದೇ ತಪ್ಪನ್ನು ಮಾಡುತ್ತಿದ್ದ ಈ ರಾಜಕುಲದಲ್ಲಿ ಹುಟ್ಟಿರುವ ನೀನು ಬಂದು ಅದನ್ನು ತಪ್ಪಿಸಿದೆ. ಇಲ್ಲದಿದ್ದರೆ, ಈ ರಾಜಕುಲವು ಸಮೂಲ ನಾಶವಾಗಿ ಹೋಗುತ್ತಿತ್ತು. ಈ ಪವಿತ್ರ ಸಿಂಹಾಸನವು ಅಧಮರಾದ ಸಲಕ ಸಹೋದರರಿಗೋ ಹುಚ್ಚನಾದ ತಿರುಮಲನಿಗೋ ಇಲ್ಲವೇ ಆ ದುರಾತ್ಮನಾದ ಇಬ್ರಾಹಿಂಷಹನಿಗೋ ಸೇರಿಹೋಗುತ್ತಿತ್ತು. ಸದ್ಯಕ್ಕೆ ಅದನ್ನು ತಪ್ಪಿಸಿದವನು ನೀನು. ಅದರಿಂದಲೇ ನನಗೆ ನಿನ್ನ ಮೇಲೆ ವಿಶ್ವಾಸಗೌರವಗಳು ಆದರೆ ಎಲ್ಲವೂ ಪೂರೈಸಿಹೋಯಿತೆಂದುಕೊಳ್ಳಬೇಡ. ಇನ್ನು ಎಷ್ಟೋ ಗಂಡಾಂತರಗಳಿವೆ. ಅದನ್ನೆಲ್ಲಾ ದಾಟಿದ ಮೇಲೆ ನೀನು ಈ ಕುಲದಲ್ಲಿ ಹುಟ್ಟಿದ್ದು ಸಾರ್ಥಕವಾಯಿತೆಂದು ನಾನು ಹೇಳುತ್ತೇನೆ."

"ಸೋದರಿ! ನಿನ್ನ ಮಾತುಗಳೆಲ್ಲವೂ ಸತ್ಯವಾದವುಗಳು. ಈ ರಾಜ್ಯದಲ್ಲಿ ಇನ್ನು ಗಂಡಾಂತರಗಳಿವೆ ಎಂಬುದನ್ನು ನಾನು ಚೆನ್ನಾಗಿ ಅರಿತುಕೊಂಡಿದ್ದೇನೆ. ಅವುಗಳನ್ನು ದಾಟಲು ನನಗೆ ಸಹಾಯಕರಿಲ್ಲ ನಿಸ್ಸಹಾಯಕನಾಗಿದ್ದೇನೆ. ನೀನು ಕಡೆಯವರೆಗೂ ಸಹಾಯಮಾಡುತ್ತೇನೆಂದು ವಾಗ್ದಾನಕೊಡುವೆಯಾ? ಈ ಪ್ರಾರ್ಥನೆಯನ್ನು ಮಾಡುವುದಕ್ಕಾಗಿಯೇ ನಿನ್ನನ್ನು ನನ್ನ ಅರಮನೆಗೆ ಬರಬೇಕೆಂದು ಪ್ರಾರ್ಥನೆ ಮಾಡಿದೆ. ಈಗ ತಿಳಿಯಿತೇ ವಚನವನ್ನು ಕೊಡು" ಎಂದು ಕೈನೀಡಿದನು.

ಕನ್ನಾಂಬೆಯು ಎದ್ದುನಿಂತು, ಆಕಾಶದಕಡೆ ತಲೆಯೆತ್ತಿನೋಡಿದಳು. ಸುತ್ತಲೂ ಒಂದು ಬಾರಿ ವೀಕ್ಷಿಸಿದಳು. ಯುವರಾಜಾ! ಈ ಸಾಮ್ರಾಜ್ಯದ ಸಾಮ್ರಾಟನಾಗಬೇಕೆಂದು ಈ ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರ ಮಾಡಬೇಕೆಂದು ಆಶೆಪಡುವುದಿಲ್ಲ. ಆಮರಣಾಂತ ಸೇವೆ ಮಾಡುತ್ತೇನೆ

ಎಂದು ನೀನು ಪ್ರತಿಜ್ಞೆಮಾಡುವುದಾದರೆ ನಾನು ನಿನ್ನ ನೆರಳಿನಂತೆ ಯಾವಾಗಲೂ ಸಹಾಯ ಮಾಡಬಲ್ಲೆ. ಮೊದಲು ತ್ಯಾಗಕ್ಕೆ ನೀನು ಸಿದ್ಧನಾಗಬೇಕು" ಎಂದಳು.

ಇಲ್ಲ ಸೋದರಿ ನಾನು ಸಾಮ್ರಾಟನಾಗಬೇಕೆಂದು ಎಂದೂ ಆಶೆ ಪಡಲಿಲ್ಲ ಆ ಕುಮಾರ ವೆಂಕಟಾದ್ರಿಯ ಪಟ್ಟಾಭಿಷೇಕವನ್ನು ನಿಷೇದಿಸಿದು ದರಿಂದ ನೀನು ನನ್ನನ್ನು ಸಾಮ್ರಾಜ್ಯಾಭಿಲಾಷಿ ಎಂದುಕೊಂಡಿರಬಹುದು."

"ಹಾಗೇನೂ ಇಲ್ಲ ಹರಿಹರರಾಯರ ರತ್ನಕಿರೀಟವನ್ನು ಸಿಂಹಾಸನದ ಮೇಲಿಟ್ಟು ಕೃಷ್ಣದೇವರಾಯರ ಖಡ್ಗವನ್ನು ಮುಂದಿಟ್ಟು ಈ ಸಾಮ್ರಾಜ್ಯವನ್ನು ಯಾರಾದರೂ ನಡೆಸಬಹುದು. ನ್ಯಾಯಧರ್ಮಗಳನ್ನು ಬೆಳಗಿಸಬಹುದು ಸಿಂಹಾಸನಕ್ಕಾಗಿ ಹೋರಾಡುವವರು ಕುಲಘ್ನರು ಪಾತಕಿಗಳು ಅವರಿಂದಲೇ ಈ ಸಿಂಹಾಸನವು ಮಣ್ಣುಪಾಲಾಗುತ್ತದೆ."

"ಸೋದರಿ ನಾನು ಪ್ರತಿಜ್ಞೆಮಾಡುತ್ತೇನೆ. ನಾನು ಸಾಯುವತನಕ ಸಿಂಹಾಸನದ ಸೇವೆಗಾಗಿ ಬದ್ಧಕಂಕಣನಾಗಿರುತ್ತೇನೆ. ನಾನು ರಾಜ್ಯದ ಸೇವಕ. ರಾಜನಲ್ಲ" ಎಂದು ಹೇಳಿ ಕನ್ನಾಂಬೆಯ ಕೈಮೇಲೆ ಕೈಯಿಟ್ಟು ಪ್ರಮಾಣಮಾಡಿದನು.

ಕನ್ನಾಂಬೆಯು ಯುವರಾಜನ ಅಪ್ಪಣೆಯನ್ನು ಪಡೆದು ಅರಮನೆಯ ಅಂತಃಪುರಕ್ಕೆ ತೆರಳಿದಳು.

ಸದಾಶಿವರಾಯನು ಚಂದ್ರಗಿರಿಗೆ ಹೋಗಿ ರಾಮರಾಯರ ಭೇಟಿ ಮಾಡಿ ಅವರನ್ನು ರಾಜಧಾನಿಗೆ ಕರೆತರಬೇಕೆಂದು ಸಂಕಲ್ಪಮಾಡಿದನು. ಮಹಾರಾಜ ಅಚ್ಯುತರಾಯರೊಡನೆಯೂ ಮಹಾರಾಣಿಯವರೊಡನೆಯೂ ತನ್ನ ಅಭಿಲಾಷೆಯನ್ನು ತಿಳಿಸಿ ಅವರನ್ನೊಪ್ಪಿಸಿದನು. ತಿರುಮಲಾಂಬೆ ಚಿನ್ನಾಂಬೆಯರು ಸದಾಶಿವರಾಯರೊಡನೆಯೇ ಪತಿಗೃಹಗಳಿಗೆ ಹಿಂತಿರುಗಲು ಸಿದ್ಧರಾದರು. ಸದಾಶಿವರಾಯನು ಕನ್ನಾಂಬೆಯನ್ನು ಕಂಡು ರಾಮರಾಯನನ್ನು ಕರೆತರುತ್ತೇನೆ. ಅವರಿಲ್ಲದಿದ್ದರೆ, ರಾಜ್ಯಸೂತ್ರಗಳು ಸರಿಹೋಗುವುದಿಲ್ಲ. ನೀನು ಜಾಗರೂಕಳಾಗಿರು ಎಂದು ಹೇಳಿ ಅವಳ ಅಪ್ಪಣೆಯನ್ನು ಪಡೆದು ಚಂದ್ರಗಿರಿಗೆ ಹೊರಟನು.

ಸದಾಶಿವರಾಯನು ಸೋದರಿಯರೊಡನೆ, ಚಂದ್ರಗಿರಿಗೆ ಬರುತ್ತಲೇ

ರಾಮುರಾಯನು ಆದರಪೂರ್ವಕವಾಗಿ ಅವನನ್ನು ಕಂಡು " ಸದಾಶಿವರಾಯ ! ನೀನು ಇಷ್ಟು ಬುದ್ಧಿವಂತನೆಂದು ನಾನು ಭಾವಿಸಿರಲಿಲ್ಲ. ನೋಡು ನಿನ್ನ ಪ್ರಭಾವದಿಂದ ರಾಜ್ಯದ ಪರಿಸ್ಥಿತಿಯೇ ಬದಲಾಯಿಸಿಹೋಗಿದೆ. ಇದರಿಂದ ನನಗೆಷ್ಟೋ ಸಂತೋಷವಾಗಿದೆ ಎಂದು ಹೇಳಿದನು.

" ಪರಿಸ್ಥಿತಿಯು ಬದಲಾವಣೆಯಾಗಿಲ್ಲ. ಎಲ್ಲವೂ ಇದ್ದಹಾಗೆಯೇ ಇದೆ. ನೀನು ರಾಜಧಾನಿಗೆ ಬಂದು ನಿಂತಲ್ಲದೇ ಯಾವ ಕಾರ್ಯಗಳನ್ನು ಕೈಗೊಳ್ಳುವುದಕ್ಕೂ ಧೈರ್ಯಬರುವುದಿಲ್ಲ. ನಾನು ನಿಮ್ಮನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದಕ್ಕಾಗಿಯೇ ಬಂದುಬಿಟ್ಟಿದ್ದೇನೆ. ನನ್ನ ಸೋದರಿ ತಿರುಮಲಾಂಬೆಯವರು ನಿಮಗೆ ಸಿಪಾರ್ಸುಮಾಡುವುದಾಗಿ ಮಾತುಕೊಟ್ಟು ಇಲ್ಲಿಗೆ ಕರೆತಂದಿದ್ದಾಳೆ.

" ಆಗಲಿ ! ನೀನು ನಾಲ್ಕುದಿನಗಳು ನಮ್ಮ ಅರಮನೆಯಲ್ಲಿರು ಎಲ್ಲ ವಿಷಯಗಳನ್ನು ಮಾತನಾಡಿ ನಿರ್ಧಾರ ಮಾಡೋಣ" ಎಂದು ಹೇಳಿ ಸದಾಶಿವರಾಯನನ್ನು ಆದರಿಸಿ ಚಂದ್ರಗಿರಿಯಲ್ಲಿ ಇಟ್ಟುಕೊಂಡನು.

ರಾಜ್ಯದ ಕಾರುಬಾರುಗಳನ್ನೆಲ್ಲಾ ಅವರು ಸಾವಕಾಶವಾಗಿ ಮಾತನಾಡಿದರು. ಸದಾಶಿವರಾಯನು —

" ರಾಮುರಾಯರವರೇ ಮುಖ್ಯವಾಗಿ ಆ ಸಲಕ ಸಹೋದರರ ನಿವೃತ್ತಿಯಾದಲ್ಲದೇ ಸಾಮ್ರಾಜ್ಯಕ್ಕೆ ಕ್ಷೇಮವಾಗುವುದಿಲ್ಲ ಅವರು ಬಲಾಢ್ಯರಾಗಿ ಬೇರೂರಿಬಿಟ್ಟಿದ್ದಾರೆ ಅವರನ್ನು ಓಡಿಸುವುದು ಯಾರಿಂದಲೂ ಸಾಧ್ಯವಿಲ್ಲ ಹೊರಗೆ ಹೋದರೂ ಅವರು ಮಹತ್ತರವಾದ ದಂಗೆಯನ್ನೆಬ್ಬಿಸಿ ಬಿಡುತ್ತಾರೆ. ಈ ರಾಜ್ಯಕ್ಕೆ ರಾಹುಕೇತುಗಳು ಬಂದು ಸೇರಿದಂತಾಗಿದೆ. ಆ ಸಲಕ ಸಹೋದರರ ಸಂಬಂಧ ವರದಾಂಬಿಕಾದೇವಿಯವರು ನಿಜವಾಗಿಯೂ ಅವರ ಜೊತೆಯಲ್ಲಿ ಹುಟ್ಟಬಾರದಾಗಿತ್ತು. ಅವರು ದೇವತೆಯಂತಹ ಪುಣ್ಯವತಿ ಸರ್ವದಾ ಸತ್ಕಾರ್ಯಗಳಲ್ಲಿಯೇ ಕಾಲ ಕಳೆಯುತ್ತಾರೆ ವೆಂಕಟಾದ್ರಿಯು ಅವರ ಪುಣ್ಯಕ್ಕೆ ತಕ್ಕ ಮಗನೆಂದೇ ಹೇಳಬೇಕು. ಅವನು ವಿದ್ಯಾವಂತನಾಗಿದ್ದಾನೆ. ರೂಪಲಾವಣ್ಯಗಳನ್ನು ನೋಡಿದರೆ ಚಕ್ರವರ್ತಿಯಾಗುವುದಕ್ಕೆ ಹುಟ್ಟಿದವನೆಂದು ಕಾಣುತ್ತದೆ. ಆದರೆ ಪರಾಕ್ರಮಿಯಲ್ಲ ಶೂರನೂ ಅಲ್ಲ ಅಚ್ಯುತರಾಯನು ಯಾವ ಕಾರ್ಯಗಳಲ್ಲಿಯೂ ಪ್ರವೇಶ

ಮಾಡದಿದ್ದರೂ ಮಹಾರಾಜರ ಬೆಂಬಲವು ಆ ಸಲಕ ಸಹೋದರರಿಗೆ ಸಂಪೂರ್ಣವಾಗಿದೆ. ಯಾವುದಾದರೊಂದು ಕಾರಣದಿಂದ ದರಬಾರಿನ ಉನ್ನತಾಧಿಕಾರಿಗಳೆಲ್ಲರೂ ಅವರನ್ನು ಆಶ್ರಯಿಸಬೇಕಾಗಿದೆ. ಹೆಚ್ಚೇಕೆ ನಿಮ್ಮ ನಿಷ್ಠಾವಂತ ಸೇವಕ ಪ್ರೀತಿಪಾತ್ರ ನಂಬಿಕೆಯ ಮನುಷ್ಯ ಆ ಸಲಕ ತಿಮ್ಮಣ್ಣನೂ ಕೂಡಾ ಅವರನ್ನೇ ಸೇರಿಕೊಂಡು ಹೋಗಿದ್ದಾನೆ. ಒಟ್ಟಿನಲ್ಲಿ ಆ ಸಲಕರೆಲ್ಲಾ ಒಂದೇ ಮಂಡಲೇಶ್ವರರಲ್ಲಿ ಅನೇಕರು ಅವರ ಆಶ್ರಯವನ್ನು ಪಡೆಯಲು ಹಾತೊರೆಯುತ್ತಾರೆ. ನಾನು ಇನ್ನೂ ಚಿಕ್ಕಪ್ರಾಯದವನು ಹೊಸದಾಗಿ ಅಧಿಕಾರಕ್ಕೆ ಬಂದಿರುವವನು. ನಾನು ಹೇಗೆತಾನೇ ಅವರನ್ನು ನಿಗ್ರಹಮಾಡಲಾದೀತು ? "

" ಸಲಕ ಸಹೋದರರಿಬ್ಬರೂ ದುಷ್ಟರೆಂಬುದರಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಸಲಕ ತಿಮ್ಮಣ್ಣನು ಕಾರ್ಯವಾಸಿ ಮಹಾತ್ವಾಕಾಂಕ್ಷೆ ಬಂದಿರಬಹುದು. ಎತ್ತಕಡೆ ಸದ್ಯಃ ಫಲವಾಗುತ್ತದೋ ಅವನು ಅತ್ತಕಡೆ ಇರುತ್ತಾನೆ. ನಾಳೆ ನಿನ್ನ ಅಚ್ಚಿನ್ನಭಕ್ತನಾದರೂ ಆಗಬಹುದು. ಅವನು ಬಲುದೊಡ್ಡಮನುಷ್ಯ ನೆಂದು ನಾನೆಂದೂ ಭಾವಿಸಿರಲಿಲ್ಲ. ಕಾರ್ಯದಕ್ಷನೆಂದು ನಾನು ಅವನ ಮೇಲೆ ಪ್ರೀತಿಮಾಡುತ್ತಿದ್ದೆ ಅಷ್ಟೆ. ಸಲಕ ಸಹೋದರರನ್ನು ಮುರಿಯುವುದುಹೇಗೆ ? "

" ರಾಮರಾಯರೇ ! ನನಗೆ ಅದು ಬಲು ಸುಲಭವಾದ ಕಾರ್ಯವೆಂದು ತೋರುತ್ತದೆ. ನೀವೂ ನಿಮ್ಮ ಸಹೋದರರೂ ರಾಜಧಾನಿಗೆ ಬಂದು ಅಧಿಕಾರ ಸ್ವೀಕಾರಮಾಡಬೇಕು. ಮಹಾರಾಜ ಅಚ್ಯುತರಾಯರು ನಿಜ ವಾಗಿಯೂ ರಾಜಕಾರ್ಯಗಳಿಂದ ದೂರವಾಗಿಯೇ ಇದ್ದಾರೆ. ಈ ಸಲಕ ಸಹೋದರರು ಅಪಾರ ಸಂಪತ್ತನ್ನು ಗಳಿಸಿಟ್ಟುಕೊಂಡಿದ್ದಾರೆ. ಇಟ್ಟು ಕೊಳ್ಳಲಿ. ಅವರನ್ನು ಅಧಿಕಾರದಿಂದ ನಿವೃತ್ತಿಗೊಳಿಸಿ ಬಹುಮಾನದಿಂದ ರಾಜಧಾನಿಯಲ್ಲಿಯೇ ಇರುವಂತೆ ಮಾಡಬೇಕು. ಹಾಗೆ ಮಾಡುವಂಥಾ ಸಾಮರ್ಥ್ಯವು ನಿಮಗೊಬ್ಬರಿಗೆ ಮಾತ್ರವಿದೆ. ಅದರಿಂದ ಲೋಕಾಪವಾದವೂ ಬರುವುದಿಲ್ಲ. ರಾಜ್ಯಾಧಿಕಾರದಿಂದ ಅವರನ್ನು ದೂರವಿಟ್ಟರೆ, ಹಲ್ಲುಕಿತ್ತ ಸರ್ಪದಂತಾಗುತ್ತಾರೆ. ಅದರಿಂದ ರಾಜ್ಯಕ್ಕೆ ಕ್ಷೇಮವಾಗುತ್ತದೆ."

" ಸದಾಶಿವರಾಯ ! ನಿನ್ನ ಆಲೋಚನೆಗಳೆಲ್ಲವೂ ಸರಿಯಾಗಿದೆ. ನಾವು ಮಾಡಬೇಕಾದುದನ್ನು ಗಂಧರ್ವರು ಮಾಡಿದರು ಎಂಬಂತೆ ಆ ಸಲಕ

ಸಹೋದರರ ಮುಕ್ತಾಯವನ್ನು ನನ್ನ ಕೈಯಿಂದಲೇ ಮಾಡಿಸಬೇಕೆಂದು ನೀನು ಸಂಕಲ್ಪ ತೊಟ್ಟಿರುವಂತಿದೆ. ಒಳ್ಳೆಯದು. ನಾನು ರಾಜಧಾನಿಗೆ ಬರುತ್ತೇನೆ. ಅಚ್ಯುತರಾಯರನ್ನೇ ಒಪ್ಪಿಸಿ ಸಲಕ ಸಹೋದರರಿಗೆ ಅವ ರಿಂದಲೇ ತಾಂಬೂಲ ಕೊಡಿಸುತ್ತೇನೆ. ಅವರನ್ನು ಬಲಾತ್ಕಾರದಿಂದ ದೂಡುವುದಕ್ಕಿಂತಲೂ ತಾವಾಗಿಯೇ ಬಿಟ್ಟುಹೋಗುವಂತೆ ಮಾಡುವುದು ರಾಜನೀತಿ "

ರಾಮರಾಯನು ಸದಾಶಿವರಾಯನನ್ನು ತನ್ನ ಪತ್ನಿ ತಿರುಮಲಾಂಬಿಕೆ ಯನ್ನು ಜೊತೆಯಲ್ಲಿ ಕರೆದುಕೊಂಡು ತಿರುಪತಿಕ್ಷೇತ್ರಕ್ಕೆ ಹೋದನು ತಿರುಪತಿ ಯಲ್ಲಿ ದೇವರ ಸೇವೆಮಾಡುತ್ತಾ ಕೆಲವೇ ದಿವಸಗಳನ್ನು ಕಳೆಯಬೇಕೆಂದು ಅವರು ಸಂಕಲ್ಪಿಸಿಕೊಂಡರು. ರಾಮರಾಯನು ಸದಾಶಿವನ ಕೈಯಿಂದ ದಾನಧರ್ಮಗಳನ್ನು ವೆಂಕಟೇಶ್ವರನಿಗೆ—ದಾನದತ್ತಿಗಳನ್ನು ಕೊಡಿಸಿದನು. ರಾಮರಾಯನ ಮನಸ್ಸಿನಲ್ಲಿ ಈ ಸದಾಶಿವರಾಯನು ಮುಂದೆ ಚಕ್ರವರ್ತಿ ಯಾಗುತ್ತಾನೆ ಅವನ ಧರ್ಮಕಾರ್ಯಗಳು ಈಗಿನಿಂದಲೇ ಆರಂಭವಾಗಲಿ ಎಂಬ ಭಾವನೆಯಿದ್ದಿತು ಅದನ್ನು ಪ್ರಕಟಗೊಳಿಸದೇ ಆ ಧರ್ಮಕಾರ್ಯ ಗಳಿಗೆ ಅವನನ್ನು ಪ್ರೇರೇಪಿಸಿದನು ಆ ಕ್ಷೇತ್ರದಲ್ಲಿ ನೆಲಸಿರುವಾಗ ರಾಮರಾ ಯನು ಸದಾಶಿವರಾಯನೊಂದಿಗೆ ಹೇಳಿದನು—ಸದಾಶಿವರಾಯ ಈ ವಿಜಯ ನಗರದ ರಾಜ್ಯದ ಮೇಲೆ ಈ ವೆಂಕಟೇಶ್ವರನ ಕೃಪಾಕಟಾಕ್ಷವು ಬಿದ್ದಿದೆ. ಇನ್ನು ಮೇಲೆ ಎಲ್ಲವೂ ಸುಮುಖವಾಗಿಯೇ ನಡೆಯುತ್ತವೆ. ಒಂದು ಹೊತ್ತು ಬೆಳಕು ಒಂದು ಹೊತ್ತು ಕತ್ತಲೆ. ಇದು ಪ್ರಕೃತಿ ನಿಯಮ. ವಿಜಯನಗರದ ಅರಮನೆಯ ಕತ್ತಲುಕಳೆದುಹೋಗಿ ಸೂರ್ಯೋದಯವಾಗುವ ಕಾಲವು ಸನ್ನಿಹಿತವಾಗುತ್ತಿದೆಯೆಂದು ನನ್ನ ಮನಸ್ಸಿಗೆ ತೋರುತ್ತಿದೆ. ಅದಕ್ಕಾಗಿ ಅನೇಕ ಶುಭಸೂಚನೆಗಳನ್ನು ನಾನು ಕಾಣುತ್ತಿದ್ದೇನೆ.

ಸದಾಶಿವರಾಯನು ರಾಮರಾಯರೇ ಕುರುಡನಿಗೆ ಕತ್ತಲೆ ಬೆಳಕು ಗಳೆರಡೂ ಸಮಾನ. ನಿಜವಾಗಿಯೂ ನಾನು ಕುರುಡನಂತಾಗಿದ್ದೇನೆ, ದೇವರಲ್ಲಿ ಕಣ್ಣುಗಳನ್ನು ಕೊಡು ಎಂದು ಪ್ರಾರ್ಥಿಸುತ್ತಿದ್ದೇನೆ. ನೀವಿಬ್ಬರು ಸಹೋದರರೂ ಈ ಸಾಮ್ರಾಜ್ಯದ ಎರಡು ಕಣ್ಣುಗಳೆಂದು ನನ್ನ ಭಾವನೆ ಎಂದು ಹೇಳಿದನು.

# ೧೯

ನಾಗಲಾಪುರದಲ್ಲಿ ಇದ್ದಕ್ಕಿದ್ದ ಹಾಗೆ ಅಚ್ಯುತರಾಯನು ರೋಗ ಗ್ರಸ್ತನಾಗಿ ಹಾಸಿಗೆ ಹಿಡಿದು ಮಲಗಿದನು. ಅರಮನೆಯಲ್ಲೆಲ್ಲಾ ಗಾಬರಿ ಯಾಯಿತು. ತಿರುಮಲ ಸಹೋದರರು ಹೋಗಿ ಮಹಾರಾಜರನ್ನು ಭೇಟಿ ಮಾಡಿದರು. ಅವರಿಗೆ ಜ್ಞಾನವಿದೆ ಮಾತನಾಡಲಾಗುವುದಿಲ್ಲ ಎಂದು ನಿರ್ಧಾರಮಾಡಿಕೊಂಡರು. ಗುಟ್ಟಾಗಿ ರಾಜವೈದ್ಯರುಗಳನ್ನು ಕರೆಸಿ ಪರೀಕ್ಷೆ ಮಾಡಿಸಿದರು. ಈ ವೈದ್ಯರುಗಳು ಒಂದು ದಿನವನ್ನೆಲ್ಲಾ ಪರೀಕ್ಷೆಯಲ್ಲಿಯೇ ಕಳೆದರು. ಅವರೆಲ್ಲರೂ ಪರಸ್ಪರ ಮಾತನಾಡಿಕೊಂಡರು. ಅರ್ಧರಾತ್ರಿಯ ಸಮಯದಲ್ಲಿ ಮಹಾರಾಜರಿಗೆ ಪಾರ್ಶ್ವವಾಯು ತಗುಲಿದೆ. ಜ್ವರವೇಗವು ಹೆಚ್ಚಾಗಿದೆ ಎಂದು ತಿಳಿಸಿದರು. ತಿರುಮಲಸೋದರರು ಆ ವೈದ್ಯರುಗಳನ್ನು ಅರಮನೆ ಬಿಟ್ಟು ಹೋಗಕೂಡದು. ಬಲವಾದ ಚಿಕಿತ್ಸೆಯನ್ನು ಮಾಡ ಬೇಕು ಎಂದು ಅಪ್ಪಣೆ ಮಾಡಿದರು. ಅಂಗರಕ್ಷಕ ಪಡೆಯ ಯಜಮಾನ ನಾದ ದೊಡ್ಡಣ್ಣ ದಂಡನಾಯಕನನ್ನು ಕರೆಸಿ ಮಹಾರಾಜರ ಅರಮನೆಯಿಂದ ಯಾರೂ ಹೊರಗೆ ಹೋಗಕೂಡದು ಯಾರೂ ಒಳಗೆ ಬರಕೂಡದು ಕಾವಲು ಗಾರರು ಪಹರೆಯವರಿಗೆ ಕೂಡಾ ಮಹಾರಾಜರ ವ್ಯಾಧಿಯು ಪ್ರಬಲ ವಾದುದೆಂದು ತಿಳಿಯಬಾರದು. ಹೀಗೆ ಅಪ್ಪಣೆ ಮಾಡಿದರು.

ಎರಡು ದಿವಸಗಳು ಬಹು ಕಷ್ಟದಿಂದ ಕಳೆದವು. ಆ ಮಹಾರಾಜರು ಬದುಕುವ ವಿಚಾರದಲ್ಲಿ ತಿರುಮಲ ಸೋದರರಿಗೆ ಸಂದೇಹ ಉಂಟಾಯಿತು. ಅವರು ಮುಂದೇನು ಮಾಡಬೇಕು ಎಂದು ಯೋಚನೆ ಮಾಡತೊಡಗಿದರು. ಸಲಕ ತಿಮ್ಮಣ್ಣನನ್ನು ಕರೆಸಿಕೊಂಡು ಅವರ ಆಪ್ತಾಲೋಚನೆಗೆ ಅವನನ್ನು ಸೇರಿಸಿಕೊಂಡರು.

ಪೆದ್ದ ತಿರುಮಲರಾಯನು "ನೋಡಿ ಸಲಕ ತಿಮ್ಮಣ್ಣನವರೇ !

ಮಹಾರಾಜರು ಬದುಕುವುದು ಸಂದೇಹ ಇಷ್ಟರ ಮೇಲೆ ದೇವರ ಚಿತ್ತ. ಆದರೆ ನಾವು ಮೂವರು ಒಂದಾಗಿರಬೇಕು. ಮುಳುಗಿದರೆ ಮೂವರೂ ಮುಳುಗಬೇಕು. ತೇಲಿದರೆ ಮೂವರೂ ತೇಲಬೇಕು. ಹೀಗೆ ನಾವು ಮೂವರೂ ಭುವನೇಶ್ವರಿಯ ಮುಂದೆ ಪ್ರತಿಜ್ಞೆಮಾಡಬೇಕು" ಎಂದು ಹೇಳಿದನು.

ಸಲಕ ತಿಮ್ಮಣ್ಣನು, "ನಾನು ನಿಮ್ಮೊಡನೆ ಸೇರಿ ಎಷ್ಟೋ ದಿನ ಗಳಾದವು ನೀವು ಸಂದೇಹಪಡಬೇಡಿರಿ ನಾನು ನಿಮ್ಮನ್ನೇ ಪ್ರಭುಗಳೆಂದು ನಂಬಿಕೊಂಡಿದ್ದೇನೆ ಸದಾಶಿವರಾಯನು ಅಧಿಕಾರಕ್ಕೆ ಬಂದ ಮೇಲೆ ನನ್ನ ಗುಣ ನಿಮಗೇ ಪ್ರತ್ಯಕ್ಷವಾಗಿದೆ. ಹೆಚ್ಚು ಹೇಳುವುದೇನು ನಾವು ಮೂರು ಜನರೂ ಒಂದಾದರೆ ಪರಮೇಶ್ವರನ ಮೂರು ಕಣ್ಣುಗಳಂತೆ ನಮ್ಮನ್ನು ಮೀರಿ ಹೋಗುವ ಶಕ್ತಿಯು ಯಾರಿಗೂ ಇರುವುದಿಲ್ಲ" ಎಂದು ಹೇಳಿದನು.

ಮೂವರೂ ಗೋಪ್ಯವಾಗಿ ಭುವನೇಶ್ವರಿಯ ಮುಂದೆ ಮೈತ್ರಿಯ ಪ್ರಮಾಣವನ್ನು ಮಾಡಿಕೊಂಡರು

ಎಷ್ಟು ಕಟ್ಟುನಿಟ್ಟಾಗಿದ್ದರೂ ಮಹಾರಾಜರ ವ್ಯಾಧಿಯ ವೃತ್ತಾಂತವು ಹೊರಗೆ ಬೀಳದೇ ಇರಲಿಲ್ಲ. ಮೊದಲು ತಿರುಮಲಾಂಬಿಕೆಯವರೂ ಚಿನ್ನಾಂ ಬಿಕೆಯವರೂ ಮಹಾರಾಜರ ಅರಮನೆಗೆ ಬಂದರು. ಅವರ ಜೊತೆಯಲ್ಲಿ ಕನ್ನಾಂಬೆಯೂ ಬಂದಿದ್ದಳು.

ದೊಡ್ಡಣ್ಣ ದಂಡನಾಯಕನು ಅವರನ್ನು ನಿಷೇದಿಸಬಲ್ಲನೇ? ಮಹಾ ರಾಣಿಯವರನ್ನು ಕಾಣುತ್ತಲೇ ಬಗ್ಗಿ ಅಭಿವಾದನ ಮಾಡಿ ಒಳಕ್ಕೆ ದಾರಿ ತೋರಿದನು. ರಾಣಿಯರು ನೇರವಾಗಿ ಮಹಾರಾಜನು ಮಲಗಿದ್ದ ಮಂಚದ ಸಮೀಪಕ್ಕೆ ಹೋದರು. ಮಹಾರಾಜನು ಕಣ್ಣುಗಳನ್ನು ಬಿಟ್ಟು ಅವರಿಬ್ಬ ರನ್ನು ನೋಡಿದನು. ಅವನ ಕಣ್ಣುಗಳಲ್ಲಿ ಧಾರಾಕಾರವಾಗಿ ಕಂಬನಿಯು ಹರಿಯಿತು. ಅವನು ಮುಖವನ್ನು ಅಲ್ಲಾಡಿಸಿ ಏನೋ ಮಾತನಾಡುವುದಕ್ಕೆ ಯತ್ನಿಸಿದನು. ನಾಲಿಗೆಯು ತೊಡರಿತು. ಮಾತು ಹೊರಡಲಿಲ್ಲ ಕಣ್ಣು ಮುಚ್ಚಿಕೊಂಡು ಅತ್ತುಬಿಟ್ಟನು ಅಷ್ಟರಲ್ಲಿ ತಿರುಮಲ ಸಹೋದರರು ರಾಣಿಯವರು ಬಂದಿರುವ ಸಮಾಚಾರವನ್ನು ಕೇಳಿ ಅಲ್ಲಿಗೆ ಧಾವಿಸಿ ಬಂದರು. ಅವರೂ ಬಹಳ ದುಃಖವನ್ನು ತೋರಿದರು.

ತಿರುಮಲಾಂಬಿಕೆಯು "ವೈದ್ಯರುಗಳು ಏನು ಹೇಳುತ್ತಾರೆ ?" ಎಂದು ಕೇಳಿದಳು.

ಪೆದ್ದ ತಿರುಮಲನು "ವೈದ್ಯರು ವ್ಯಾಧಿಯು ಪ್ರಬಲವಾದುದೆಂದು ಹೇಳುತ್ತಾರೆ. ಆದರೆ ಗುಣಪಡಿಸುತ್ತೇವೆಂದು ಪೂರ್ಣ ಭರವಸೆ ಕೊಡುತ್ತಾರೆ. ನಮಗೇನೋ ಸಂದೇಹ. ಇಷ್ಟರಮೇಲೆ ದೈವಚಿತ್ತ" ಎಂದು ಹೇಳಿ ಕಣ್ಣೊರೆಸಿಕೊಂಡನು.

ತಿರುಮಲಾಂಬಿಕೆಯು "ಹೇಗೇ ಆಗಲಿ ವ್ಯಾಧಿಯು ಪ್ರಬಲವಾಗಿದೆ. ಅಳಿಯ ರಾಮರಾಯರವರಿಗೂ ಸದಾಶಿವರಾಯನಿಗೂ ಮುದ್ರಾಂಪತ್ರವನ್ನು ಕಳುಹಿಸುವುದು ಒಳ್ಳೆಯದು. ಮನುಷ್ಯಪ್ರಯತ್ನಗಳನ್ನೆಲ್ಲಾ ನಾವು ಮಾಡಲೇಬೇಕು. ಇದು ದೊಡ್ಡ ಸಾಮ್ರಾಜ್ಯದ ವಿಚಾರ" ಎಂದು ಹೇಳಿ ಅಲ್ಲಿಂದ ತಮ್ಮ ಅರಮನೆಗೆ ಹೊರಟು ಹೋದರು

ಸಲಕ ಸಹೋದರರಿಬ್ಬರೂ ಏನು ಮಾಡಬೇಕು ಎಂದು ಆಲೋಚನೆ ಮಾಡಿದರು. ಮಹಾರಾಜರಿಗೆ ಒಳ್ಳೆಯದಾಗಲಿ ಕೆಡುಕೇ ಆಗಲಿ ಈ ಸಮಯದಲ್ಲಿ ಅಳಿಯಂದಿರುಗಳೂ ಯುವರಾಜರೂ ಇಲ್ಲಿಗೆ ಬರುವುದು ಕ್ಷೇಮಕರವಲ್ಲ. ನಾವು ಶಾಸ್ತ್ರೋಕ್ತವಾಗಿ ಕುಮಾರ ವೆಂಕಟಾದ್ರಿಯನ್ನು ಸಿಂಹಾಸನದ ಮೇಲೆ ಕೂಡಿಸಿಬಿಡಬೇಕು. ಮಹಾರಾಜಾ ಅಚ್ಯುತರಾಯರೇ ಅಪ್ಪಣೆ ಮಾಡಿದರೆಂದು ಪ್ರಕಟಿಸಿಬಿಡಬೇಕು. ಅದನ್ನು ಯಾರೂ ಅಲ್ಲಗಳೆಯಲಾರರು ಎಂದು ಮಾತನಾಡಿಕೊಂಡರು.

ತಿರುಮಲ ಸಹೋದರರು ಒಳಗೊಳಗೇ ಪಟ್ಟಾಭಿಷೇಕದ ಸನ್ನಾಹಗಳನ್ನು ಮಾಡಿದರು ತಮ್ಮ ಆಶ್ರಯದಲ್ಲಿರುವ ವೈದಿಕ ಬ್ರಾಹ್ಮಣರನ್ನು ಕರೆಸಿ ಗೋಪ್ಯವಾಗಿ ಸಿದ್ಧರಾಗಿರಬೇಕೆಂದು ಅಪ್ಪಣೆ ಮಾಡಿದನು.

ನಗರದಲ್ಲೆಲ್ಲಾ ಮಹಾರಾಜಾ ಅಚ್ಯುತರಾಯರು ದೈವಾಧೀನರಾದರೆಂದು ವಾರ್ತೆಯು ಹರಡಿತು. ಪುರಜನರೆಲ್ಲರೂ ಗುಂಪುಗುಂಪಾಗಿ ಮಹಾರಾಜರ ಅರಮನೆಯ ಮುಂದೆ ಬಂದು ಸೇರಲಾರಂಭಿಸಿದರು ಜನ ಸಮುದ್ರವೇ ಉಕ್ಕಿಬರುವಂತೆ ಕಣ್ಣಿಗೆ ಕಾಣುವಂತೆ ಜನಸ್ತೋಮವು ಕಿಕ್ಕಿರಿದು ಹೋಯಿತು. ತಿರುಮಲಸಹೋದರರು ಗಾಬರಿಗೊಂಡು ಆ ಜನಮುಖಂಡರನ್ನು ಅರಮನೆಯೊಳಕ್ಕೆ ಕರೆಸಿಕೊಂಡು ಮಹಾರಾಜರ ಸಮೀಪಕ್ಕೆ ಕರೆದುಕೊಂಡು

ಹೋಗಿ ತೋರಿಸಿದರು. ಮಹಾರಾಜನು ಅವರನ್ನೆಲ್ಲಾ ಕಣ್ಣು ಬಿಟ್ಟು ನೋಡುತ್ತಿದ್ದನು. ವೈದ್ಯರುಗಳು, "ಮೂರು ದಿನಗಳಿಂದ ಈಗೆಷ್ಟೋ ಗುಣವಾಗಿದೆ. ಜ್ವರವೇಗವು ಕಡಿಮೆಯಾಗಿದೆ. ಮಹಾರಾಜರು ಕ್ರಮೇಣ ಗುಣಹೊಂದುತ್ತಾರೆ" ಎಂದು ಭರವಸೆಯಿಂದ ಹೇಳಿದರು. ಜನಮುಖಂಡರು "ಅರಮನೆಯ ಮುಂದಿನ ವಿಶಾಲವಾದ ಅಂಗಳಕ್ಕೆ ಬಂದು ಮಹಾರಾಜರು ಬದುಕಿದ್ದಾರೆ ಗುಣಮುಖವಾಗುತ್ತಿದೆ" ಎಂದು ಸಾರಿ ಸಾರಿ ಹೇಳಿದರು. ಜನರ ಗುಂಪು ಮಹಾರಾಜರ ವಿಷಯವಾಗಿ ನಾನಾವಿಧವಾಗಿ ಮಾತನಾಡಿ ಕೊಳ್ಳುತ್ತಾ ಅಲ್ಲಿಂದ ಚದುರಿಹೋದರು. ಮಹಾರಾಜರ ಗುಣಗಾನ ಮಾಡಿದ್ದವರೆಷ್ಟೋಮಂದಿ. ರಾಜತ್ವಕ್ಕೆ ಅರ್ಹನಲ್ಲ ಸಿಂಹಾಸನಕ್ಕೆ ಕಳಂಕವನ್ನು ತಂದ. ಇವನೆಲ್ಲಿ ಕೃಷ್ಣದೇವರಾಯನೆಲ್ಲಿ ಎಂದು ಹೇಳಿ ಕೊಳ್ಳುತ್ತಾ ಹೋದವರೂ ಬಹುಮಂದಿ. ದೇವಾಲಯಗಳಲ್ಲಿ ಮಹಾರಾಜರ ಕ್ಷೇಮಾರ್ಥವಾಗಿ ವಿಶೇಷ ಪೂಜಾದಿಗಳು ಮಂಗಳಾರತಿಗಳು ಆರಂಭ ವಾದವು ಅರಮನೆಯಲ್ಲಿ ಜಪತಪ ಹೋಮಾದಿಗಳಿಗೆ ಮೊದಲಾಯಿತು. ಎಲ್ಲೆಲ್ಲಿಯೂ ಸಂತರ್ಪಣೆಗಳು ನಡೆಯಲಾರಂಭಿಸಿದವು ಮಹಾರಾಜರಿಗೆ ಸುಖವಾಗಲಿ ಅಚ್ಯುತರಾಯರು ಆರೋಗ್ಯವನ್ನು ಹೊಂದಲಿ ಎಂಬ ಶುಭ ವಾಕ್ಯಗಳು ಎಲ್ಲರ ಬಾಯಿಯಲ್ಲಿಯೂ ಹೊರಡುತ್ತಿದ್ದವು. ನಗರದಲ್ಲೆಲ್ಲಾ ಶಾಂತ ವಾತಾವರಣವು ಆವಿರ್ಭವಿಸಿತು.

ಆ ದಿನ ಸಂಧ್ಯಾಕಾಲದಲ್ಲಿ ತಿರುಮಲ ಸಹೋದರರಿಬ್ಬರೂ ನಾಳೆ ಸೂರ್ಯೋದಯ ಸಮಯಕ್ಕೆ ಸರಿಯಾಗಿ ಕುಮಾರ ವೆಂಕಟಾದ್ರಿಯನ್ನು ಶಾಸ್ತ್ರೋಕ್ತವಾಗಿ ಸಿಂಹಾಸನದ ಮೇಲೆ ಕೂಡಿಸಿಬಿಡಬೇಕು. ಎಲ್ಲವೂ ಸಿದ್ಧ ವಾಗಿದೆ. ನಮಗೆ ಅತ್ಯಂತ ಆಪ್ತರಾದ ದರಬಾರಿಗಳನ್ನೆಲ್ಲಾ ಕರೆಸಬೇಕು. ಹೇಗಾದರೂ ಪ್ರಯತ್ನಮಾಡಿ ಮಹಾರಾಜರನ್ನು ಆ ಸಭಾಮಂಟಪಕ್ಕೆ ಎತ್ತಿಕೊಂಡು ಬಂದು ಕೂಡ್ರಿಸಿ ಅವರ ಕೈಯಿಂದಲೇ ಕಿರೀಟಧಾರಣೆ ಮಾಡಿಸಿದಂತೆ ಮಾಡಿಬಿಡಬೇಕು ಎಂದು ಸಂಕಲ್ಪಮಾಡಿಕೊಂಡರು.

ಸಲಕ ತಿಮ್ಮಣ್ಣನೊಬ್ಬನನ್ನು ನಮ್ಮೊಳಗೆ ಸೇರಿಸಿಕೊಳ್ಳಬೇಕು. ಅವನನ್ನು ಬಿಟ್ಟು ಯಾವ ಕಾರ್ಯವನ್ನು ಮಾಡಬಾರದು. ರಾಣಿಯರು ಗಳಿಗೂ ಈ ರಾತ್ರಿಯೇ ತಿಳಿಸಿಬಿಡಬೇಕು. ಅವರೂ ಒಪ್ಪಿಕೊಳ್ಳುತ್ತಾರೆ

ಎಂದು ಇಬ್ಬರು ಸಹೋದರರೂ ಆಲೋಚನೆ ಮಾಡಿ ಸಲಕ ತಿಮ್ಮಣ್ಣನನ್ನು ಅರಮನೆಗೆ ಕರೆಸಿಕೊಂಡರು. ಅವನೊಡನೆ ತಮ್ಮ ಆಲೋಚನೆಗಳನ್ನೆಲ್ಲಾ ಹೇಳಿದರು. ದರಬಾರಿನಲ್ಲಿ ಎಲ್ಲರೂ ನಮಗೆ ಬೇಕಾದವರೆಂದು ಹೇಳ ಲಾಗುವುದಿಲ್ಲ. ಹೋಜೇ ತಿರುಮಲನೊಬ್ಬನು ಕೃಷ್ಣದೇವರಾಯರ ಎಳೆಯ ಮಗನಿಗೆ ಪಟ್ಟಕಟ್ಟಿಸಬೇಕೆಂದು ಭೂವ್ಯಾಕಾಶಗಳನ್ನು ಒಂದುಮಾಡಿ ಹಾರಾಡುತ್ತಿದ್ದಾನೆ. ಮಹಾರಾಜರು ಬದುಕುವ ಸಂಭವವೇ ಇಲ್ಲ. ನಮ್ಮ ಪ್ರಯತ್ನಗಳನ್ನೆಲ್ಲಾ ಮಾಡಿದ್ದಾಯಿತು. ದುರದೃಷ್ಟವಶಾತ್ ಅವರು ಕಾಲ ವಾಗಿ ಹೋದರೆ ಈ ಸಿಂಹಾಸನಕ್ಕಾಗಿ ದೊಡ್ಡ ಯಾದವೀಕಲಹವೇ ಹತ್ತಿ ಕೊಳ್ಳುತ್ತದೆ. ಮಹಾರಾಜರು ಜೀವದಿಂದಿರುವಾಗಲೇ ಕುಮಾರ ವೆಂಕ ಟಾದ್ರಿಗೆ ಪಟ್ಟಾಭಿಷೇಕ ಮಾಡಿಬಿಡೋಣ. ಆ ಮೇಲೆ ಏನು ಬಂದರೂ ನೋಡಿಕೊಳ್ಳೋಣವೆಂದು ಯೋಚಿಸಿದ್ದೇನೆ. ನಿಮ್ಮ ಒಪ್ಪಿಗೆಯಿಲ್ಲದೇ ಸಹಾಯವಿಲ್ಲದೇ ನಾವು ಯಾವ ಕಾರ್ಯಕ್ಕೂ ಕೈಹಚ್ಚುವುದಿಲ್ಲ ಈ ದರ್ಬಾರಿನಲ್ಲಿ ಮುಖ್ಯವಾಗಿರುವವರು ನಾವು ಮೂವರು ಯಾವ ಕೆಲಸವನ್ನು ಮಾಡ ಬೇಕಾದರೂ ನಾವು ಮೂವರೂ ಏಕೀಭವಿಸಿ ಮಾಡಬೇಕು" ಎಂದು ಹೇಳಿದರು.

ಸಲಕ ತಿಮ್ಮಣ್ಣನು—ತಿರುಮಲರಾಯರವರೇ ನೀವು ಮಹಾರಾಜರ ಸಮೀಪ ಬಂಧುಗಳು. ಮತ್ತು ಮಹಾಪ್ರಧಾನರಾಗಿಯೂ ಇದ್ದೀರಿ. ನಿಮ್ಮ ಮಾತಿಗೆ ಪ್ರತಿಯಿಲ್ಲ. ನಾನು ಯಾವಾಗಲೂ ನಿಮ್ಮ ಕಡೆಯವನೇ. ಆ ಮಾತಿಗೆ ನೀವು ತಪ್ಪಿದರೂ ನಾನು ತಪ್ಪುವವನಲ್ಲ ನಾವು ಯಾವ ಕಾರ್ಯವನ್ನೆಸಗಿದರೂ ಅದು ಲೋಕಸಮ್ಮತವಾಗಿರಬೇಕು. ದರಬಾರಿನವ ರೆಲ್ಲರೂ ಸಮ್ಮತಿಸಲಿ ಸಮ್ಮತಿಸದೇ ಇರಲಿ ಮುಖ್ಯರಾದವರೆಲ್ಲರನ್ನು ಒಪ್ಪಿಸಿ ಮಾಡುವುದು ಕ್ಷೇಮಕರ ಮತ್ತು ರಾಜ್ಯಕ್ಕೆ ಭದ್ರತೆ. ಈ ರಾಜಕುಟುಂಬ ದಲ್ಲಿ ನೀವಿಬ್ಬರೂ ಹೇಗೆ ಮುಖ್ಯರೋ ಅಳಿಯ ರಾಮರಾಯರೂ ತಿರುಮಲ ರಾಯರೂ ಮುಖ್ಯರಾದವರು. ನಾನು ರಾಮರಾಯರ ಭೃತ್ಯ. ನಾಳೆ ಅವರಿಗೆ ಹೇಗೆ ಮುಖ ತೋರಿಸಲಿ. ಅವರ ಸಮ್ಮತಿಯನ್ನು ಪಡೆಯಲೇ

ಬೇಕು. ಮಹಾರಾಜರು, ಮಾತನಾಡುವಷ್ಟು ಅಸ್ಪದವಿದ್ದಿದ್ದರೆ ಆ ಮಾತು
ಬೇರೆ. ಅವರಿಗೆ ಮಾತು ನಿಂತುಹೋಗಿದೆ. ಜ್ಞಾನ ಜ್ಞಾನಾವಸ್ಥೆಯು ಪಾತ್ರ
ವಾಗಿದೆ ಎಂದು ಈ ರಾಜಧಾನಿಯ ಪುರಜನರೆಲ್ಲರಿಗೂ ತಿಳಿದುಹೋಗಿದೆ.
ಇಂತಹ ಕಾರ್ಯಕ್ಕೆ ನಾನು ಒಪ್ಪುವುದಕ್ಕಾಗುವುದಿಲ್ಲ ನಾಳೆ ದರ್ಬಾರಿ
ಗಳೆಲ್ಲರೂ ಸೇರಿ ನನ್ನನ್ನು ಖಂಡಖಂಡವಾಗಿ ಕತ್ತರಿಸಿ ನಾಯಿನರಿಗಳಿಗೆ
ಹಾಕಿಬಿಟ್ಟಾರು. ನೀವು ಸರ್ವತಂತ್ರ ಸ್ವತಂತ್ರರು. ಏನು ಬೇಕಾದರೂ
ಮಾಡಿಕೊಳ್ಳಿ. ನಾನು ಅಡ್ಡಿಬರುವುದಿಲ್ಲ. ಈ ರಾಜಧಾನಿಯನ್ನು ಈಗಲೇ
ಬಿಟ್ಟುಹೋಗುತ್ತೇನೆ ಎಂದು ಹೇಳಿ ಹೊರಟು ಹೋದನು.

ಸಲಕ ತಿಮ್ಮಣ್ಣನು ನೇರವಾಗಿ ತನ್ನ ಮನೆಗೆ ಹೋಗಿ ಮಂತ್ರಿಗಳಿ
ಗೆಲ್ಲಾ ಗೋಪ್ಯವಾಗಿ ಈ ವಿಷಯವನ್ನು ತಿಳಿಸಿದನು. ದೊಡ್ಡಣ್ಣನನ್ನು
ಕರೆಸಿಕೊಂಡು, “ಈ ದಿನ ಅರಮನೆಯ ದರ್ಬಾರಿನಲ್ಲಿ ಗೋಪ್ಯವಾಗಿ
ಕುಮಾರ ವೆಂಕಟಾದ್ರಿಗೆ ಪಟ್ಟಕಟ್ಟುವ ಯೋಚನೆಯನ್ನು ತಿರುಮಲ
ಸಹೋದರರು ನಡೆಸಿದ್ದಾರೆ. ಇದಕ್ಕೆ ರಾಮರಾಯರ ಸಮ್ಮತಿಯೂ ಇಲ್ಲ.
ಮಂತ್ರಿಗಳಿಗೂ ಒಪ್ಪಿಗೆಯಿಲ್ಲ. ರಾಣಿಯವರುಗಳಿಗೆ ತಿಳಿದಿದೆಯೋ ಇಲ್ಲವೋ
ಹೇಳಲಾಗುವುದಿಲ್ಲ. ಇದಕ್ಕೆ ಸರ್ವಥಾ ಆಸ್ಪದ ಕೊಡಬಾರದು. ಸ್ವಾಮಿ
ಭಕ್ತರಾದ ನಮ್ಮೆಲ್ಲರಿಗೂ ಇದು ಮುಖ್ಯವಾದ ಕಾರ್ಯ ಎಂದು ಹೇಳಿ
ಕಳಿಸಿದನು. ಸಲಕ ತಿಮ್ಮಣ್ಣನು ದರಬಾರಿನಲ್ಲಿ ತನಗೆ ಆಪ್ತರಾದವರೆಲ್ಲರನ್ನು
ಎತ್ತಿಕಟ್ಟಿದನು.

ಆದರೆ ದೈವಸಂಕಲ್ಪವು ಬೇರೆವಿಧವಾಗಿದ್ದಿತು. ತಿರುಮಲ ಸಹೋ
ದರರು ಆ ರಾತ್ರಿಯೇ ಅರಮನೆಯಲ್ಲಿ ವೆಂಕಟಾದ್ರಿಯನ್ನು ಸಿಂಹಾಸನದ
ಮೇಲೆ ಕೂಡ್ರಿಸಿ ಶಾಸ್ತ್ರವಿಧಿಗಳನ್ನು ನೆರವೇರಿಸಿದರು ಅರ್ಧರಾತ್ರಿಯ
ಹೊತ್ತಿಗೆ ಮಹಾರಾಜನು ದೈವಾಧೀನನಾದನು. ದೊಡ್ಡಣ್ಣನು ಈ ಸಮಾ
ಚಾರವನ್ನು ಸಲಕ ತಿಮ್ಮಣ್ಣನಿಗೆ ಹೇಳಿಕಳಿಸಿದನು. ಸಲಕ ತಿಮ್ಮಣ್ಣನು
ನಗರದ ಕಾವಲಿನ ಭಟರನ್ನು ಕರೆಸಿ ರಾಜಧಾನಿಯಲ್ಲೆಲ್ಲಾ ಮಹಾರಾಜರ
ಮರಣವಾರ್ತೆಯನ್ನು ಡಂಗೂರ ಹೊಡೆಸುವಂತೆ ಅಪ್ಪಣೆ ಮಾಡಿದನು. ರಾಜ
ಭಟರು ರಾಜಧಾನಿಯಲ್ಲೆಲ್ಲಾ ಮಹಾರಾಜರ ಮರಣವಾರ್ತೆಯನ್ನು ಸಾರಿ
ಡಂಗೂರ ಹೊಡೆದರು. ಪುರಜನರು ಆತುರದಿಂದ ಅರಮನೆಗೆ ಬರಲಾರಂಭಿ

ಸಿದರು. ಸ್ತ್ರೀಯರು ಮಕ್ಕಳು ಆದಿಯಾಗಿ ಎಲ್ಲರೂ ಗುಂಪುಕಟ್ಟಿಕೊಂಡು ಬರಲು ಮೊದಲಾಯಿತು ದರಬಾರಿಗಳು ಪುರಪ್ರಮುಖರುಗಳು ಅರಮನೆಯೊಳಗೆಲ್ಲಾ ತುಂಬಿಹೋದರು. ರಾಜಪುರೋಹಿತರು ಧರ್ಮಾಧಿಕಾರಿಗಳು ಬಂದು ಸೇರಿದರು. ಶಾಸ್ತ್ರವಿಧಿಗಳಿಗೆ ಅನುಸಾರವಾಗಿ ಮಹಾರಾಜರ ಅಂತ್ಯಸಂಸ್ಕಾರಗಳಿಗೆ ಆರಂಭವಾದವು ಚಿನ್ನದ ಪಲ್ಲಕ್ಕಿಯಲ್ಲಿ ಮಹಾರಾಜರ ಶರೀರವನ್ನಿಟ್ಟು ವಸ್ತ್ರಾಭರಣಗಳಿಂದಲೂ ಪುಷ್ಪಗಳಿಂದಲೂ ಅಲಂಕರಿಸಿ ನಗರದ ರಾಜಮಾರ್ಗಗಳಲ್ಲಿ ರಾಜಮರ್ಯಾದೆಗಳೊಂದಿಗೆ ತುಂಗಾತೀರದಲ್ಲಿದ್ದ ರಾಜಸ್ಮಶಾನಕ್ಕೆ ಕೊಂಡೊಯ್ದರು. ಕುಮಾರ ವೆಂಕಟಾದ್ರಿಯು ಕಾಲು ನಡಿಗೆಯಲ್ಲಿಯೇ ಆ ಮೆರವಣಿಗೆಯಲ್ಲಿ ನಡೆದುಹೋದನು. ಆ ಜನ ಸಮುದಾಯವೆಲ್ಲವೂ ಮೆರವಣಿಗೆಯನ್ನನುಸರಿಸಿ ಸ್ಮಶಾನದವರೆಗೆ ಹೋಗಿ ಮಹಾರಾಜರಿಗೆ ತಮ್ಮ ಅಂತ್ಯವಂದನೆಗಳನ್ನು ಸಮರ್ಪಿಸಿದರು. ಸಂಸ್ಕಾರಗಳೆಲ್ಲವೂ ಶಾಸ್ತ್ರೋಕ್ತವಿಧಾನದಿಂದ ನಡೆಸಲ್ಪಟ್ಟವು. ಸ್ಮಶಾನದಲ್ಲಿ ಚಿತೆಯ ಮೇಲೆ ಮಹಾರಾಜನು ಉರಿಯುತ್ತಿದ್ದನು. ಕತ್ತಲಾಗುವವರೆಗೆ ಜನ ಸಮುದಾಯವು ಸ್ಮಶಾನದಿಂದ ಕದಲಲೇ ಇಲ್ಲ.

ಮಹಾರಾಜನು ಸತ್ತುಹೋದ ಸಮಾಚಾರವು ತಿಳಿಯುತ್ತಲೇ ಮಹಾರಾಣಿಯವರುಗಳು ದೊಡ್ಡಣ್ಣದಂಡನಾಯಕನನ್ನು ಕರೆಸಿ ಇಲ್ಲಿಯ ವೃತ್ತಾಂತಗಳನ್ನೆಲ್ಲಾ ರಾಮರಾಯರಿಗೆ ತಿಳಿಸಿ ರಾಮರಾಯರನ್ನೂ ತಿರುಮಲರಾಯರನ್ನೂ ಸದಾಶಿವರಾಯರನ್ನೂ ಕರೆತರಬೇಕೆಂದು ಹೇಳಿಕಳುಹಿಸಿದರು.

ದೊಡ್ಡಣ್ಣ ದಂಡನಾಯಕನು ಆ ರಾತ್ರಿಯಲ್ಲಿಯೇ ಕುದುರೆಯನ್ನೇರಿ ರಾಜಧಾನಿಯ ಕೋಟೆಯ ಬಾಗಿಲನ್ನು ದಾಟಿ ತಿರುಪತಿಗೆ ಪ್ರಯಾಣ ಮಾಡಿದನು. ದಂಡನಾಯಕನು ವೇಗವಾಗಿ ಪ್ರಯಾಣಮಾಡುತ್ತಾ ನಾಲ್ಕು ದಿನಗಳಲ್ಲಿ ತಿರುಪತಿ ಕ್ಷೇತ್ರವನ್ನು ತಲುಪಿದನು. ರಾಮರಾಯರನ್ನು ಭೇಟಿ ಮಾಡಿದನು. ದೊಡ್ಡಣ್ಣ ದಂಡನಾಯಕನು ರಾಯರ ದರ್ಶನಾರ್ಥವಾಗಿ ಬಂದಿದ್ದಾನೆಂಬುದನ್ನು ಕೇಳುತ್ತಲೇ ರಾಮರಾಯರಿಗೆ ಗಾಬರಿಯಾಯಿತು. ಆತುರವಾಗಿ ದೊಡ್ಡಣ್ಣನನ್ನು ತಮ್ಮ ಸಮ್ಮುಖಕ್ಕೆ ಕರಸಿಕೊಂಡನು.

ದಂಡನಾಯಕನು–ಮಹಾರಾಜರು ಕಾಲವಾದ ವೃತ್ತಾಂತವನ್ನೆಲ್ಲಾ ವಿವರವಾಗಿ ತಿಳಿಸಿದನು. ರಾಯರು ಸದಾಶಿವರಾಯನೊಡನೆ ತಕ್ಷಣ

ರಾಜಧಾನಿಗೆ ಹೊರಟುಬರಬೇಕೆಂದು ಮಹಾರಾಣಿಯವರ ಅಜ್ಞೆಯಾಗಿದೆ ಎಂದು ಹೇಳಿದನು. ರಾಮರಾಯನು ಎಲ್ಲವನ್ನೂ ಕೇಳಿ ಸಾವಧಾನವಾಗಿ ದೊಡ್ಡಣ್ಣ ! ಮಹಾರಾಜರವರಿಗೆ ಅಸ್ವಸ್ಥವಾಗಿದೆಯೆಂದೂ ಅವರ ವ್ಯಾಧಿಯು ಅಪಾಯಕರವಾಗಿದೆಯೆಂದೂ ನಮಗೇಕೆ ತಿಳಿಸಲಿಲ್ಲ " ಎಂದನು

" ರಾಯರವರೆ ವ್ಯಾಧಿಯು ಬರುವಾಗಲೇ ಹಾಗೆ ಬಂದುಬಿಟ್ಟಿತು. ಮೂರನೆಯ ದಿವಸವೇ ಅವರು ಕಾಲವಾದರು. ಎಲ್ಲರೂ ಗಾಬರಿಯಲ್ಲಿದ್ದರು. ಮಹಾರಾಣಿಯವರೇನೋ ಆ ದಿನವೇ ತಮಗೆ ಸಮಾಚಾರ ತಿಳಿಸಬೇಕೆಂದು ಅಪ್ಪಣೆ ಮಾಡಿದರು ಮಹಾಪ್ರಧಾನಿ ತಿರುಮಲರಾಯರು ಅಲಕ್ಷ್ಯ ಮಾಡಿದಂತಿದೆ."

" ಓಹೋ ! ಹಾಗಿರಬಹುದು. ಅವರ ಅಭಿಪ್ರಾಯಗಳು ಬೇರೆ ವಿಧವಾಗಿರಬಹುದು."

" ಹೌದು ಮಹಾಸ್ವಾಮಿ ! ಹಾಗೆಯೇ ತೋರುತ್ತದೆ. ತಿರುಮಲ ಸೋದರರು ಕುಮಾರ ವೆಂಕಟಾದ್ರಿಯವರಿಗೆ ಆಗಲೇ ಪಟ್ಟಕಟ್ಟಸಬೇಕೆಂದು ಎಲ್ಲವನ್ನು ಸಿದ್ಧಗೊಳಿಸಿದರಂತೆ. ಸಲಕ ತಿಮ್ಮಣ್ಣನವರು ರಾಮರಾಯರ ಸಮ್ಮತಿಯಿಲ್ಲದೇ ಯಾವ ಕಾರ್ಯಗಳನ್ನು ಮುಂದುವರಿಸಕೂಡದು ಎಂದು ತಡೆಮಾಡಿದರಂತೆ."

ರಾಮರಾಯನು ಆಶ್ಚರ್ಯದಿಂದ " ಓಹೋ ! ನಮ್ಮ ಕಡೆಯವನೂ ಅವನೊಬ್ಬ ರಾಜಧಾನಿಯಲ್ಲಿದ್ದಾನೆ " ಎಂದನು.

" ಹೌದು ರಾಯರವರೇ ! ಸಲಕ ತಿಮ್ಮಣ್ಣನವರು ಅರಮನೆಯಲ್ಲಿ ನಾನು ರಾಮರಾಯರ ಭೃತ್ಯ ಎಂದು ಹೇಳಿಕೊಂಡರು. ನಾನೇ ಕೇಳಿದೆ "

" ಒಳ್ಳೆಯದಾಯಿತು. ತಿರುಮಲರಾಯರು ವೆಂಕಟಾದ್ರಿಗೆ ಪಟ್ಟಾಭಿಷೇಕಮಾಡಿಸಲು ಸಲಕ ತಿಮ್ಮನು ಅವಕಾಶಕೊಡಲಿಲ್ಲ ಅಲ್ಲವೇ ! ಅದೆಂತಹ ಪಟ್ಟಾಭಿಷೇಕ ಅವರೇಕೆ ಅಷ್ಟು ಆತುರಪಡಬೇಕು. ಆಗುವುದು ಆಗಿಯೇ ಆಗುತ್ತದೆ. ಒಳ್ಳೆಯದು. ಈ ಸಮಯದಲ್ಲಿ ನೀನು ರಾಜಧಾನಿಯಲ್ಲಿ ಇರುವುದು ಒಳ್ಳೆಯದು. ಅಲ್ಲಿರುವ ನಮ್ಮ ಕಡೆಯವರಿಗೆ ಸ್ವಲ್ಪ ಸಹಾಯವಾಗುತ್ತದೆ. ನೀನು ವೇಗವಾಗಿ ಮುಂದೆ ಹೋಗು ನಾವು ಹಿಂದೆಯೇ ಬರುತ್ತಿದ್ದೇವೆ. ಚಂದ್ರಗಿರಿಗೆ ಹೋಗಿ ಅಲ್ಲಿಂದ ನೇರವಾಗಿ ವಿಜಯ

ನಗರಕ್ಕೆ ಬರುತ್ತೇವೆ. ಅರಮನೆಯಲ್ಲಿ ಏನಾದರೂ ಚಿಂತೆಯಿಲ್ಲ. ಪುರಜನರು ಉದ್ರೇಕಗೊಳ್ಳದಂತೆ ನೋಡಿಕೊಳ್ಳಬೇಕು."

ರಾಮರಾಯನೂ ತಿರುಮಲರಾಯನೂ ಸದಾಶಿವರಾಯನೂ ಕುಳಿತು ರಾಜಧಾನಿಯ ವೃತ್ತಾಂತಗಳನ್ನು ಮಾತನಾಡತೊಡಗಿದರು ರಾಮರಾಯನು ಆ ತಿರುಮಲ ಸಹೋದರರ ಅಭೀಷ್ಟವು ಸಿದ್ಧಿಸಿದಂತೆಯೇ ಆಗಬಹುದು. ಅರಮನೆಯಲ್ಲಿಯೂ ರಾಜಧಾನಿಯಲ್ಲಿಯೂ ಅವರು ಅತ್ಯಂತ ಪ್ರಬಲರಾಗಿದ್ದಾರೆ. ವೆಂಕಟಾದ್ರಿಗೆ ಪಟ್ಟಕಟ್ಟಿಯೇ ಕಟ್ಟುತ್ತಾರೆ. ಸಲಕ ತಿಮ್ಮಣ್ಣನು ಎಷ್ಟುಮಟ್ಟಿಗೆ ತಡಮಾಡಬಲ್ಲ. ಈ ಸಮಯದಲ್ಲಿ ರಾಜಧಾನಿಗೆ ನಾವು ಹೋಗುವುದು ಅಷ್ಟೇನೂ ಕ್ಷೇಮಕರವಲ್ಲ ಎಂದು ಹೇಳಿದನು.

ಸದಾಶಿವರಾಯನು "ಭಾವಯ್ಯಾ! ನೀವೇಕೆ ಇಷ್ಟು ವ್ಯಸನಪಡುತ್ತೀರಿ. ಕುಮಾರ ವೆಂಕಟಾದ್ರಿಗೆ ಪಟ್ಟಾಭಿಷೇಕವಾಗಲಿ ನಾವೂ ಸಹಕರಿಸೋಣ. ರಾಜಧಾನಿಯಲ್ಲಿ ನನಗೆ ಬೇಕಾದಷ್ಟು ಬೆಂಬಲವಿದೆ ನೀವೂ ಬಂದುಬಿಟ್ಟರೆ ತಿರುಮಲ ಸಹೋದರರನ್ನು ಬಲಾತ್ಕಾರವಾಗಿಯೇ ಓಡಿಸಿಬಿಡಬಹುದು" ಎಂದನು.

ಸದಾಶಿವರಾಯ! ನಿನ್ನ ಮಾತುಗಳೊಂದೂ ನನಗೆ ಅರ್ಥವಾಗುವುದಿಲ್ಲ. ನಾನು ಮೊದಲಿನಿಂದಲೂ ನಿನಗೆ ಪಟ್ಟಕಟ್ಟಿಸಬೇಕೆಂದು ಆಲೋಚನೆ ಮಾಡಿಕೊಂಡಿದ್ದೆ. ನನ್ನ ಸೋದರನೊಂದಿಗೆ ಅಂದೇ ಹೇಳಿದ್ದೆ. ಸಮಯವನ್ನು ನಿರೀಕ್ಷೆಮಾಡುತ್ತಿದ್ದೆ. ಇಷ್ಟು ಬೇಗ ಅಚ್ಯುತರಾಯನ ಮರಣವು ಸಂಭವಿಸುವುದೆಂದು ನಾನು ಸರ್ವಥಾ ಭಾವಿಸಿರಲಿಲ್ಲ. ಪರಿಸ್ಥಿತಿಯು ಹೀಗೆ ವ್ಯತಿರಿಕ್ತವಾಗಿದೆಯೆಂದು ನಾನು ಚಿಂತಿಸುತ್ತಿದ್ದೇನೆ.

ಸದಾಶಿವರಾಯನು ನಕ್ಕನು. ರಾಯರವರೇ ನಾನು ವಿಜಯನಗರದ ಸಿಂಹಾಸನಾರೋಹಣ ಮಾಡುವುದಿಲ್ಲವೆಂದು ಸ್ಥಿರಸಂಕಲ್ಪ ಮಾಡಿಕೊಂಡಿದ್ದೇನೆ. ನಿಮ್ಮಂತೆ ನಾನೂ ಅದನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡಿದ್ದೆ. ಕುಮಾರ ವೆಂಕಟಾದ್ರಿಗೇ ಪಟ್ಟವಾಗಲಿ. ರಾಜ್ಯಭಾರವು ನಡೆಯಲಿ. ನೀವು ಬಂದು ಎಲ್ಲವನ್ನೂ ವ್ಯವಸ್ಥೆಗೊಳಿಸಿರಿ. ರಾಣಿಯವರಂತೆ ನಾನೂ ನಿಮ್ಮನ್ನು ಪ್ರಾರ್ಥಿಸುತ್ತೇನೆ ಎಂದು ಹೇಳಿದನು.

ಆ ದಿನವೇ ಅವರು ಚಂದ್ರಗಿರಿಗೆ ಪ್ರಯಾಣಮಾಡಿದರು.

# ೨೦

ವಿಜಯನಗರದ ರಾಜಧಾನಿಯಲ್ಲಿ ಎಲ್ಲೆಲ್ಲಿಯೂ ಗಲಿಬಿಲಿ. ಅರಮನೆ ಯಲ್ಲಿ ಸಂತೋಷ ಸಂಭ್ರಮಗಳಿಲ್ಲದಿದ್ದರೂ ಮುಖ್ಯ ಮುಖ್ಯರಾದವರಿಗೆಲ್ಲಾ ಗಡಿಬಿಡಿ. ತಿರುಮಲ ಸಹೋದರರು ಎಲ್ಲ ಮಂಡಲೇಶ್ವರರಿಗೂ ಸಾಮಂತ ರಿಗೂ ಉನ್ನತಾಧಿಕಾರಿಗಳಿಗೂ ಮಹಾರಾಜ ವೆಂಕಟಾದ್ರಿಯ ಹೆಸರಿನಲ್ಲಿ ಆಜ್ಞಾಪತ್ರಗಳನ್ನು ಬರೆಸಿ ರಾಜಮುದ್ರೆಯನ್ನೊತ್ತಿಸಿ ಸಿದ್ಧಗೊಳಿಸಿದರು. ಆ ದಿನ ರಾತ್ರಿ ಒಂಭತ್ತು ಗಂಟೆಯ ಸಮಯದಲ್ಲಿ ವೆಂಕಟಾದ್ರಿ ಮಹಾರಾಜರು ಸಿಂಹಾಸನದ ಮೇಲೆ ಕುಳಿತು ರಾಜಾಜ್ಞೆಗಳನ್ನು ಅನುಗ್ರಹಿಸುತ್ತಾರೆ ಎಂಬ ವದಂತಿಯು ಎಲ್ಲ ಕಡೆಯೂ ಹರಡಿತು. ತಿರುಮಲ ಸೋದರರು ಅದಕ್ಕೆ ಬೇಕಾದ ಸನ್ನಾಹಗಳನ್ನೆಲ್ಲಾ ಮಾಡಿದರು. ದರಬಾರು ಕೂಡಿತು. ರಾಜ ಸಭೆಯ ರಕ್ಷಕರೆಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಬಹು ಎಚ್ಚರಿಕೆಯಿಂದ ನಿಂತಿದ್ದರು. ಮಹಾರಾಜರ ಅಂಗರಕ್ಷಕ ಪಡೆಯ ಮುಖ್ಯಸ್ಥನಾದ ದೊಡ್ಡಣ್ಣ ದಂಡನಾಯಕನು ದರಬಾರಿನ ದಿರಸುಗಳನ್ನು ಧರಿಸಿಕೊಂಡು ಮಹಾರಾಜಾ ವೆಂಕಟಾದ್ರಿಯ ಹಿಂದೆ ಬರುತ್ತಿದ್ದನು. ದರಬಾರಿನ ಮಹಾ ದ್ವಾರಗಳಲ್ಲಿ ಮಂಗಳ ವಾದ್ಯಗಳು ಭೋರ್ಗರೆಯುತ್ತಿದ್ದವು ವಂದಿ ಮಾಗ ಧರು ಸಾರ್ವಭೌಮರ ಬಿರದುಗಳನ್ನು ಹೊಗಳುತ್ತಾ ಮುಂದೆ ಬಂದರು. ವೆಂಕಟಾದ್ರಿ ಮಹಾರಾಜನು ಗಂಭೀರವಾಗಿ ಅಂತಃಪುರದಿಂದ ಸಭಾ ಭವನಕ್ಕೆ ಪ್ರವೇಶಮಾಡಿದನು. ತಿರುಮಲ ಸೋದರರು ಹಸ್ತಲಾಘ ವನ್ನಿತ್ತು ವೆಂಕಟಾದ್ರಿ ಮಹಾರಾಜನನ್ನು ಗದ್ದುಗೆಯ ಮೇಲೇರಿಸಿ ಸಿಂಹಾ ಸನದ ಮೇಲೆ ಕುಳ್ಳಿರಿಸಿದರು ದರಬಾರಿನ ಸಾಮಾನ್ಯ ಕಾರ್ಯಕಲಾಪಗಳು ಪೂರೈಸುತ್ತಲೇ ಪೆದ್ದತಿರುಮಲರಾಯನು ಅರಮನೆಯ ಖಾಸ್‌ಮುತ್ಸದ್ದಿಯು ಆಜ್ಞಾಪತ್ರಗಳನ್ನು ತೆಗೆದುಕೊಂಡು ಬರಲಿ ಎಂದು ಅಪ್ಪಣೆ ಮಾಡಿದನು.

ರಾಜಭಟರು, ಅತ್ತಕಡೆಗೆ ನೋಡಿದರು. ಖಾಸ್ ಮುತ್ಸದ್ದಿಯು ಅಲ್ಲಿರ ಲಿಲ್ಲ. ಸಭಾಮಂದಿರದಲ್ಲೆಲ್ಲಿಯೂ ಅವನು ಕಂಡುಬರಲಿಲ್ಲ. ತಿರುಮಲ ರಾಯರಿಗೆ ಏನೋ ಅಚಾತುರ್ಯವು ನಡೆದಿದೆ ಎಂಬ ಸಂದೇಹವು ಬಂದಿತು. ಆವರು ಸಿಂಹಾಸನದ ಸಮೀಪಕ್ಕೆ ಬಂದು ಮಹಾರಾಜರು ಸಿಂಹಾಸನ ದಿಂದೆದ್ದು ಅಂತಃಪುರದೊಳಗೆ ಬಿಜಯಮಾಡಬಹುದು ಎಂದು ಹೇಳಿದರು. ಮಹಾರಾಜರು ಸಿಂಹಾಸನದಿಂದ ಎದ್ದೇಳುವ ಸಮಯಕ್ಕೆ ದರಬಾರಿನ ಹೊರಗಡೆ ಸೈನ್ಯದ ಗಲಿಬಿಲಿಯ ಸದ್ದು ಕೇಳಿಸಿತು. ವೆಂಕಟಾದ್ರಿ ಮಹಾ ರಾಜನು ಗದ್ದುಗೆಯಿಂದಿಳಿಯುವಾಗ ದರಬಾರಿನಲ್ಲೆಲ್ಲಾ ಗಡಿಬಿಡಿಯಾಯಿತು. ದೀಪಗಳು ಆರಿಹೋದವು ಸಲಕ ತಿಮ್ಮಣ್ಣನು ಕತ್ತಿಯನ್ನು ಬೀಸಿ ಮಹಾ ರಾಜರ ತಲೆಯನ್ನು ಕತ್ತರಿಸಿ ಕೈಯಲ್ಲಿ ಹಿಡಿದುಕೊಂಡನು. ದೊಡ್ಡಣ್ಣ ದಂಡನಾಯಕನು ಪೆದ್ದ ತಿರುಮಲನನ್ನು ಕಡಿದುಹಾಕಿದನು. ರಾಜಭಟರು ಚಿನ್ನತಿರುಮಲನನ್ನು ಬಂಧಿಸಿ ದರದರನೆ ಎಳೆದುಕೊಂಡುಹೋದರು.

ಮಹಾರಾಜರ ವಧೆಯಾಯಿತು ಎಂದು ಅಂಗರಕ್ಷಕರು ಕೂಗಿ ಕೊಂಡರು. ಸಭೆಯೆಲ್ಲವೂ ಅಲ್ಲಕಲ್ಲೋಲವಾಯಿತು ದರಬಾರಿಗಳು ಪ್ರಾಣ ವನ್ನು ಉಳಿಸಿಕೊಳ್ಳುವ ಆತುರದಿಂದ ಓಡಿಹೋದರು. ಅನೇಕರ ತಲೆಗಳು ಸಭಾಭವನದಲ್ಲಿಯೇ ಉರುಳಿಹೋದವು. ಮಹಾದ್ವಾರದಲ್ಲಿದ್ದ ಮಶಾಲ್ತಿಗಳು ದೀವಿಟಿಕೆಗಳನ್ನು ಹಿಡಿದುಕೊಂಡು, ಸಿಂಹಾಸನದ ಎಡೆಗೆ ಓಡಿಬಂದರು. ಸಲಕ ತಿಮ್ಮಣ್ಣನು ನಿಂತಲ್ಲಿಯೇ ದೃಢವಾಗಿ ನಿಂತಿದ್ದನು ಒಂದು ಕೈಯಲ್ಲಿ ರಕ್ತಸಿಕ್ತವಾದ ಖಡ್ಗ ಮತ್ತೊಂದು ಕೈಯಲ್ಲಿ ವೆಂಕಟಾದ್ರಿ ಮಹಾರಾಜನ ತಲೆ. ಅವನು ನಿರ್ಭಯವಾಗಿ ವಿಕಟಾಟ್ಟಹಾಸ ಮಾಡಿದನು. ಸಭಾ ಸಂರಕ್ಷಕ ಭಟರೆಲ್ಲರೂ ಸಲಕ ತಿಮ್ಮಣ್ಣನ ಕಡೆಯವರೇ ಮಹಾದ್ವಾರದಲ್ಲಿ ಶಸ್ತ್ರಪಾಣಿಗಳಾಗಿ ತಿಮ್ಮಣ್ಣನ ಭಟರು ನಿಂತು ಯಾರೂ ಒಳಗೆ ಬಾರದಂತೆ ಒಳನುಗ್ಗುವವರನ್ನು ಕತ್ತರಿಸಿ ಕೆಡವುತ್ತಿದ್ದರು. ಆ ರಾತ್ರಿ ನಗರದಲ್ಲೆಲ್ಲಾ ಮೃತ್ಯು ತಾಂಡವವಾಡುತ್ತಿದ್ದವು. ಸೈನಿಕರ ಕೋಲಾಹಲ. ಅರಮನೆಯ ಸೇವಕರ ಆರ್ತನಾದ ಸಭೆಯಲ್ಲೆಲ್ಲಾ ರಕ್ತದ ಕೋಡಿಯು ಹರಿಯಿತು. ಹೆಣಗಳು ಬಿದ್ದಿದ್ದವು. ನಗರದ ವೀಥಿಗಳಲ್ಲೆಲ್ಲಾ ಹಾಹಾಕಾರ. ರಕ್ತಪಾತ ಅಸಂಖ್ಯ ಕೊಲೆಗಳು. ಸಲಕ ತಿಮ್ಮಣ್ಣನು ವೆಂಕಟಾದ್ರಿ ಮಹಾರಾಜನ

ತಲೆಯನ್ನು ಬಿಸುಟು ದೊಡ್ಡಣ್ಣ ದಂಡನಾಯಕನ ಕಡೆಗೆ ತಿರುಗಿ ನಾವಿಬ್ಬರೂ ಈ ಸಮಯದಲ್ಲಿ ಎದೆಗೊಟ್ಟು ನಿಲ್ಲಬೇಕು. ಎಂಥಾ ಪ್ರತಿಭಟನೆಯು ಬಂದರೂ ನಾವು ಎದುರಿಸಬೇಕು. ಅರಮನೆಯ ರಕ್ಷಣೆಯು ನಿನಗೆ ಸೇರಿದ್ದು. ರಾಜಧಾನಿಯ ವಿಷಯವನ್ನು ನಾನು ನೋಡಿಕೊಳ್ಳುತ್ತೇನೆ ಎಂದು ಹೇಳಿ ಸಭಾಭವನದಿಂದ ಹೊರಟುಹೋದನು.

ಮರುದಿನ ಬೆಳಕು ಹರಿಯುವುದರೊಳಗೆ ರಾಣಿಯವರ ಅರಮನೆಗೆ ಸಲಕ ತಿಮ್ಮಣ್ಣನು ಕಟ್ಟುಕಾವಲು ಹಾಕಿದನು. ಎಲ್ಲ ಕಡೆಯೂ ಸೈನಿಕರ ಕಾವಲು ಅವರವರ ಮನೆಗಳನ್ನು ಬಿಟ್ಟು ಯಾರೂ ಹೊರಗೆ ಹೊರಡುವಂತಿಲ್ಲ. ಪೂಜಾರಿಗಳು ದೇವಾಲಯಗಳನ್ನು ಬಿಟ್ಟು ಹೊರಡಕೂಡದು ಎಂದು ಅಪ್ಪಣೆಯಾಯಿತು ಸಲಕ ತಿಮ್ಮಣ್ಣನು ಸೇನಾಧಿಪತಿಗಳನ್ನು ಕರೆಸಿ ಯಥೇಚ್ಛ ಧನಕನಕಗಳನ್ನಿತ್ತು ನೀವು ನನ್ನ ಆಜ್ಞೆಯಂತೆ ನಡೆಯಬೇಕು ಎಂದು ಅಪ್ಪಣೆಮಾಡಿದನು.

ದೊಡ್ಡಣ್ಣ ದಂಡನಾಯಕನು, ತನ್ನ ಮನೆಗೆ ಹೋಗಿ ಸೇರಿಕೊಂಡನು. ಬೆಳಗಿನ ಝಾವದಲ್ಲಿಯೇ ಕನ್ನಾಂಬೆಯು ಬಂದು ದಂಡನಾಯಕನನ್ನು ಹೊಡೆದೆಬ್ಬಿಸಿದಳು ಏಳು ಮಲಗಿರಬೇಡ ಬಹಳ ಕೆಲಸವಿದೆ. ಪ್ರಾಣಾಪಾಯವು ಸಂಭವಿಸಿದರೂ ಸಂಭವಿಸಬಹುದು ಹೊರಡು ಎಂದು ಬಲಾತ್ಕಾರಮಾಡಿ ದಂಡನಾಯಕನನ್ನು ಸೆಳೆದುಕೊಂಡು ಹೋದಳು. ದೊಡ್ಡಣ್ಣನು ಏನು ಸಮಾಚಾರ ಹೇಳು ಕನ್ನಾಂಬೇ ಎಂದು ಗಾಬರಿಯಿಂದ ಕೇಳಿದನು.

ಕನ್ನಾಂಬೆಯು ಮಹಾರಾಣಿಯವರ ಆಜ್ಞೆಯಾಗಿದೆ. ನನ್ನ ಜೊತೆಯಲ್ಲಿ ಬಾ! ಎಲ್ಲವನ್ನು ಹೇಳುತ್ತೇನೆ. ಇಲ್ಲಿ ಮಾತನಾಡುವುದಕ್ಕೆ ಎಳ್ಳಷ್ಟೂ ಸಾವಕಾಶವಿಲ್ಲ ಎಂದು ಹೇಳಿ ದಂಡನಾಯಕನನ್ನು ಕರೆದುಕೊಂಡು ದಿಡ್ಡಿಯ ಬಾಗಿಲಿನಿಂದ ನಿಷ್ಕ್ರಮಣಮಾಡಿದಳು. ಕನ್ನಾಂಬೆಯು ದೊಡ್ಡಣ್ಣನನ್ನು ತುಂಗಾತೀರದಲ್ಲಿರುವ ಸಂನ್ಯಾಸಿ ದಿಬ್ಬದ ಮೇಲೆ ಕರೆದುಕೊಂಡು ಹೋದಳು. ಅರುಣೋದಯವಾಗಿತ್ತು ಸೂರ್ಯನಿನ್ನೂ ಉದಯಿಸಿರಲಿಲ್ಲ. ಆದರೆ ಅರುಣೋದಯ ಪ್ರಭೆಯು ನದಿಯ ಮೇಲೆಯೂ ಭೂಮಿಯ ಮೇಲೆಯೂ ಬಿದ್ದಿತ್ತು. ಕನ್ನಾಂಬೆಯು ದೊಡ್ಡಣ್ಣನ ಕೈಹಿಡಿದುಕೊಂಡು ನೋಡು ದೊಡ್ಡಣ್ಣಾ ರಾಜಪುತ್ರನಾದ ತಿರುಮಲರಾಯನನ್ನು ತಿಮ್ಮಣ್ಣ

ದಂಡನಾಯಕನು ವಧೆಮಾಡಿದ ದಿನವೂ ಇದೇ ದಿಬ್ಬದ ಮೇಲೆ ತಿಮ್ಮಣ್ಣನೂ ನಾನೂ ಸೇರಿದ್ದೆವು. ಅಂದು ನಾವು ಪತಿಪತ್ನಿಯರು. ಇಂದು ನಿನ್ನನ್ನು ಕರೆತಂದಿದ್ದೇನೆ. ನಾವಿಬ್ಬರೂ ಸೋದರಸೋದರಿಯರು. ಸಲಕ ತಿಮ್ಮಣ್ಣನಿಗೆ ಪ್ರತೀಕಾರ ಮಾಡಲು ನಾನು ಪ್ರಮಾಣ ಮಾಡಿಕೊಟ್ಟದ್ದೇನೆ. ರಾಣಿಯವರ ಆಜ್ಞೆಯಾಗಿದೆ. ನೀನು ರಾತ್ರಿ ಪೆದ್ದ ತಿರುಮಲರಾಯನನ್ನು ದರಬಾರಿನಲ್ಲಿ ಕಡಿದು ಹಾಕಿದೆ ಆ ಸಮಯದಲ್ಲಿ ಮಹಡಿಯ ಮೇಲಿದ್ದ ನಾನು ನಿನ್ನ ಮೇಲೆಯೇ ಕಣ್ಣಿಟ್ಟದ್ದೆ. ನೀನು ಸಲಕ ತಿಮ್ಮಣ್ಣನ ಕಡೆಗೆ ಹೋಗುತ್ತೀಯೋ ನಮ್ಮ ಕಡೆಗೆ ಬರುತ್ತೀಯೋ ನಿರ್ಧಾರವಾಗಿ ಹೇಳು. ಯೋಚನೆಗೆ ಅವಕಾಶವಿಲ್ಲ ತಕ್ಷಣ ಉತ್ತರ ಕೊಡು ಎಂದು ಹೇಳಿದಳು.

ದೊಡ್ಡಣ್ಣನು ತಬ್ಬಿಬ್ಬಾದನು ಕನ್ನಾಂಬೆ ನಾನು ನಿದ್ರೆಯಲ್ಲಿದ್ದೇನೋ ಎಚ್ಚತ್ತಿದ್ದೇನೆಯೋ ಸಂದೇಹವಾಗಿದೆ. ನೀನು ಹೇಳುವುದೊಂದೂ ನನಗೆ ಅರ್ಥವಾಗುತ್ತಿಲ್ಲ ಸಲಕ ತಿಮ್ಮಣ್ಣನು ಅಳಿಯ ರಾಮರಾಯರ ಕಡೆಯವನು. ರಾಮರಾಯರ ಭೃತ್ಯ. ಎಂದು ತಿರುಮಲಸೋದರರ ಮುಂದೆಯೇ ಹೇಳಿದ್ದಾನೆ. ರಾಣಿಯವರು ಯಾರ ಕಡೆ ? ರಾಮರಾಯರ ಕಡೆಯಲ್ಲವೋ ಸದಾಶಿವರಾಯರ ಕಡೆಯಲ್ಲವೋ ಅದನ್ನು ಮೊದಲು ಹೇಳು ಎಂದನು.

ಕನ್ನಾಂಬೆಯು ಗಹಗಹಿಸಿ ನಕ್ಕಳು. ಮೂರ್ಖ ನೀನು ನಿದ್ದೆಯಲ್ಲಿಯೂ ಇಲ್ಲ. ಜಾಗ್ರದವಸ್ಥೆಯಲ್ಲಿಯೂ ಇಲ್ಲ. ಮೋಹಾಂಧನಾಗಿದ್ದೀಯೆ. ಭ್ರಾಂತಿಯಲ್ಲಿದ್ದೀಯೆ. ಸಲಕ ತಿಮ್ಮನು ರಾಮರಾಯರ ಕಡೆಯವನಲ್ಲ. ಅವನು ಸೋಗುಹಾಕಿ ನಿಮ್ಮನ್ನೆಲ್ಲಾ ವಶಪಡಿಸಿಕೊಂಡಿದ್ದಾನೆ. ಮೋಸ ಮಾಡಿದ್ದಾನೆ. ರಾಣಿಯವರಿಬ್ಬರನ್ನೂ ಬಂಧನದಲ್ಲಿಟ್ಟದ್ದಾನೆ. ಅಚ್ಯುತರಾಯರ ಪಟ್ಟಮಹಿಷಿ ವರದಾಂಬಿಕೆಯು ಸಲಕ ತಿಮ್ಮನೆದುರಿನಲ್ಲಿಯೇ ವಿಷಪಾನ ಮಾಡಿ ಪ್ರಾಣಗಳನ್ನು ನೀಗಿದಳು. ರಾಮರಾಯನಿಗೆ ಈ ಕೋಟೆಯೊಳಗೆ ಪ್ರವೇಶಮಾಡುವ ಅಧಿಕಾರವೆಲ್ಲಿದೆ. ರಾತ್ರಿ ಸಲಕ ತಿಮ್ಮನು ರಾಣಿಯವರ ಮುಂದೆ ಎದೆತಟ್ಟಿ ಆರ್ಭಟಿಸಿದನು. ವಿಜಯನಗರದ ರಾಜ್ಯಕ್ಕೆ ಇಂದಿನಿಂದ ನಾನೇ ರಾಜನೆಂದು ಹೇಳಿದನು ರಾಣಿಯವರಿಬ್ಬರೂ ನಡುಗಿ ಭೂಮಿಯ ಮೇಲೆ ಬಿದ್ದುಹೋದರು ಅವರು ಬದುಕುತ್ತಾರೋ ಸಾಯುತ್ತಾರೋ ನಾನರಿಯೆ. ಈ ಘಳಿಗೆಯಲ್ಲಿ ಸಲಕ ತಿಮ್ಮನೇ ವಿಜಯನಗರದ

ರಾಜಾಧಿರಾಜ. ನೀನು ಅವನ ಜೊತೆಗೆ ಹೋಗುವುದಾದರೆ ಹೋಗು. ರಾಣಿಯವರ ಇಷ್ಟವನ್ನು ನೆರವೇರಿಸುವುದಾದರೆ, ನನ್ನ ಜೊತೆಯಲ್ಲಿ ಬಾ. ನನಗೆ ನಿನ್ನ ಸಹಾಯದ ಅಗತ್ಯವಿಲ್ಲ. ನಿನ್ನನ್ನು ರಕ್ಷಿಸುವುದಕ್ಕಾಗಿಯೇ ನಾನು ಕರೆತಂದಿದ್ದೇನೆ. ಸಲಕ ತಿಮ್ಮನು ನಿನ್ನನ್ನು ಒಂದು ದಿನವೂ ಜೀವಿಸಲು ಬಿಡುವುದಿಲ್ಲ" ಎಂದಳು.

ದಂಡನಾಯಕನ ಮುಖವು ಬಾಡಿಹೋಯಿತು. ಅವನು ದೈನ್ಯ ಸ್ವರದಿಂದ ಕನ್ನಾಂಬೆ! ಎಲ್ಲಿಗೆ ಹೋಗಬೇಕು. ನಮಗೆಲ್ಲಿ ಸ್ಥಳವಿದೆ ಎಂದು ಕೇಳಿದನು.

"ಚಂದ್ರಗಿರಿಗೆ ಹೋಗಬೇಕು. ರಾಮರಾಯರೆಡೆಗೆ ಹೋಗಬೇಕು. ಸದಾಶಿವರಾಯನನ್ನು ಕರೆತರಬೇಕು.

ಅವರಿಬ್ಬರೂ ಚಂಪ್ರಗಿರಿಯ ಕಡೆಗೆ ಪ್ರಯಾಣಮಾಡಿದರು. ಕನ್ನಾಂಬೆಯು ದೊಡ್ಡಣ್ಣನೂ ಚಂದ್ರಗಿರಿಗೆ ಹೋಗುವ ಮಾರ್ಗದಲ್ಲಿ ಪೂರ್ವ ವೃತ್ತಾಂತಗಳನ್ನು ಮಾತನಾಡುತ್ತಾ ಹೋಗಿ ಸೇರಿದರು. ಚಂದ್ರಗಿರಿಯನ್ನು ಸೇರುವ ಹೊತ್ತಿಗೆ ಅವರಿಬ್ಬರೂ ನಿಜವಾದ ಬಂಧುಭಗಿನಿಯರಂತೆ ಆಗಿದ್ದರು ದೊಡ್ಡಣ್ಣನು ಧೈರ್ಯತಾಳಿ "ಕನ್ನಾಂಬೆ! ನಿನ್ನ ರೂಪ ಯೌವನಗಳು ಅರಣ್ಯದ ಬೆಳದಿಂಗಳಿನಂತೆ ಹೋಗಬೇಕೆ? ನೀನೇಕೆ ಸಂನ್ಯಾಸಿನಿಯಂತಿರುವೆ?" ಎಂದು ಪ್ರಶ್ನೆಮಾಡಿದನು.

"ದೊಡ್ಡಣ್ಣಾ! ನನ್ನನ್ನು ಮದುವೆಯಾದವರು ಮರಣಹೊಂದುವರೆಂದೂ ನಾನಿರುವ ಮನೆಗೆ ಅಮಂಗಳ ಪರಂಪರೆಗಳು ಸಂಘಟಿಸುವವೆಂದೂ ಹಿಂದೆಯೇ ಜೋತಿಷ್ಕರು ಹೇಳಿದ್ದರು. ಅದು ನನಗೆ ಮೊದಲೇ ತಿಳಿದಿತ್ತು. ನಾನು ತಿಮ್ಮಣ್ಣ ದಂಡನಾಯಕನಿಗೆ ಈ ವಿಷಯವನ್ನು ಸೂಕ್ಷ್ಮವಾಗಿ ಹೇಳಿದ್ದೆ. ನಾವಿಬ್ಬರೂ ಅದನ್ನು ನಂಬಿರಲಿಲ್ಲ. ನಿನ್ನಂಥಾ ಸೌಭಾಗ್ಯವತಿ ಇರುವೆಡೆಯಲ್ಲಿ ಅಮಂಗಳವೆಂದರೇನು ಯಾರೋ ನಿನ್ನ ಸೌಭಾಗ್ಯದ ಮೇಲೆ ಕಲ್ಲೆಳೆಯುವುದಕ್ಕಾಗಿ ಮಾಡಿರುವ ತಂತ್ರವಿದು ಎಂದು ಹೇಳಿದನು. ಅದರ ಅಂತ್ಯ ಪರಿಣಾಮವನ್ನು ನಾನು ಪ್ರತ್ಯಕ್ಷವಾಗಿ ನೋಡಿದೆ. ತಿಮ್ಮಣ್ಣನು ಅಕಾಲಮೃತ್ಯುವಿಗೆ ತುತ್ತಾದುದು ಮಾತ್ರವಲ್ಲ. ಸಾಳ್ವ ತಿಮ್ಮರಸರ ವಂಶವೇ ನಾಶವಾಗಿ ಹೋಯಿತು. ನೋಡು ರಾಣಿಯವರ ಅರಮನೆಗೆ

ಎಷ್ಟು ಅನಿಷ್ಟಗಳು ತಟ್ಟಿದವು. ಇನ್ನು ಏನೇನು ಅವಗಡಗಳು ಸಂಭವಿಸುವುವೋ ಯಾರು ಬಲ್ಲರು ? ಇದನ್ನೆಲ್ಲಾ ಯೋಚನೆ ಮಾಡಿ ನಾನು ಸಂನ್ಯಾಸಿನಿಯಾಗಿದ್ದೇನೆ, ಎಂದು ಹೇಳಿದಳು.

" ಸಂನ್ಯಾಸಿನಿ ಕನ್ನಾಂಬೇ ನೀನು ಸಂನ್ಯಾಸಿನಿಯಾಗಿದ್ದರೆ ಈ ರಾಜಕಾರ್ಯಗಳು ನಿನಗೇಕೆ ? ಎಲ್ಲ ಸಂನ್ಯಾಸಿನಿಗಳಂತೆ ನೀನೇಕೆ ಕಾವಿಯ ವಸ್ತ್ರಗಳನ್ನು ಧರಿಸಿಲ್ಲ."

ಕನ್ನಾಂಬೆಯು ನಗುತ್ತಾ " ದೊಡ್ಡಣ್ಣ ! ನನ್ನ ಸಂನ್ಯಾಸ ಧರ್ಮದಲ್ಲಿ ನಿನಗೆ ನಂಬುಗೆಯಿಲ್ಲವೇ. ಸಂನ್ಯಾಸಿನಿಯಾಗಲೀ ಪರಮಹಂಸಗಳಾಗಲೀ ಸಾಯುವವರೆಗೆ ನಮ್ಮ ಕಣ್ಣುಮುಂದೆ ನಡೆಯುವ ಅನ್ಯಾಯ ಅಧರ್ಮಗಳನ್ನು ಎದುರಿಸಬೇಕು. ನಿಜವಾಗಿಯೂ ನಾನು ಸಂನ್ಯಾಸಿನಿ " ಎಂದು ಹೇಳಿದಳು.

ಚಂದ್ರಗಿರಿಯಲ್ಲಿ ರಾಮರಾಯನು ದೊಡ್ಡಣ್ಣನನ್ನು ಕನ್ನಾಂಬೆಯನ್ನು ನೋಡಿ ಗಾಬರಿಗೊಂಡನು ಕನ್ನಾಂಬೆಯು, ರಾಜಧಾನಿಯಲ್ಲಿ ನಡೆದ ದುರಂತ ಕಥೆಗಳನ್ನೆಲ್ಲಾ ವರ್ಣಿಸಿದಳು ರಾಮರಾಯನು " ಆ ವೆಂಕಟಾದ್ರಿಯನ್ನು ಯಾರು ಕೈಯಾರ ಕೊಂದರು " ಎಂದನು

" ಸಲಕ ತಿಮ್ಮಣ್ಣನು ವೆಂಕಟಾದ್ರಿಯನ್ನು ಕೊಂದನು."

" ಶಿವಶಿವ ! ಆ ವಿಜಯನಗರದ ರಾಜಮನೆತನಕ್ಕೆ ಎಂತಹ ಸಂಕಟಗಳು ಮೇಲೆ ಮೇಲೆ ಸಂಭವಿಸುತ್ತಿವೆ. ಪೆದ್ದತಿರುಮಲನನ್ನಾರು ಕೊಂದರು ?"

ಕನ್ನಾಂಬೆಯು ತಲೆಯೆತ್ತಿ ದೊಡ್ಡಣ್ಣನ ಮುಖವನ್ನು ನೋಡಿದಳು. ಅವನು ತಲೆಬಾಗಿಸಿಕೊಂಡು ನಿಂತಿದ್ದನು " ಈ ದೊಡ್ಡಣ್ಣನು ಪೆದ್ದತಿರುಮಲರಾಯನನ್ನು ಕೊಂದುಹಾಕಿದನೇ ? " ಹೌದು ! ಈ ದೊಡ್ಡಣ್ಣನೇ ರಾಜಸಭಾ ಭವನದಲ್ಲಿ ತಿರುಮಲನನ್ನು ಹೊಡೆದುಹಾಕಿದನು.

" ಆ ಸಲಕ ತಿಮ್ಮಣ್ಣನಿಗೆ ಅಷ್ಟೊಂದು ಬಲವೆಲ್ಲಿಬಂತು. ಅವನು ಹೇಗೆ ಅಷ್ಟು ಜನಬಲವನ್ನು ಕಟ್ಟಿದನು ? ಹೇಗೆ ರಾಜಧಾನಿಯನ್ನೆಲ್ಲಾ ವಶಪಡಿಸಿಕೊಂಡನು.

" ಮಹಾಪ್ರಭುಗಳೇ ! ಕ್ಷಮಿಸಬೇಕು ಅವನು ತಮ್ಮ ಭೃತ್ಯನೆಂದು ಹೇಳಿಕೊಳ್ಳುತ್ತಿದ್ದನು. ತಮ್ಮ ಹೆಸರಿನಿಂದಲೇ ವೆಂಕಟಾದ್ರಿಯ

ಪಟ್ಟಾಭಿಷೇಕವನ್ನು ನಿರೋಧಿಸಿದನು. ನಾನೂ ಕೂಡಾ ಅದೇ ಭಾವನೆಯಿಂದ ಅವನಲ್ಲಿ ಗೌರವವನ್ನಿಟ್ಟಿದ್ದೆ. ಅವನ ಆಜ್ಞೆಯಂತೆಯೇ ಪೆದ್ದತಿರುಮಲನನ್ನು ಹೊಡೆದುಹಾಕಿದ. ಬಹುಮಂದಿ ಸರದಾರರು ಈಗಲೂ ಅವನು ತಮ್ಮ ಕಡೆಯವನೆಂದೇ ಭಾವಿಸುತ್ತಾರೆ. ಈ ಕನ್ನಾಂಬೆಯು ಮೂರು ಝಾವದ ರಾತ್ರಿಯಲ್ಲಿ ನನ್ನನ್ನೆಬ್ಬಿಸಿ ಕರೆತಂದಳು. ಸಲಕ ತಿಮ್ಮನು ರಾಮರಾಯರ ಹೆಸರು ಹೇಳಿ ಎಲ್ಲರನ್ನೂ ಮೋಸಮಾಡಿದ. ಅವನು ರಾಮರಾಯರಿಗೂ ವಿರೋಧಿಯೆ. ಬೆಳಕು ಹರಿಯುವುದರೊಳಗೆ ನಿನ್ನನ್ನು ಕೊಲೆಮಾಡುತ್ತಾನೆ ಎಂದು ಹೇಳಿ ನನ್ನನ್ನಿಲ್ಲಿಗೆ ಕರೆತಂದಳು."

ರಾಮರಾಯನು ಕನ್ನಾಂಬೆಯ ಕಡೆಗೆ ತಿರುಗಿ ನೋಡಿದನು. ಕನ್ನಾಂಬೆಯು ಹುಬ್ಬುಗಂಟಿಕ್ಕಿ ರಾಮರಾಯರೇ ನಿಮಗೆ ನನ್ನ ಮಾತುಗಳಲ್ಲಿ ಸಂದೇಹವೇನು ? ಆ ಸಲಕ ತಿಮ್ಮನು ನಿಮ್ಮ ಕಡೆಯವನೆಂದು ನೀವು ಭಾವಿಸುತ್ತೀರೇನು ? ಅವನು ನಿಮ್ಮ ಕಡೆಯವನಾದರೆ, ನೀವು ನಾಚಿಕೊಳ್ಳಬೇಕು ನಿಮಗಾಗಿರುವ ಅಪಮಾನಕ್ಕಾಗಿ ಆತ್ಮಹತ್ಯ ಮಾಡಿಕೊಳ್ಳಬೇಕು. ರಾತ್ರಿ ರಾಣಿಯವರ ಮುಂದೆ ಬಂದು ನಿಂತು, ರಾಕ್ಷಸನಂತೆ ಎದೆ ತಟ್ಟುತ್ತಾ, ಈ ರಾಜ್ಯಕ್ಕೆ ಇನ್ನುಮುಂದೆ ನಾನೇ ಮಹಾರಾಜ. ನೀವು ಬಂಧನದಲ್ಲಿರಬೇಕು ಎಂದು ಹೇಳಿ ಅವರ ಅರಮನೆಗೆ ಕಟ್ಟುಕಾವಲು ಹಾಕಿದ್ದಾನೆ. ಇದು ನಿಮ್ಮ ಭೃತ್ಯನ ಲಕ್ಷಣವೇನು ಅದಕ್ಕಿಂತಲೂ ಘೋರವಾದ ರಹಸ್ಯವನ್ನು ಹೇಳುತ್ತೇನೆ ಕೇಳಿ ವರದಾಂಬೆಯವರ ಮುಂದೆ ಹೋಗಿ ನಾನೇ ಈ ರಾಜ್ಯಕ್ಕೆಲ್ಲಾ ಒಡೆಯ. ಇನ್ನುಮೇಲೆ ನೀವು ನನ್ನ ರಾಣಿಯಾಗಿದ್ದೀರಿ ಎಂದು ಅಪಮಾನಗೊಳಿಸಿದನು. ಆ ಸಾಧ್ವೀಮಣಿಯು ವಿಷ ತಿಂದು ಸತ್ತುಹೋದಳು ಇದಕ್ಕಿಂತಲೂ ಘೋರ ಅಪಮಾನವು ನಿಮ್ಮರಮನೆಗೆ ಮತ್ತಾವುದಿದೆ. ಇಂದೋ ನಾಳೆಯೋ ಸಲಕ ತಿಮ್ಮ ಮಹಾರಾಜರ ಆಜ್ಞಾಪತ್ರವು ಮಂಡಲೇಶ್ವರರಾದ ನಿಮಗೆ ಬರುತ್ತದೆ. ಅಥವಾ ಅವನ ಕಡೆಯ ಸೇನಾಧಿಪತಿಗಳು ರಾಣಿಯವರನ್ನು ಬಂಧಿಸಿದಂತೆ, ನಿಮ್ಮನ್ನೂ ಬಂಧಿಸಿದರೆ ಆಶ್ಚರ್ಯವೇನೂ ಇಲ್ಲ. ನೀವು ಪಾಮರರಂತೆ ಹಿಂದೆ ಮುಂದೆ ನೋಡುತ್ತಾ ಕೂಡಬೇಡಿರಿ. ಸೈನ್ಯವನ್ನು ತೆಗೆದುಕೊಂಡು ವಿಜಯನಗರಕ್ಕೆ ಹೊರಟುಬನ್ನಿ. ಆ ಸಲಕ ತಿಮ್ಮನನ್ನು ಹಿಡಿದು ವಿಚಾರಣೆಮಾಡಿ ಗಲ್ಲಿ

ಗೇರಿಸಿರಿ. ನಮ್ಮ ರಾಣಿಯವರು ಅದುವರೆಗೂ ಜೀವದಿಂದಿದ್ದರೆ ಅವರನ್ನು ಬಂಧನದಿಂದ ಬಿಡಿಸಿ ಕೃತಾರ್ಥರಾಗಿರಿ. ಈ ಸದಾಶಿವರಾಯನನ್ನು ಜೊತೆಯಲ್ಲಿ ಕರೆದೊಯ್ದು ಇವನಿಗೆ ಪಟ್ಟಕಟ್ಟಿಸಿರಿ. ಆಗ ಆ ರಾಜಕುಲದ ಹೆಣ್ಣನ್ನು ಮದುವೆಯಾಗಿರುವ ಅಳಿಯಂದಿರ ಬಂಧುಕೃತ್ಯವು ಸಾರ್ಥಕವಾಗುತ್ತದೆ. ಇಲ್ಲದಿದ್ದರೆ, ರಾಜಕುಲವೇ ನಾಶವಾಗಿ ಹೋದೀತು? ಎಂದು ಹೇಳಿದಳು.

ರಾಮರಾಯನು ಕನ್ನಾಂಬೆಯನ್ನು ಸಮಾಧಾನಗೊಳಿಸಿ ಅಂತಃಪುರಕ್ಕೆ ಕಳಿಸಿಕೊಟ್ಟನು. ದೊಡ್ಡಣ್ಣ ದಂಡನಾಯಕನನ್ನು ತಿರುಮಲರಾಯನಲ್ಲಿಗೆ ಕಳಿಸಿದನು.

ಮಾರನೆಯ ದಿನ ಚಂದ್ರಗಿರಿಯಲ್ಲಿರುವ ಸೈನ್ಯವನ್ನು ತೆಗೆದುಕೊಂಡು ವಿಜಯನಗರದ ಕಡೆಗೆ ಪ್ರಯಾಣ ಮಾಡಬೇಕೆಂದು ತಿರುಮಲರಾಯನಿಗೆ ಅಪ್ಪಣೆ ಮಾಡಿದನು. ತಾನು ಗುತ್ತಿಗೆ ಹೋಗಿ ಅಲ್ಲಿಂದ ಸೈನ್ಯವನ್ನು ಜೊತೆಗೊಳಿಸಿಕೊಂಡು ಬರುವುದಾಗಿ ಹೇಳಿದನು. ರಾಮರಾಯನ ಜೊತೆಯಲ್ಲಿ ಸದಾಶಿವರಾಯನೂ ಕನ್ನಾಂಬೆಯೂ ಹೊರಟರು ದೊಡ್ಡಣ್ಣ ದಂಡನಾಯಕನು ಅಳಿಯ ತಿರುಮಲರಾಯರ ಸೈನ್ಯದೊಂದಿಗೆ ವಿಜಯನಗರಕ್ಕೆ ಹೊರಟನು.

೨೧

ವಿಜಯನಗರವೆಲ್ಲವೂ ಸಲಕ ತಿಮ್ಮಣ್ಣನ ಕೈವಶವಾಯ್ತು. ಯಾರು ವಿರೋಧಿಗಳೋ ಅವರನ್ನೆಲ್ಲಾ ಕೊಲೆಮಾಡಿಸಿದನು. ಯಾರ ಮೇಲೆ ಅಲ್ಪಸ್ವಲ್ಪ ಸಂದೇಹವಿದೆಯೋ ಅವರನ್ನೆಲ್ಲಾ ಸೆರೆಯಲ್ಲಿಡಿಸಿದನು. ಮಂತ್ರಿಗಳನ್ನೆಲ್ಲಾ ಬಂಧನದಲ್ಲಿಟ್ಟನು. ನಗರವೆಲ್ಲವೂ ಅವನನ್ನು ಕಂಡರೆ, ನಡುಗು ಪಂತಾಯಿತು. ತಿಸ್ನತಿರುಮಲನು ಬಂಧನದಿಂದ ಮುಕ್ತನಾಗಿ ಸಲಕ ತಿಮ್ಮಣ್ಣನಿಗೆ ಶರಣಾಗತನಾಗಿ ಅವನನ್ನನುಸರಿಸಿದನು. ಸಲಕ ತಿಮ್ಮನು ಸೈನಿಕರಿಗೂ ಸೇನಾನಾಯಕರುಗಳಿಗೂ ಯಥೇಷ್ಟ ಹಣಕೊಟ್ಟು ತನ್ನವರನ್ನಾಗಿ ಮಾಡಿಕೊಂಡನು. ಅಷ್ಟರಲ್ಲಿ ಅಳಿಯ ರಾಮರಾಯರೂ ತಿರುಮಲ ರಾಯರೂ ಚಂದ್ರಗಿರಿಯಿಂದ ಪ್ರಚಂಡ ಸೈನ್ಯವನ್ನು ತೆಗೆದುಕೊಂಡು ವಿಜಯನಗರದ ಮೇಲೆ ದಂಡೆತ್ತಿ ಬರುತ್ತಿದ್ದಾರೆಂದು ಸಲಕ ತಿಮ್ಮನಿಗೆ ಗುಪ್ತಚಾರರಿಂದ ತಿಳಿಯಿತು. ಅವನಿಗೆ ಆಶ್ಚರ್ಯವೂ ಭಯವೂ ಹತ್ತಿ ಕೊಂಡಿತು ವಿಜಯನಗರದಲ್ಲಿರುವ ಸೈನ್ಯವೆಲ್ಲವೂ ತನ್ನ ಅಧೀನದಲ್ಲಿದೆ. ಈ ಸೈನ್ಯದೊಂದಿಗೆ ರಾಮರಾಯರ ಸೈನ್ಯವನ್ನು ಎದುರಿಸಬಹುದು. ಆದರೆ ಜನರೆಲ್ಲರೂ ಪ್ರತಿಕೂಲರಾಗಬಹುದು. ಸೈನ್ಯವು ಬಿಗಡಾಯಿಸಬಹುದು. ಇದಕ್ಕೇನು ಮಾಡಬೇಕು ಎಂದು ಚಿಂತಿಸತೊಡಗಿದನು. ಸಲಕ ತಿಮ್ಮನಿಗೆ ತಕ್ಷಣವೇ ಆಲೋಚನೆಯು ಹೊಳೆಯಿತು. ಬಿಜಾಪುರದ ಸುಲ್ತಾನನ ಸಹಾಯವನ್ನು ಪಡೆಯಬೇಕು. ಸುಲ್ತಾನನ ಸೈನ್ಯಗಳು ಸಹಾಯಕ್ಕೆ ಬಂದುಬಿಟ್ಟರೆ, ವಿಜಯನಗರದ ಸೈನ್ಯಗಳು ಯುದ್ಧಮಾಡಲಿ ಮಾಡದಿರಲಿ ರಾಮರಾಯನ ಸೈನ್ಯಗಳು ಸೋತು ಓಡಿಹೋಗುತ್ತವೆ. ಎಂದು ನಿರ್ಧಾರ ಮಾಡಿಕೊಂಡನು. ಬಿಜಾಪುರಕ್ಕೆ ಯಾರನ್ನು ಕಳಿಸಬೇಕು. ಯಾರಾದರೂ ಗಣ್ಯವ್ಯಕ್ತಿಗಳನ್ನು ಕಳಿಸಬೇಕು. ಈ ತಿಸ್ನತಿರುಮಲರಾಯನನ್ನು

ಪರೀಕ್ಷೆ ಮಾಡೋಣ. ಈ ಸಮಯದಲ್ಲಿ ಇವನು ದೂರವಿದ್ದರೆ ಒಳ್ಳೆಯದು. ಎರಡು ಕಾರ್ಯಗಳನ್ನು ಸಾಧಿಸಿದಂತಾಗುತ್ತದೆ. ಎಂದುಕೊಂಡು ತಿನ್ನ ತಿರುಮಲನನ್ನು ಕರೆಕಳುಹಿಸಿ " ನಿಮ್ಮಿಂದ ಮಹತ್ಕಾರ್ಯವಾಗಬೇಕಾಗಿದೆ. ಅಳಿಯ ರಾಮರಾಯರು ನಮ್ಮ ಮೇಲೆ ಯುದ್ಧಕ್ಕೆ ಬರುತ್ತಿದ್ದಾರೆ. ನೀವು ಬಿಜಾಪುರಕ್ಕೆ ಹೋಗಿ ಆದಿಲ್‌ಷಹರ ಸೈನ್ಯವನ್ನು ನಮ್ಮ ಸಹಾಯಕ್ಕೆ ಕರೆತರಬೇಕು. ಅವರೇನು ಹಣ ಕೊಟ್ಟರೆ ಸಹಾಯಕ್ಕೆ ಬರುತ್ತಾರೆ. ಬೇಕಾದಷ್ಟು ಹಣ ಕೊಡೋಣ ಅವರನ್ನು ಕರೆದುಕೊಂಡು ಬನ್ನಿ " ಎಂದು ಹೇಳಿಕಳಿಸಿದನು.

ತಿನ್ನತಿರುಮಲನು ಜಾಗ್ರತೆಯಾಗಿ ಬಿಜಾಪುರಕ್ಕೆ ಹೋಗಿ ಆದಿಲ್ ಷಹರ ಭೇಟಿಮಾಡಿದನು. ವಿಜಯನಗರದ ಸಮಾಚಾರಗಳೆಲ್ಲಾ ಇಬ್ರಾಹಿಂ ಷಹನಿಗೆ ದೂತರಮುಖೇನ ತಿಳಿದಿತು. ತಿನ್ನತಿರುಮಲನು ಬಂದಿರುವುದನ್ನು ನೋಡಿ, ಅವನು ಆಶ್ಚರ್ಯಪಟ್ಟನು. ತಿನ್ನತಿರುಮಲನು ಸುಲ್ತಾನರವರೇ ಅಚ್ಯುತರಾಯರು ಕಾಲವಾದರು ವಿಜಯನಗರವು ಅನಾಯಕವಾಗಿದೆ. ಪ್ರಕೃತ ಸಲಕ ತಿಮ್ಮಣ್ಣನ ವಶದಲ್ಲಿದೆ. ಸೈನ್ಯಾಧಿಕಾರಿಗಳು ರಾಜ್ಯದ ಅಧಿಕಾರಿಗಳು ಅವನ ವಶವರ್ತಿಗಳಾಗಿದ್ದಾರೆ ಅಳಿಯ ರಾಮರಾಯನು ವಿಜಯನಗರವನ್ನು ವಶಪಡಿಸಿಕೊಳ್ಳಲು ದಂಡೆತ್ತಿ ಬರುತ್ತಿದ್ದಾನೆ. ನೀವು ಸೈನ್ಯಸಮೇತವಾಗಿ ಬಂದು ರಾಮರಾಯನನ್ನು ಓಡಿಸಿ ನಮಗೆ ಸಹಾಯಮಾಡಬೇಕು. ಸಲಕ ತಿಮ್ಮಣ್ಣನೂ ನಾನೂ ನಿಮಗೆ ಶರಣಾಗತರಾಗುತ್ತೇವೆ. ವಿಜಯನಗರದ ಭಂಡಾರವೆಲ್ಲವೂ ನಮ್ಮ ಕೈವಶವಾಗಿದೆ. ನೀವು ಅಪೇಕ್ಷಿಸಿದಷ್ಟು ಹಣ ಕೊಡುತ್ತೇವೆ. ಇನ್ನುಮುಂದೆ ವಿಜಯನಗರವು ಯಾವಾಗಲೂ ನಿಮ್ಮ ಅಧೀನದಲ್ಲಿದ್ದಂತೆಯೇ ಭಾವಿಸಬಹುದು ಎಂದು ಹೇಳಿದನು.

ಆದಿಲ್‌ಷಹನು ವಿಜಯನಗರದ ರಾಜವಂಶವು ನಾಶವಾಗಿಹೋಗಿ ಅನಾಯಕವಾಗಿದೆ. ರಾಜ್ಯವೂ ಅರಮನೆಯೂ ಅನಾಮಧೇಯರ ಕೈವಶವಾಗಿದೆ. ಈಗ ಒಳ್ಳೆಯ ಸಮಯವು ಸಿಕ್ಕಿದೆ. ನಾವು ವಿಜಯನಗರವನ್ನೇ ಸ್ವಾಧೀನಪಡಿಸಿಕೊಳ್ಳಬಹುದು ಎಂದು ಭಾವಿಸಿಕೊಂಡು ತಿನ್ನತಿರುಮಲನ ಪ್ರಾರ್ಥನೆಗೆ ಅಂಗೀಕಾರಕೊಟ್ಟನು.

ಇಬ್ರಾಹಿಂಪಹನು ಬಿಜಾಪುರದ ಸೈನ್ಯವನ್ನೆಲ್ಲಾ ಜೊತೆಗೊಳಿಸಿಕೊಂಡು ವಿಜಯನಗರದ ಕಡೆಗೆ, ಹೊರಟುಬಂದನು. ವಿಜಯನಗರಕ್ಕೆ ಮೂರು ಮೈಲಿಗಳ ದೂರದಲ್ಲಿ ಸುಲ್ತಾನನ ಶಿಬಿರವು ಸ್ಥಾಪನೆಯಾಗಿತ್ತು.

ಏಕಕಾಲದಲ್ಲಿ ತಿರುಮಲರಾಯನ ಸೈನ್ಯಗಳೂ ಗುತ್ತಿಯಿಂದ ಬಂದ ರಾಮರಾಯನ ಸೈನ್ಯಗಳೂ ವಿಜಯನಗರಕ್ಕೆ ಆರು ಮೈಲಿಗಳ ದೂರದಲ್ಲಿ ಬಂದು ಬೀಡುಬಿಟ್ಟವು.

ರಾಮರಾಯನ ಸೈನ್ಯಗಳು ಇಬ್ಭಾಗವಾಗಿ ಯುದ್ಧಕ್ಕೆ ಹೊರಟವು. ತಿರುಮಲರಾಯನೂ ದೊಡ್ಡಣ್ಣನೂ ಇಬ್ರಾಹಿಂಪಹನ ಮೇಲೆ ಯುದ್ಧಕ್ಕೆ ಹೊರಟರು. ರಾಮರಾಯನು ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಿ ವಿಜಯನಗರಕ್ಕೆ ಮುತ್ತಿಗೆ ಹಾಕಿದನು.

ಇಬ್ರಾಹಿಂಪಹನಿಗೂ ಅಳಿಯ ತಿರುಮಲರಾಯನಿಗೂ ಏಳು ದಿನಗಳು ಯುದ್ಧವಾಯಿತು. ರಾಮರಾಯನು ವಿಜಯನಗರದ ಕೋಟೆಯ ಬಾಗಿಲುಗಳನ್ನು ಒಡೆದು ರಾಜಧಾನಿಗೆ ನುಗ್ಗಿದನೆಂಬ ಸಮಾಚಾರವು ಇಬ್ರಾಹಿಂಪಹನಿಗೆ ತಿಳಿಯಿತು ಇನ್ನು ಯುದ್ಧಮಾಡುವುದು ಪ್ರಯೋಜನಕಾರಿಯಲ್ಲವೆಂದು ಇಬ್ರಾಹಿಂಪಹನು ಹಿಮ್ಮೆಟ್ಟಿದನು. ತಿರುಮಲರಾಯನು ಅವನನ್ನು ಓಡಿಸಿಕೊಂಡು ಹೋದನು.

ಏಳನೆಯ ದಿನ ರಾಮರಾಯನು ವಿಜಯನಗರದ ಕೋಟೆಯ ಹೆಬ್ಬಾಗಿಲುಗಳನ್ನು ಒಡೆದು ರಾಜಧಾನಿಯನ್ನು ಪ್ರವೇಶಮಾಡಿದನು. ಅವನ ಬಲಭಾಗದಲ್ಲಿ ಕನ್ನಾಂಬೆಯು ಉಕ್ಕಿನ ಕವಚವನ್ನು ತೊಟ್ಟು ಶಿರಸ್ತ್ರಾಣವನ್ನು ಧರಿಸಿ ಒಂದು ಕೈಯಲ್ಲಿ ಕತ್ತಿಯನ್ನೂ ಮತ್ತೊಂದು ಕೈಯಲ್ಲಿ ಗುರಾಣಿಯನ್ನೂ ಧರಿಸಿ ಎದುರಿಗೆ ಬಂದವರನ್ನು ಕತ್ತರಿಸುತ್ತಾ ರಾಮರಾಯನ ಬೆಂಗಾವಲಿನಲ್ಲಿ ಬರುತ್ತಿದ್ದಳು. ಸದಾಶಿವರಾಯನು ವಾಮಪಾರ್ಶ್ವದಲ್ಲಿ ಬರುತ್ತಿದ್ದನು ಸಲಕ ತಿಮ್ಮನು ತನ್ನ ಸಹಾಯಕ್ಕೆ ದೊರೆತ ಸೈನ್ಯವನ್ನೆಲ್ಲಾ ಕಟ್ಟಿಕೊಂಡು ಎದುರಿಗೆ ಬಂದು ರಾಮರಾಯನೊಡನೆ ಯುದ್ಧಮಾಡಿದನು. ಕೋಟೆಯ ಒಳಬಾಗಿಲಿನಲ್ಲಿಯೇ ಯುದ್ಧವಾಯಿತು. ಸಲಕ ತಿಮ್ಮನನ್ನು ರಾಮರಾಯನು ಯುದ್ಧದಲ್ಲಿ ಹೊಡೆದು ಹಾಕಿದನು. ಅವನ ಸೈನ್ಯವೆಲ್ಲವೂ ಚದುರಿಹೋಯಿತು. ರಾಮರಾಯನು ಅರಮನೆಗೆ ಬಂದು ಅರಮನೆಯಲ್ಲಿ

ಒಂದು ಪಿಳ್ಳೆಯೂ ಉಳಿಯದಂತೆ ಎಲ್ಲರನ್ನೂ ಹೊರಗಟ್ಟಿ ತನ್ನ ಸೈನಿಕರನ್ನು ಕಾವಲಿಟ್ಟನು. ರಾಣಿಯವರು ಬಂಧನದಲ್ಲಿದ್ದ ಅರಮನೆಗೆ ಹೋಗಿ ಕಾವಲುಗಾರರನ್ನೆಲ್ಲಾ ಕಡಿದು ಹಾಕಿ ಅಂತಃಪುರದಲ್ಲಿದ್ದ ರಾಣಿಯವರಿಗೆ ಅಭಿವಾದನ ಮಾಡಿದನು. ಕನ್ನಾಂಬೆಯನ್ನು ಅಲ್ಲಿಯೇ ಬಿಟ್ಟು ಸದಾಶಿವ ರಾಯನೊಡನೆ ಹೊರಟು ರಾಜಧಾನಿಯಲ್ಲಿ ಎಲ್ಲೆಲ್ಲಿ ಸಲಕ ತಿಮ್ಮನ ಕಡೆಯವರಿದ್ದಾರೋ ಅಲ್ಲೆಲ್ಲಾ ನುಗ್ಗಿ ಅವರುಗಳನ್ನು ಛಿನ್ನಭಿನ್ನವಾಗಿ ಹೊಡೆದುಹಾಕಿದನು.

ರಾಣಿಯವರು ಕನ್ನಾಂಬೆಯನ್ನು ನೋಡಿ ಆಶ್ಚರ್ಯದಿಂದ ಇದೇನು ಕನ್ನಾಂಬಾ! ಈ ಯೋಧೃವೇಷವೇನು. ಈ ಯುದ್ಧಕವಚ ಉಷ್ಣೀಷ ಗಳೇನು. ಈ ಖಡ್ಗವೇನು. ಇದನ್ನೆಲ್ಲಿ ಕಲಿತೆ ಎಂದು ಪ್ರಶ್ನೆಮಾಡಿದರು.

ಕನ್ನಾಂಬಿಕೆಯು ಮಾತೆಯರೇ ಈ ಯುದ್ಧ ವಿದ್ಯೆಯನ್ನು ತಿಮ್ಮಣ್ಣ ದಂಡನಾಯಕನಿಂದ ಕಲಿತೆ. ತಮಗಾಗಿ ಇದನ್ನು ಸಾರ್ಥಕಪಡಿಸಿದೆ. ಈ ಉಕ್ಕಿನ ಕವಚ. ಈ ಶಿರಸ್ತ್ರಾಣ ಈ ಖಡ್ಗ ಇವು ಮೂರೂ ತಿಮ್ಮಣ್ಣ ದಂಡನಾಯಕನಿಂದ ನನಗೆ ಕೊಡಲ್ಪಟ್ಟ ಮೂರು ರತ್ನಭೂಷಣಗಳು ಎಂದು ಹೇಳಿ ಅಭಿವಾದನ ಮಾಡಿದಳು.

## ಪರಿಸಮಾಪ್ತಿ

ದೊಡ್ಡಣ್ಣ ದಂಡನಾಯಕನು ಇಬ್ರಾಹಿಂಷಹನನ್ನು ಓಡಿಸಿ ಹಿಂತಿರುಗಿ ಬರುವಾಗ ತಿನ್ನತಿರುಮಲರಾಯನ ತಲೆಯನ್ನು ಕತ್ತರಿಸಿ ಕೈಲಿ ಹಿಡಿದು ಕೊಂಡು ಬಂದು ರಾಮರಾಯರ ಚರಣತಲದಲ್ಲಿ ಒಪ್ಪಿಸಿದನು.

ರಾಮರಾಯನು ರಾಜಧಾನಿಯನ್ನೆಲ್ಲಾ ವಶಪಡಿಸಿಕೊಂಡು ಪರಿಸ್ಥಿತಿ ಯೆಲ್ಲವೂ ಶಾಂತವಾದ ಮೇಲೆ, ಸದಾಶಿವರಾಯನಿಗೆ ವಿಜಯನಗರದ ಸಿಂಹಾಸನದ ಪಟ್ಟಾಭಿಷೇಕ ಮಾಡಿಸಿದನು. ರಾಮರಾಯನೂ ತಿರುಮಲ ರಾಯನೂ ಅಧಿಕಾರ ಸೂತ್ರಗಳನ್ನು ವಹಿಸಿಕೊಂಡರು.

---

# ಪ್ರಕಟಣೆಗಳು

| | | | ಬೆಲೆ |
|---|---|---|---|
| 1. | ನಗ್ನಸತ್ಯ | —ಅ ನ ಕೃ | ೧-೦೦ |
| 2. | ಶನಿಸಂತಾನ | — ,, | ೧-೫೦ |
| 3 | ಸಂಜೆಗತ್ತಲು | — ,, | ೧-೫೦ |
| 4 | ನಾಗರಹಾವು | —ತ ರಾ ಸು | ೧-೫೦ |
| 5. | ಮಿಣುಕುಹುಳ | —ನಿರಂಜನ | ೧-೫೦ |
| 6. | ವಿಲಾಸಿನಿ | — ,, | ೧-೫೦ |
| 7. | ಅಂಜನ | — ,, | ೧-೫೦ |
| | ( ವಿಲಾಸಿನಿ-ಮುಂದಿನ ಭಾಗ ) | | |
| 8. | ಕುಲವಧು | —ಕೃಷ್ಣಮೂರ್ತಿ ಪುರಾಣಿಕ | ೧-೫೦ |
| 9. | ಆಕಸ್ಮಿಕ | —ತ ರಾ ಸು | ೧-೫೦ |
| 10 | ಅಪರಾಧಿ | — ,, | ೧-೫೦ |
| | ( ಆಕಸ್ಮಿಕ-ಮುಂದಿನ ಭಾಗ) | | |
| 11. | ಸಂಗ್ರಾಮ | —ಅ ನ ಕೃ. | ೧-೫೦ |
| 12 | ಅಬಲಾ | —ನಾ ರಾಜಣ್ಣ | ೧-೫೦ |
| 13. | ಸ್ವರ್ಣವೃಷ್ಟಿ | —ವೀರಕೇಸರಿ | ೧-೫೦ |
| | ( ವಿಜಯನಗರದ ಇತಿಹಾಸಕ್ಕೆ ಸಂಬಂಧಪಟ್ಟದ್ದು ) | | |
| 14 | ಪರಿಣಾಮ | —ತ ರಾ ಸು | ೨-೨೫ |
| | ( ಆಕಸ್ಮಿಕ – ಅಪರಾಧಿಗಳ-ಮುಕ್ತಾಯ ಭಾಗ ) | | |
| 15. | ಕುಲಪುತ್ರ | —ಅ ನ. ಕೃ | ೬-೮೦ |
| 16. | ರಾಜನರ್ತಕಿ | —ಅ ನ ಕೃ. ರವರ (ಉಜ್ಜ್ವಲ ನಾಟಕ) | ೦-೭೫ |
| 17. | ಸಾಮ್ರಾಜ್ಯ ವೈಭವ | —ವೀರಕೇಸರಿ | ೧-೫೦ |
| 18. | ರಾಜದಂಡ | —ಎಂ ರಾಮಮೂರ್ತಿ | ೧-೫೦ |
| 19. | ಧರ್ಮಗ್ಲಾನಿ | —ವೀರಕೇಸರಿ | ೧-೫೦ |
| 20. | ಅಪರಂಜಿ | —ಅ ನ ಕೃ | ೨-೦೦ |
| 21. | ಅಭ್ಯುದಯ | —ವೀರಕೇಸರಿ | ೧-೫೦ |
| 22. | ಅಸ್ತಮಾನ | —ವೀರಕೇಸರಿ | ೧-೫೦ |

## ಮುಂದಿನ ಪ್ರಕಟಣೆ

ಕುಲಪುತ್ರ—ಭಾಗ ೨ —ಅ ನ. ಕೃ.

ರಘುನಾಥ ವಿಜಯ —ಶ್ರೀನಿವಾಸರಾವ್ ಕೊರಟಿ



ಶ್ರೀಮಾನ್ ವೀರಕೇಸರಿ ಸೀತಾರಾಮಶಾಸ್ತ್ರಿಗಳು ಹುಟ್ಟು ಕನ್ನಡಿಗರು. ಇವರ ಜನ್ಮಸ್ಥಳ ನಂಜನಗೂಡು. ಚಿಕ್ಕಂದಿನಲ್ಲಿಯೇ ಶೃಂಗೇರಿಯಲ್ಲಿ ಸಂಸ್ಕೃತ ವಿದ್ಯಾಭ್ಯಾಸಮಾಡಿದರು. ತರ್ಕಶಾಸ್ತ್ರದಲ್ಲಿಯೂ, ಸಾಹಿತ್ಯದಲ್ಲಿಯೂ ಶ್ರೀ ಶಾಸ್ತ್ರಿಗಳು ಉದ್ಧಾಮ ಪಂಡಿತರು.

ವೀರಕೇಸರಿಯವರು ಕನ್ನಡ ಜನತೆಗೆ ಹೊಸಬರಲ್ಲ. ಮೈಸೂರಿನ ರಾಜಕೀಯದಲ್ಲಿ ಇವರು ಮೊದಲಿಗರು. ಕನ್ನಡದಲ್ಲಿ ಕನ್ನಡನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಅನೇಕಾನೇಕ ಚಾರಿತ್ರಿಕ ಕಾದಂಬರಿಗಳನ್ನು ಬರೆದು ಪ್ರಖ್ಯಾತರಾಗಿದ್ದಾರೆ.

ಹುಬ್ಬಳ್ಳಿ